# ಇಸಾಪನ ನೀತಿಯ ಕತೆಗಳು.



## ಪೂರ್ವಾರ್ಧ.

---

ಭಾಷಾಂತರ ಕರ್ತರು

**ಕೌಜಲಗಿ ಬಂಡೇರಾಯರು,**

**ವ್ಯವಸ್ಥಾಪಕ ಕರ್ಮವೀರ ಧಾರವಾಡ.**

ಮುದ್ರಕ-ಪ್ರಕಾಶಕ

**ಶಂಕರ ನರಹರ ಜೋಶಿ,**

ಚಿತ್ರಶಾಳಾಪ್ರೆಸ್ ಸದಾಶಿವಪೇಟೆ ೧೦೨೬, ಪುಣೆ.



೧೯೨೮.

ಬೆಲೆ ೧ ರೂಪಾಯಿ.

# ಮುನ್ನುಡಿ.

“ ಇಸಾಪನೀತಿ ” ಯೆಂಬ ಪುಸ್ತಕವು ಮೊದಲು ಗ್ರೀಕ ಭಾಷೆಯಲ್ಲಿಯದು. ಇದರ ಭಾಷೆಯು ಸುಂದರ ಮತ್ತು ಸರಲವಾದದ್ದು; ಆದ್ದರಿಂದಲೇ ಜಗದಲ್ಲಿಯ ಅನೇಕ ಭಾಷೆಗಳಲ್ಲಿ ಈ ಪುಸ್ತಕದ ...ರ್ತನೆಯಾಯಿತು. ಇಂಗ್ಲಿಷ ಭಾಷೆಯಲ್ಲಿ ಈ ಪುಸ್ತಕವು ಸಚಿತ್ರವಾಗಿ ಬಹು ಸೊಗಸಾಗಿದೆ. ಅಂತ ...ತ ಪುಸ್ತಕವು ಈ ವರೆಗೆ ಪ್ರಸಿದ್ಧವಾಗಿದ್ದಿಲ್ಲವಾದ್ದರಿಂದ ಕನ್ನಡ ಬಾಲಕರಿಗೆ ಬೋಧಪ್ರದವಾಗುವಂ... ಪುಸ್ತಕದಲ್ಲಿ ೨೬೨ ಕತೆಗಳನ್ನು ಕನ್ನಡಿಸಿ ಮುದ್ರಿಸಿರುತ್ತದೆ. ಇದರದೇ ಇನ್ನೊಂದು ಭಾಗವೂ ಕನ್ನ... ...ಟ್ಟದೆ. ಇಂಥ ಕತೆಗಳನ್ನು ಓದುವ ಸವಿಯನ್ನು, ಎಲ್ಲ ಕನ್ನಡಿಗರೂ ತಮ್ಮ ಮಕ್ಕಳಿಗೆ ಹಚ್ಚಿ, ಲಾ... ಪಡೆಯಬೇಕೆಂದು ನನ್ನ ಬಲುಮೆಯ ಬೇಡಿಕೆಯು.

ಕೌಜಲಗಿ ಬಂಡೇರಾಯರು
ಭಾಷಾಂತರಕಾರ.

## ಅನುಕ್ರಮಣಿಕೆಯು.



* ಇಂಥ ಹೂವಿನ ಚಿನ್ಹಗಳು ಇದ್ದ ಪುಟದಲ್ಲಿ ಚಿತ್ರಗಳನ್ನು ಹಾಕಿರುತ್ತದೆ.

* ಇಂಥ ಹೂವಿನ ಚಿನ್ನಗಳು ಇದ್ದ ಪುಟದಲ್ಲಿ ಚಿತ್ರಗಳನ್ನು ಹಾಕಿರುತ್ತದೆ.

---

* ಇಂಥ ಹೂವಿನ ಚಿನ್ಹಗಳು ಇದ್ದ ಪುಟದಲ್ಲಿ ಚಿತ್ರಗಳನ್ನು ಹಾಕಿರುತ್ತದೆ.

* ಇಂಥ ಹೂವಿನ ಚಿನ್ಹಗಳು ಇದ್ದ ಪುಟದಲ್ಲಿ ಚಿತ್ರಗಳನ್ನು ಹಾಕಿರುತ್ತದೆ.

* ಇಂಥ ಹೂವಿನ ಚಿನ್ಹಗಳು ಇದ್ದ ಪುಟದಲ್ಲಿ ಚಿತ್ರಗಳನ್ನು ಹಾಕಿರುತ್ತದೆ.

# ಇಸಾಪನ ಸಂಕ್ಷಿಪ್ತ ಚರಿತ್ರವು.



ಇವನು ಕ್ರಿಸ್ತೀಶಕದ ಪೂರ್ವದಲ್ಲಿ ಸುಮಾರು ೬೨೦ ವರುಷಗಳ ಹಿಂದೆ ಗ್ರೀಸ ದೇಶದ ಸಾಮೋಸ ಎಂಬ ದ್ವೀಪದಲ್ಲಿ ಯವನಜಾತಿಯ ಗುಲಾಮ ಮನೆತನದಲ್ಲಿ ಹುಟ್ಟಿದನು. ಇವನು ಚಿಕ್ಕಂದಿನಲ್ಲಿ ಓದು ಬರಹಗಳನ್ನು ಚನ್ನಾಗಿ ಕಲಿತನು. ಮುಂದೆ ಇವನು ದೊಡ್ಡವನಾದಬಳಿಕ ಇವನ ಯಜಮಾನನು ಇವನನ್ನು ಬೇರೊಬ್ಬನಿಗೆ ಮಾರಿದನು. ಎರಡನೆಯ ಯಜಮಾನನು ಇಸಾಪನ ಬುದ್ಧಿಕೌಶಲ್ಯಕ್ಕೆ ಮೆಚ್ಚಿ ದಾಸ್ಯವೃತ್ತಿಯಿಂದ ಬಿಡುಗಡೆಮಾಡಿದನು. ಬಳಿಕ ಇವನು ಸ್ವತಂತ್ರನಾದ ಮೇಲೆ ಏಶಿಯಾಖಂಡದ ಪಶ್ಚಿಮಭಾಗದೊಳಗಿನ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ತಿರುಗಾಡಿ ಲೀಢಿಯದೇಶದ ರಾಜಧಾನಿಯಾದ ಸರ್ದಿಸ್ ಪಟ್ಟಣಕ್ಕೆ ಬಂದನು. ಅಲ್ಲಿಯ ಅರಸನಾದ ಕ್ರೋಯಿಸೆಸ್ ಎಂಬವನು ವಿದ್ವಾಂಸರಿಗೆ ಆಶ್ರಯವನ್ನು ಕೊಡುತ್ತಿದ್ದುದರಿಂದ ಇಸಾಪನನ್ನು ತನ್ನ ಆ ಸ್ಥಾನದಲ್ಲಿ ಇಟ್ಟುಕೊಂಡನು. ಬಳಿಕ ಅರಸನು ಇವನನ್ನು ತನ್ನಲ್ಲಿ ರಾಯಭಾರಿಯನ್ನಾಗಿ ನಿಯಮಿಸಿಕೊಳ್ಳಲು ಇವನು ಕೋರಿಂಥ ಅಥೆನ್ಸ ಮುಂತಾದ ಪಟ್ಟಣಗಳಲ್ಲಿ ಸಂಚರಿಸಿ ಆಯಾ ನಿವಾಸಿಗಳಿಗೆ ಅನೇಕ ನೈತಿಕ ಕಥೆಗಳನ್ನು ಸದುಪದೇಶಿಸಿ ಅವರಲ್ಲಿ ರಾಜಭಕ್ತಿಯನ್ನು ನೆಲೆಗೊಳಿಸಿದನು. ಇದರಿಂದಂತೂ ಅರಸನು ಇವನನ್ನು ವಿಶೇಷವಾಗಿ ಪ್ರೀತಿಸಹತ್ತಿದನು.

ಅರಸನು ಡೆಲ್ಫಿ ಪಟ್ಟಣದ ನಿವಾಸಿಗಳಿಗೆ ಹಂಚಿಕೊಡುವದಕ್ಕಾಗಿ ಬಹಳ ಹಣವನ್ನು ಇಸಾಪನ ಕೈಯಲ್ಲಿ ಕೊಡಲು ಆ ನಿವಾಸಿಗಳು ದ್ರವ್ಯಾಶೆಗಾಗಿ ಸಿಕ್ಕಂತೆ ವರ್ತಿಸಹತ್ತಲು ಅದನ್ನು ಕಂಡು ಇಸಾಪನು ಆ ಹಣವನ್ನು ಅರಸನಿಗೆ ತಿರುಗಿ ಕಳುಹಿಸಿಕೊಟ್ಟನೆಂತಲೂ ಆ ಸಿಟ್ಟಿನಿಂದ ಅವರು ಇವನ ಪ್ರಾಣವನ್ನು ತೆಗೆದುಕೊಂಡರೆಂತಲೂ ಒಂದೆಡೆಯಲ್ಲಿ ಕಥೆಯಿರುವದು. ಇವನು ಸತ್ತಬಳಿಕ ಗ್ರೀಕ ಭಾಷೆಯಲ್ಲಿದ್ದ ಇವನ ಎಲ್ಲ ಕಥೆಗಳನ್ನು ಒಟ್ಟುಗೂಡಿಸಿ ಒಂದು ದೊಡ್ಡ ಗ್ರಂಥವನ್ನೇ ಮಾಡಿದರು. ಇವನ ಕಥೆಗಳಿಂದ ಇವನು ವ್ಯವಹಾರ ಚತುರನೂ ರಾಜ ನೀತಿಜ್ಞನೂ ಇದ್ದನೆಂದು ಕಂಡುಬರುತ್ತದೆ. ಈ ಕಥೆಗಳು ಬಹು ಮನೋಹರವಾಗಿ ಇದ್ದುದರಿಂದ ಬೇರೆ ಬೇರೆ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟು ವಿದ್ವಜ್ಜನಮಾನ್ಯವಾಗಿದೆ. ಇವನು ಸತ್ತಬಳಿಕ ಸುಮಾರು ಇನ್ನೂರು ವರ್ಷಗಳ ಮೇಲೆ ವಿದ್ಯಾ ಪಕ್ಷಪಾತಿಗಳಾದ ಕೆಲ ಜನರು ಲಿಸಿಪ್ಪನೆಂಬ ಪ್ರಖ್ಯಾತ ಶಿಲ್ಪಿಯಿಂದ ಒಂದು ದೊಡ್ಡ ಪ್ರತಿಮೆಯನ್ನು ಮಾಡಿಸಿ ಶಾರದಾಜನ್ಮಗೃಹವೆಂಬ ಉಪನಾಮವನ್ನು ಹೊಂದಿ ಹೆಸರು ಪಡೆದ ಅಥೆನ್ಸ ಪಟ್ಟಣದಲ್ಲಿ ಸ್ಥಾಪಿಸಿದರು. ಆ ಪಟ್ಟಣದ ನಿವಾಸಿಗಳು ಈವತ್ತಿಗೂ ಅವನ ಕಥೆಗಳನ್ನು ವ್ಯವಹಾರದಲ್ಲಿ ಉಪಯೋಗಿಸಿಕೊಳ್ಳುವರು.

ಕೌಜಲಗಿ ಬಂಡೇರಾವ.

# ಇಸಾಪನ ನೀತಿಯ ಕತೆಗಳು.

## ೧— ಗರುಡವೂ ಗೂಗೆಯೂ.



ಒಂದು ಗರುಡವೂ ಗೂಗೆಯೂ, ಒಂದಕ್ಕೊಂದು ಬಹು ದಿನಗಳಿಂದ ಜಗಳಾಡುತ್ತಿದ್ದವು. ಒಂದುದಿನ ಅವೆರಡೂ ತಮ್ಮ ತಮ್ಮೊಳಗೆ ಮಾತನಾಡಿಕೊಂಡು ಪ್ರೀತಿಯಿಂದಿರುವ ಬಗ್ಗೆ ಆಣೆಯಿಟ್ಟುಕೊಂಡವು; ಮತ್ತು ಒಂದು ಇನ್ನೊಂದರ ಮರಿಗಳನ್ನು ತಿನ್ನಬಾರದೆಂದೂ ನಿಶ್ಚಯಿಸಿಕೊಂಡವು. ಆಗ ಗರುಡಪಕ್ಷಿಯನ್ನು ಕುರಿತು ಗೂಗೆಯು ಅಂದದ್ದು:— "ಗೆಳೆಯಾ, ನನ್ನ ಮರಿಗಳು ಹೇಗೆ ಇರುತ್ತವೆಂಬುದು ನಿನಗೆ ಗೊತ್ತಿದೆಯೇ? ಗೊತ್ತಿರದಿದ್ದರೆ, ಮತ್ತಾವದೋ ಪಕ್ಷಿಯ ಮರಿಗಳು ಇರುವವೆಂದು ತಿಳಿದು ನೀನು ನನ್ನ ಮರಿಗಳನ್ನು ತಿಂದುಬಿಟ್ಟೀ ಎಂದು ಹೆದರಿಕೆ ಆಗುತ್ತದೆ.

ಗರುಡ ಪಕ್ಷಿಯು:—"ನಿಜವಾಗಿ ನಿನ್ನ ಮರಿಗಳು ಹೇಗೆ ಇರುತ್ತವೆಂಬುದು ನನಗೇನೂ ಗೊತ್ತಿಲ್ಲ."

ಗೂಗೆಯು:— “ ಹಾಗಾದರೆ ಕೇಳು. ನನ್ನ ಮರಿಗಳು ನೋಡಲಿಕ್ಕೆ ಬಹು ಸುಂದರ; ಅವುಗಳ ಕಣ್ಣು, ಶಬ್ದ, ರೆಕ್ಕೆ, ಎಲ್ಲವೂ ಮನೋಹರವಾಗಿರುತ್ತವೆ. ನನ್ನ ಹೇಳಿಕೆಯಿಂದ ನನ್ನ ಮರಿಗಳು ಯಾವವು ಎಂಬುದು ನಿನಗೆ ತಿಳಿದಿರಬಹುದು.” ಆ ಮೇಲೆ ಒಂದಾನೊಂದುದಿನ, ಒಂದು ಗಿಡದ ಹೊದರಿನಲ್ಲಿ ಗರುಡಪಕ್ಷಿಗೆ ಗೂಗೆಯ ಮರಿಗಳು ಕಂಡವು. ಅವುಗಳನ್ನು ನೋಡಿ ಅದು ಅಂದದ್ದು:— “ ಈ ಮರಿಗಳು ಎಷ್ಟು ಕೆಟ್ಟ, ಹೊಲಸು, ಮತ್ತು ಮುಗ್ಗಲಾಗಿವೆ; ಇವು ಯಾರ ಮರಿಗಳಿರಬಹುದು? ನಾನು ಹಿಂದಕ್ಕೆ ಗೂಗೆಯನ್ನು ಕೇಳಿದಾಗ ತನ್ನ ಮರಿಗಳು ಬಹು ಅಂದವಾಗಿರುತ್ತವೆಂದು ಗೂಗೆಯು ಹೇಳಿತ್ತು; ಅಂದಮೇಲೆ ಇವು ಗೂಗೆಯ ಮರಿಗಳಲ್ಲವೆಂಬುದು ಖಂಡಿತ. ಇವುಗಳನ್ನು ತಿನ್ನಲಿಕ್ಕೆ ನನಗೇನೂ ಅನುಮಾನವೆನಿಸುವದಿಲ್ಲ;” ಹೀಗೆಂದು ಆ ಗರುಡಪಕ್ಷಿಯು ಆ ಗೂಗೆಯ ಮರಿಗಳನ್ನು ತಿಂದುಬಿಟ್ಟಿತು.

ತನ್ನ ಮರಿಗಳು ಕಾಣದಂತಾದ್ದರಿಂದ ಗೂಬೆಯು (ಗೂಗೆಯು) ಗರುಡಪಕ್ಷಿಯನ್ನು ಕುರಿತು ಅಂದದ್ದು:— “ ಗೆಳೆಯಾ, ನೀನೇ ನನ್ನ ಮರಿಗಳನ್ನು ತಿಂದುಬಿಟ್ಟಿರುವಿಯಲ್ಲವೇ? ನಿಜವಾಗಿ ಹೇಳು !” ಅದಕ್ಕೆ ಗರುಡ ಪಕ್ಷಿಯು:— “ ನಾನು ತಿಂದಿರುವದೇನೋ ನಿಜ; ಆದರೆ ಅದು ನನ್ನ ತಪ್ಪಲ್ಲ. ನೀನು ನಿನ್ನ ಮರಿಗಳು ಬಹು ಅಂದವಾಗಿರುತ್ತವೆಂದು ಬಣ್ಣಿಸಿ ಹೇಳಿದಿ; ಅದ್ದರಿಂದ ನಿನ್ನ ಮರಿಗಳು ಯಾವವೆಂಬುದು ನನಗೆ ಚನ್ನಾಗಿ ತಿಳಿಯಲಿಲ್ಲ. ಮತ್ತು ಗೂಗೆಯ ಮರಿಗಳು ಇಷ್ಟು ಮುಗ್ಗಲಗೇಡಿ ಇರಲಿಕ್ಕಿಲ್ಲ, ಇವು ಮತ್ತ್ಯಾವದೋ ಪಕ್ಷಿಯ ಮರಿಗಳಾಗಿರಬಹುದೆಂದು ನಾನು ಕೊಂದು ತಿಂದುಬಿಟ್ಟೆ. ಇದರಲ್ಲಿ ನನ್ನದೇನು ತಪ್ಪು? ಹೇಳು !”

ಸಾರಾಂಶ— ನಮ್ಮ ನಿಜಸಂಗತಿಯನ್ನು ನಾವು ಬಿಚ್ಚಿ ಹೇಳದಿದ್ದರೆ, ಹಲವುಸಾರೆ ನಾವೇ ಮೋಸಹೋಗುವೆವು.

---

## ೨— ಸಿಂಹವೂ ಕತ್ತೆಯೂ.



ಒಂದು ಕೊಬ್ಬಿದ ಕತ್ತೆಯು ಒಂದು ಸಿಂಹಕ್ಕೆ ಸುಮ್ಮ ಸುಮ್ಮನೇ ಬೈದುಕೊಂಡಿತು. ತನಗೆ ಕತ್ತೆ ಬೈಯುವದನ್ನು ಕೇಳಿ ಸಿಂಹವು ಬಲು ರೇಗಿತು. ಆದರೆ ಕತ್ತೆಯು ತನಗೆ ಬೈಯ್ಯುತ್ತಿರುವದನ್ನು ಕಂಡು ಸಿಂಹವು ತಾಳಿಕೊಂಡು, ಆ ಕತ್ತೆಯನ್ನು ಕಣ್ಣೆತ್ತಿಸಹ ನೋಡದೆ, ಅದರೊಡನೆ ಮಾತನಾಡದೆ ತನ್ನಷ್ಟಕ್ಕೆ ತಾನು ಹೊರಟುಹೋಯಿತು.

ಸಾರಾಂಶ— ದೊಡ್ಡವರು ಕೀಳರ ಬೈಗಳನ್ನು ಲಕ್ಷಿಸುವದಿಲ್ಲ.

---

## ೩— ನರಿಯು, ಅಡವೀಬೆಕ್ಕು ಮತ್ತು ಮೊಲವು.



ಒಂದು ಅಂಜುಬುರುಕ ಮೊಲವು ಒಂದು ಹೊದರಿನಲ್ಲಿರುತ್ತಿತ್ತು; ಒಂದಾನೊಂದು ದಿನ ಒಂದು ನರಿಯು ತನ್ನನ್ನು ತಿನ್ನಬೇಕೆಂದು ಹೊಂಚುಹಾಕಿಕೊಂಡು ತನ್ನ ಹೊದರಿನ ಹತ್ತರ ಕುಳಿತಿರುವದನ್ನು ಅದು ಕಂಡಿತು. ಆದರೂ ಹೊದರಿನ ಬಾಯಿಯು ಚಿಕ್ಕದಿರುವದರಿಂದ ನರಿಯು ಹೊದರಿನಲ್ಲಿ ಸೇರಲಾರದೆಂದು ತಿಳಿದು ಅದರ ಹೆದರಿಕೆ ಸ್ವಲ್ಪ ಕಡಿಮೆಯಾಯಿತು. ಮುಂದೆ ಒಂದಾನೊಂದು ದಿನ ನರಿಯು ಅಡವೀಬೆಕ್ಕಿನೊಡನೆ ಸಲಿಗೆಯಿಂದ ಮಾತಾಡುತ್ತಿದ್ದುದನ್ನು ಮೊಲವು ಕಂಡಿತು. ಇನ್ನು ತನ್ನ ಗತಿಯು ನೆಟ್ಟಗಾಗುವದಿಲ್ಲವೆಂದು ಮೊಲವು ತಿಳಿದುಕೊಂಡಿತು. ಕೆಲಹೊತ್ತಿನ ಮೇಲೆ, ಆ ಅಡವೀಬೆಕ್ಕು ಮೊಲದ ಹೊದರಿನಲ್ಲಿ ಹೊಕ್ಕು ತನ್ನ ಉಗುರುಗಳಿಂದ ಹರಿದುಕೊಳಹತ್ತಿತು. ಆಗ ಮೊಲವು ತನ್ನ ಜೀವ ಉಳಿಸಿಕೊಳ್ಳಲಿಕ್ಕೆಂದು ತನ್ನ ಹೊದರಿನಿಂದ ಹೊರಕ್ಕೆ

ಬಂದಿತು. ಕೂಡಲೇ, ಹೊರಮಗ್ಗಲು ಹೊಂಚು ಹಾಕಿಕೊಂಡು ಕುಳಿತಿರುವ ನರಿಯು ಅದನ್ನು ಹಿಡಿದು ಕೊಂದಿತು. ಅಡವೀಬೆಕ್ಕು ಮತ್ತು ತಾನು ಮೊಲದ ಮಾಂಸವನ್ನು ತಿಂದು ತೇಗಿದವು. ಸಾಯುವಾಗ್ಗೆ ಮೊಲವು ಅಂದದ್ದು— "ದುಷ್ಟರಾದ ನಿಮ್ಮಿಬ್ಬರ ಗೆಳೆತನ ಕೂಡಿದ್ದು ಕಂಡಾಗಲೇ ನಾನಿನ್ನು ಬದುಕುವದು ಅಸಾಧ್ಯವೆಂದು ನಾನು ತಿಳಿದುಕೊಂಡೆ."

ಸಾರಾಂಶ:— ತನ್ನ ವೈರಿಗಳಿಬ್ಬರ ಗೆಳೆತನವಾಯಿತೆಂದರೆ, ತನ್ನ ಸಾವ-ಕಾಲವು ಸಮೀಪಿಸಿತೆಂಬದು ನಿಶ್ಚಿತ.

———

## ೪— ಕತ್ತೆಯೂ ಅದರ ಕ್ರೂರ ಒಡೆಯನೂ.



ಒಂದು ಕತ್ತೆಯು ಬಹು ತಾಳ್ಮೆಯುಳ್ಳದ್ದಿತ್ತು. ಅದರ ಒಡೆಯನು ಅದರಿಂದ ಮಿತಿಮೀರಿ ದುಡಿಸಿಕೊಳ್ಳುತ್ತಿದ್ದನು. ಇಷ್ಟಾದರೂ ಅದಕ್ಕೆ ಸಾಕಾಗುವಷ್ಟು ಹೊಟ್ಟೆಗೆ ಹಾಕುತ್ತಿರಲಿಲ್ಲ. ಇದೇ ಮೇರೆಗೆ ಆ ಕತ್ತೆಯು ಅನೇಕ ವರ್ಷಗಳವರೆಗೆ ತನ್ನ ಒಡೆಯನಲ್ಲಿ ದುಡಿಯಿತು. ಮುಂದೆ ಅದು ಮುಪ್ಪಾಗಲು, ಒಂದಾನೊಂದು ದಿನ ಅದರ ಒಡೆಯನು ಭಾರವಾದ ಒಜ್ಜೆಯನ್ನು ಅದರ ಬೆನ್ನಿನಮೇಲೆ ಹೇರಿದನು. ಇದರಿಂದಂತೂ ಅದರ ಅವಸಾನವೇ ತೀರಿ ಹೋಯಿತು. ದಾರಿಯಾದರೂ ತೆಗ್ಗುಮುಗ್ಗಿನದಿದ್ದದರಿಂದ ನಾಲ್ಕು ಹೆಜ್ಜೆ ದಾರಿಹಿಡಿದು ನಡೆಯುವದರೊಳಗಾಗಿ ಒಂದೆಡೆಯಲ್ಲಿ ಆ ಕತ್ತೆಯು ಎಡವಿ ಬಿದ್ದುಕೊಂಡಿತು. ಹೀಗಾಗಿ ಅದರ ಬೆನ್ನ ಮೇಲೆ ಹೇರಿದ ಮಣ್ಣಿನ ಪಾತ್ರೆಗಳೆಲ್ಲ ಒಡೆದು ಚೂರು ಚೂರಾಗಿಬಿದ್ದವು. ತನ್ನ ಪಾತ್ರೆಗಳ ನಷ್ಟವಾಯಿತೆಂದು ಆತನು ಬಹು ರೇಗಿ ಅದನ್ನು ಮನಬಂದಂತೆ ಹೊಡೆಯಹತ್ತಿದನು. ಆಗ ಆ ಮುದಿಕತ್ತೆಯು ಬಿದ್ದ ಹಾಗೆಯೇ, ತನ್ನ ಗೋಣು ಮೇಲಕೆತ್ತಿ ಅಂದದ್ದು:— "ಎಲೋ ಕೃತಘ್ನನೇ! ಅದರೆ ಈ ನಷ್ಟಕ್ಕೆಲ್ಲ ನೀನೇ ಕಾರಣನು; ಮೊದಲಿನಿಂದಲೂ, ನೀನು ನನ್ನ ಹೊಟ್ಟೆಗೆ ಸಾಕಷ್ಟು ಹಾಕದೆ, ನನ್ನನ್ನು ಮೈಮುರಿ ದುಡಿಸಿಕೊಂಡಿ; ಇದೀಗ ಅದರ ಫಲವು.!"

ಸಾರಾಂಶ— ತಮ್ಮನ್ನು ಪ್ರಾಮಾಣಿಕತನದಿಂದ ಸೇವಿಸುವವರಿಗೂ ಅನೇಕ ಕಲ್ಲೆದೆಯವರು ಕಾಡಲು ಹಿಂಜರಿಯುವದಿಲ್ಲ.

———

## ೫— ಕಾಡಹಂದಿಯೂ ಕತ್ತೆಯೂ.





ಒಂದು ಅಡವೀ ಹಂದಿಗೂ ಕತ್ತೆಗೂ ಒಂದು ದಿವಸ ಬಾಯಿಗೆ ಬಾಯಿ ಹತ್ತಿತು. ಬೆಳೆಯುತ್ತ ಬೆಳೆಯುತ್ತ ಈ ಬಾಯಿಲಗ್ಗೆಯು ಕೈವರೆಗೆ ಹೋಯಿತು. ತನ್ನ ಕೋರೆಹಲ್ಲುಗಳಿಂದಲೂ, ದೊಡ್ಡ ತಲೆಯಿಂದಲೂ, ಕತ್ತೆಯನ್ನು ನೋಡ ನೋಡುವಷ್ಟರಲ್ಲಿ ಕೆಡವಿ ಬಿಡುವೆನೆಂಬುವ ಹೆಮ್ಮೆಯಿಂದ ಕಾಡಹಂದಿಯು ಕತ್ತೆಯ ಮೇಲೇರಿಹೋಯಿತು. ಈ ವರೆಗೆ ಕತ್ತೆಯು ಹಂದಿಯಕಡೆಗೆ ಮುಖ ಮಾಡಿಕೊಂಡು ನಿಂತಿತ್ತು. ಆದರೆ ಕಾಡಹಂದಿಯ ಹದನವಾದ ಕೋರೆಗಳ ಮುಂದೆ ತನ್ನ ಆಟವು ಸಾಗಲಿಕ್ಕಿಲ್ಲೆಂದು ಕತ್ತೆಯು ಹಂದಿಯಕಡೆಗೆ ತನ್ನ ಬೆನ್ನು ತಿರುವಿ, ಹಿಂಗಾಲಿನಿಂದ ಒದೆಯಲಾರಂಭಿಸಿತು. ಆಗ ಕಾಡಹಂದಿಗೇನೂ ತೋಚದಂತಾಗಿ, ಅದು ಕತ್ತೆಗೆ ಅಂದದ್ದು:—" ಎಲೋ, ಹೀಗೆ ಒದೆಯುವದೇನೂ ಧರ್ಮಯುದ್ಧವೆನಿಸಲಾರದು. ನನಗೆ ಎದುರಾಗುವದನ್ನು ಬಿಟ್ಟು, ನೀನು ಹಿಂಗಾಲಿನಿಂದ ಒದೆಯುವಿ ಎಂಬುವದು ನಾನು ಕನಸು ಮನಸಿನಲ್ಲಿ ಕೂಡ ನೆನಿಸಿರಲಿಲ್ಲ.! "

ಸಾರಾಂಶ— ತಾನೇ ಹೆಚ್ಚಿನ ಬಲಶಾಲಿಯೆಂದು ಯಾರೂ ತಿಳಿಯಬಾರದು.



ಹೊರಪ
## ಇಲಿಯೂ ಚುಚುಂದ್ರಿಯೂ.



ಅಶಕ್ತ ಹಾಗೂ ಹಸಿದಂಥ ಒಂದು ಇಲಿಯಿತ್ತು. ಅದು ಒಂದು ಕಾಳಿನ ಕಣಜಕ್ಕೆ ಬಿದ್ದ ತೂತಿನೊಳಗೆ ಹೊಕ್ಕು ಬಹು ದಿನ ಕಣಜದಲ್ಲಿಯೇ ಇದ್ದುಕೊಂಡಿತು. ಮತ್ತು ಬೇಕಾದಷ್ಟು ಕಾಳು ತಿಂದು ಕೊಬ್ಬಿದ್ದರಿಂದ ಮೊದಲು ಕಣಜದೊಳಗೆ ಹೊಕ್ಕ ತೂತಿನೊಳಗಿಂದ ಹೊರಗೆ ಬರಲಿಕ್ಕಾಗದೆ ಒಳಗೇ ಒದ್ದಾಡುತ್ತಿತ್ತು. ಅದರ ಈ ಒದ್ದಾಟವನ್ನು ಒಂದು ಚುಚುಂದ್ರಿಯು ನೋಡುತ್ತಿತ್ತು. ಅದು ಇಲಿಗೆ ಅಂದದ್ದು— " ಈ ಕಣಜದೊಳಗಿಂದ ಹೊರಗೆ ಬರಲಿಕ್ಕೆ ಒಂದೇ ಒಂದು ಉಪಾಯವಿರುತ್ತದೆ. ಅದು ಯಾವುದೆಂದರೆ, ನೀನು ಮೊಟ್ಟಮೊದಲು ತೂತಿನೊಳಗಿಂದ ಸೇರುವಾಗ ಹೇಗೆ ಬಡಕನಾಗಿದ್ದಿಯೋ ಹಾಗೇ ಬಡಕನಾದರೇನೇ ನೀನು ಹೊರಬೀಳುವಿ. "

ಸಾರಾಂಶ— ಮುಂದಾಲೋಚನೆಯಿಲ್ಲದೆ ಮನುಷ್ಯನು ಅತ್ಯಾಸೆಗೊಂಡರೆ ಕಷ್ಟಕ್ಕೆ ಗುರಿಯಾಗುವನು.

— — — —

## ೭— ಗಿಡವೂ ಕೊಡ್ಲೆಯ ಕಾವೂ.



ಒಬ್ಬ ಕಟ್ಟಿಗೆ ಕಡಿಯುವವನು ಅಡವಿಯೊಳಗಿರುವ ಒಂದು ದೊಡ್ಡ ಮರವನ್ನು ಕಡಿಯುತ್ತಿದ್ದನು. ಕಡಿಯುವಿಕೆಯಿಂದ ಗಿಡಕ್ಕೆ ಬಹು ನೋವಾಗತೊಡಗಿತು. ಆಗ ಗಿಡವು ತನ್ನೊಳಗೆ ತಾನು ಅಂದದ್ದು— " ನನ್ನ ದುರದೃಷ್ಟವೆಂತಹದು ! ನನ್ನನ್ನು ಕಡಿಯಲಿಕ್ಕೆ ಕಾರಣವಾದ ಈತನದಾಗಲಿ, ಆ ಕೊಡ್ಲೆಯದಾಗಲಿ ಏನೂ ತಪ್ಪಿಲ್ಲ; ಆದರೂ, ನನ್ನ ದೇಹದಿಂದಲೇ ಕಡಿದು ತೆಗೆದು ಮಾಡಿದ ಈ ಕಾವು ನನ್ನನ್ನು ಕಡಿಯಲಿಕ್ಕೆ ಈ ಕೊಡ್ಲೆಗೆ ನೆರವಾಗುವದನ್ನು ನೋಡಿ ನನಗೆ ಬಹು ವ್ಯಸನವಾಗುತ್ತದೆ. "

ಸಾರಾಂಶ— ತನ್ನವರೆಂಬುವವರು ತನ್ನ ನಾಶಕ್ಕೆ ಕಾರಣವಾಗುವಂಥ ದುಃಖದಾಯಕ ಸಂಗತಿಯು ಮತ್ತೊಂದಿಲ್ಲ.

— — — —

## ೮— ಕತ್ತೆ, ಮಂಗ ಮತ್ತು ಚುಚುಂದ್ರಿಯು.



ಒಂದು ಕತ್ತೆ ಹಾಗೂ ಒಂದು ಮಂಗ ಇವೆರಡೂ ಒಂದು ದಿನ ಒಂದಕ್ಕೊಂದು ತಮ್ಮ ಸುಖ ದುಃಖಗಳನ್ನು ತೋಡಿಕೊಳ್ಳುತ್ತ ಕುಳಿತಿದ್ದವು. ಆಗ ಕತ್ತೆಯು ಅಂದದ್ದು:—" ಉದ್ದವಾಗಿರುವ ನನ್ನ ಕಿವಿಗಳನ್ನು ನೋಡಿ ಎಲ್ಲರೂ ನಗುತ್ತಾರೆ; ಮೇಲಾಗಿ ಎತ್ತಿನಂತೆ ನನಗೆ ಕೋಡುಗಳೂ ಇಲ್ಲ." ಇದಕ್ಕೆ ಮಂಗವು ಅಂದದ್ದು:— "ನನ್ನ ಗತಿಯನ್ನಾದರೂ ಏನೆಂದು ಹೇಳಲಿ! ಉದ್ದೋ ಉದ್ದವಾದ ನನ್ನ ಬಾಲವನ್ನು ಕಂಡು ನನಗೇ ನಾಚಿಕೆಯಾಗುತ್ತದೆ. ನರಿಯಂಥ ಬಾಲವು ನನಗಿದ್ದರೆ ಎಷ್ಟು ಚನ್ನಾಗುತ್ತಿತ್ತು ? " ಇವೆರಡೂ ಆಡುತ್ತಿರುವ ಮಾತುಗಳನ್ನು ಕುಳಿತುಕೊಂಡು ಕೇಳುತ್ತಿದ್ದ ಚುಚುಂದ್ರಿಯು:— " ನೀವು ಸುಮ್ಮ ಸುಮ್ಮನೆ ಗುಣುಗುಟ್ಟುತ್ತೀರಿ; ನನ್ನನ್ನು ನೋಡಿದರೆ, ನಿಮ್ಮ ಪಾಡು ಎಷ್ಟು ಚನ್ನಾಗಿದೆಯೆಂಬುವದು ನಿಮಗೆ ಕಂಡುಬರುವದು; ಚುಚುಂದ್ರಿಗಳಾದ ನಮಗೆ ಕೋಡುಗಳಂತೂ ಇಲ್ಲೇ ಇಲ್ಲ; ಬಾಲವಿದ್ದರೂ ತೀರ ಮೊಂಡ; ಸಾಲದ್ದಕ್ಕೆ ಅದು ನಮ್ಮ ಕಣ್ಣಿಗೂ ಸಾಕಷ್ಟು ಕಾಣಿಸುವದಿಲ್ಲ. "

ಸಾರಾಂಶ— ದೇವರು ತಮಗೆ ಕೊಟ್ಟದ್ದರಿಂದಲೇ ಮನುಷ್ಯನು ತೃಪ್ತನಾಗಿರಬೇಕು.

## ೯— ಹಂದಿಯೂ ತೋಳವೂ.



ಒಂದು ಹಂದಿಯು ಅದೇ ತಾನೇ ಈದಿತ್ತು. ತನ್ನ ಮರಿಗಳನ್ನು ಕಟ್ಟಿಕೊಂಡು ಹುಲ್ಲಿದ್ದ ಸ್ಥಳದಲ್ಲಿ ಕುಳಿತಿರಲು, ಅವುಗಳಲ್ಲಿ ಒಂದಾದರೂ ಮರಿಯು ಬಾಯಾಡಿಸಲಿಕ್ಕೆ ಸಿಗಬಹುದೇನೋ ನೋಡಬೇಕೆಂದು ಒಂದು ತೋಳವು ಅಲ್ಲಿಗೆ ಬಂದಿತು. ಸುತ್ತುಮುತ್ತು ನೋಡಿ ತನ್ನೊಳಗೆ ತಾನೇ:— " ಏನಾದರೊಂದು ಕಳ್ಳಾಟಿಕೆ ನಡಿಸದೆ ನನ್ನ ಕಾರ್ಯಸಾಧಿಸದು; ಎಂದು ಯೋಚಿಸಿಕೊಂಡು, ಅದು ಹೆಣ್ಣು ಹಂದಿಯನ್ನು ಕುರಿತು ಅಂದದ್ದು:— " ತಂಗೀ ಈ ದಿನ ನಿನ್ನ ಮೈಯಲ್ಲಿ ಚನ್ನಾಗಿರುವಂತೆ ಕಾಣುವದಿಲ್ಲ; ಕೊಂಚ ಗಾಳಿಗೆ ಹೋಗಿ ಅಡ್ಡಾಡಿಬಂದರೆ, ನಿನಗೆ ಹಾಯವೆನಿಸಬಹುದು; ನಿನ್ನಿಷ್ಟವಿದ್ದರೆ, ನೀನು ಅಲೆದಾಡಿಕೊಂಡು ಬರುವತನಕ ನಾನು ನಿನ್ನ ಮರಿಗಳ ಕ್ಷೇಮಸಮಾಚಾರ ನೋಡಿಕೊಳ್ಳುವೆ. " ಆಗ ಹೆಣ್ಣು ಹಂದಿಯು:— " ನೀನು ನನಗೋಸ್ಕರ ಇಷ್ಟೊಂದು ಚಿಂತೆವಹಿಸಿ ಮಾತನಾಡಿದ್ದಕ್ಕಾಗಿ ನಾನು ನಿನಗೆ ಕೃತಜ್ಞನಾಗಿರುವೆನು. ನಾನು ಅಲೆದಾಡಲು ಹೋದನಂತರ, ನೀನು ನನ್ನ ಮರಿಗಳನ್ನು ಹೇಗೆ ಕಾಪಾಡುವಿ ಎಂಬುವದನ್ನು ನಾನು ಚನ್ನಾಗಿ ಬಲ್ಲೆ. ನಿನ್ನ ಸ್ವಾರ್ಥಸಾಧಿಸಿಕೊಳ್ಳುವದಕ್ಕಾಗಿ ಮೇಲೆ ಮೇಲೆ ಪರೋಪಕಾರದ ಮಾತನಾಡುವದಕ್ಕಿಂತ ನೀನು ನಿಜವಾಗಿಯೇ ಪರೋಪಕಾರಿಯಾದರೆ, ನೀನು ತಿರುಗಿ ಈ ಡಂಭಕವೇಷದಿಂದ ನನ್ನ ಕಡೆಗೆ ಎಂದೂ ಬರಲಾರೆ.

ಸಾರಾಂಶ— ಮೇಲೆ ಒಳ್ಳೇ ಎದೆಕರಗುವಂಥ ಮಾತನಾಡಿ, ಒಳಗಿಂದೊಳಗೆ ಕುತ್ತಿಗೆ ಕೊಯ್ಯುವ ಮನುಷ್ಯನನ್ನು ನಂಬಕೂಡದು.

## ೧೦-- ಕಾಗೆಯೂ ಕಪ್ಪೆಯಚಿಪ್ಪೂ ( ಸಿಂಪೂ. )



ಒಂದು ಕಾಗೆಯು, ಸಮುದ್ರ ದಂಡೆಯಲ್ಲಿ ತಿರುಗಾಡುತ್ತಿರುವಾಗ ಅದಕ್ಕೊಂದು ಕಪ್ಪೆಯಚಿಪ್ಪು ದೊರಕಿತು. ಅದರೊಳಗಿನ ಮಾಂಸವನ್ನು ತೆಗೆದು ತಿನ್ನಬೇಕೆಂದು ಕಾಗೆಯು ಅದನ್ನು ಕಲ್ಲಿಗೆ ಬಡಿಯಹತ್ತಿತು. ಹತ್ತರವೇ ಒಂದು ಕಪಟಿಯಾದ ಸಂಬರಗಾಗೆಯು ಕೂತಿತ್ತು. ಅದು ಕಾಗೆಯ ಹತ್ತರಕ್ಕೆ ಬಂದು ಅಂದದ್ದು:-- " ಗೆಳೆಯನೇ! ಬರಿಯ ಕಲ್ಲಿಗೆ ಹೊಡೆಯುವದರಿಂದ ಇದು ಒಡೆಯಲಾರದು; ಆದ್ದರಿಂದ ನಾನು ಹೇಳಿದಂತೆ ಮಾಡು; ಏನಂದರೆ, ಈ ಚಿಪ್ಪನ್ನು ಬಾಯಲ್ಲಿ ಕಚ್ಚಿಕೊಂಡು ಮೇಲಕ್ಕೆ ದೂರ ಹಾರಿ, ಅಲ್ಲಿಂದ ಹಾಗೇ ಅದನ್ನು ಕೆಳಗೆ ಬಿಟ್ಟುಬಿಡು; ಅಂದರೆ ಅದು ಹೊಡತದಿಂದ ಸಾಯುವದು. " ಕಾಗೆಯು ಈ ಮಾತನ್ನು ನಂಬಿ, ಮೇಲಕ್ಕೆ ಹಾರಿ ಅದನ್ನು ಕೆಳಗೆ ಒಗೆಯಿತು. ಅದು ಕೆಳಗೆ ಬಿದ್ದೊಡನೆ ಸಂಬರಗಾಗೆಯು ಅದನ್ನು ಕಚ್ಚಿಕೊಂಡು ಪಲಾಯನ ಮಾಡಿತು.

ಸಾರಾಂಶ— ಮೋಸಗಾರರನ್ನು ನಂಬಲಾಗದು.

## ೧೧— ಪಶು, ಪಕ್ಷಿ, ಮತ್ತು ಶಹಾಮೃಗ.

ಒಮ್ಮೆ ಪಶುಪಕ್ಷಿಗಳಿಗೆ ಲಗ್ಗೆ ಹತ್ತಿರಲು, ಪಕ್ಷಿಗಳೆಲ್ಲ ಕೂಡಿ ಶಹಾಮೃಗವನ್ನು ಸೆರೆಹಿಡಿದುಕೊಂಡೊಯ್ದವು. ಮತ್ತು ಅದು ಪಶು ಇರುವದೆಂದು ತಿಳಿದು ಅದನ್ನು ದಂಡಿಸಬೇಕೆಂದು ಯೋಚಿಸಿದವು. ಇಷ್ಟರಲ್ಲಿ ಶಹಾಮೃಗವು— "ಗೆಳೆಯರೇ! ನಾನು ಪಶುವಲ್ಲ; ನಿಮ್ಮಂತೆ ಪಕ್ಷಿ ನಾನು; ಬೇಕಾದರೆ ನನ್ನ ರೆಕ್ಕೆ ಹಾಗೂ ಚುಂಚನ್ನು ನೋಡಿಕೊಳ್ಳಿ." ಶಹಾಮೃಗವಾಡಿದ ಮಾತು ಪಕ್ಷಿಗಳಿಗೆ ಒಪ್ಪಿದ್ದರಿಂದ, ಅವು ಅದನ್ನು ಹಾಗೇ ಬಿಟ್ಟವು. ಅದೇ ದಿನ ಪಶುಗಳು ಶಹಾಮೃಗವನ್ನು ತೆಗೆದುಕೊಂಡು ಹೋದವು. ಮತ್ತು ಅದು ಪಕ್ಷಿ ಇರುವದೆಂದು ವೈರಿಯಂತೆ ನಡೆಸಿಕೊಂಡವು. ಆಗ ಶಹಾಮೃಗವು "ಮಿತ್ರರೇ! ನಾನು ಪಕ್ಷಿಯಲ್ಲ; ಪಶುವೇ ಇದ್ದೇನೆ; ಇಗೊಳ್ಳಿ! ನನ್ನ ಕಾಲುಗಳು ನಿಮ್ಮಂತೆಯೇ ಇಲ್ಲವೇ?" ಶಹಾಮೃಗದ ಈ ಮಾತು ಪಶುಗಳಿಗೂ ಒಪ್ಪಿದ್ದರಿಂದ ಅವೂ ಅದನ್ನು ಬಿಟ್ಟವು.

ಸಾರಾಂಶ:— ಎರಡೂ ದಂಡೆಯ ಮೇಲೆ ಕೈಯಿಡುವದು ಒಮ್ಮೊಮ್ಮೆ ಲಾಭದಾಯಕವಾದರೂ, ಎಷ್ಟೋ ಸಾರೆ ಅದು ಅಪಾಯಕರವಿರುತ್ತದೆ.

---

## ೧೨— ಕುದುರೆಯೂ ಕಾಡ ಹಂದಿಯೂ.

ನೀರಡಿಸಿದಂಥ ಒಂದು ಕುದುರೆಯು ಹಳ್ಳಕ್ಕೆ ನೀರು ಕುಡಿಯಲು ಹೋಗಿರಲು, ಹಳ್ಳದೊಳಗೆ ಒಂದು ಕಾಡ ಹಂದಿಯು ನೀರಾಟವಾಡುತ್ತಿರುವದನ್ನು ಕಂಡಿತು. ಆ ಕಾಡ ಹಂದಿಯು ಕುದುರೆಗೆ ನೀರಿನ ಹತ್ತರ ಬರಗೊಡದ್ದರಿಂದ, ಅವೆರಡಕ್ಕೂ ಜಗಳ ಹತ್ತಿತು. ಕಾಡ ಹಂದಿಯ ಸೊಕ್ಕು ಮುರಿಯುವದಕ್ಕಾಗಿ ಕುದುರೆಯು ಒಬ್ಬ ಮನುಷ್ಯನ ಸಹಾಯವನ್ನು ಕೋರಿತು. ಆ ಮನುಷ್ಯನು ಕುದುರೆಯ ಬಿನ್ನಹವನ್ನು ಮನ್ನಿಸಿ, ಕೈಯಲ್ಲಿ ಶಸ್ತ್ರ ತೆಗೆದುಕೊಂಡು, ಕುದುರೆ ಏರಿ, ಕಾಡ ಹಂದಿಯನ್ನು ದಂಡಿಸಲಿಕ್ಕೆಂದು ಹೊರಟನು. ಹಳ್ಳದ ಹತ್ತಿರಕ್ಕೆ ಹೋಗಿ, ಒಂದು ಬಾಣಬಿಟ್ಟು, ಆ ಕಾಡ ಹಂದಿಯನ್ನು ಕೊಂದುಹಾಕಿದನು. ತನ್ನ ಕಣ್ಮುಂದೆ ಶತ್ರುವಿನ ವೈಸೊಕ್ಕು ಮುರಿದುದನ್ನು ಕಂಡು ಕುದುರೆಯು ಬಲು ಹಿಗ್ಗಿ:— "ಸ್ವಾಮಿ, ನನ್ನ ಮೇಲೆ ನೀವು ಮಾಡಿದ ಉಪಕಾರವನ್ನು ನಾನೆಂದೂ ಮರೆಯಲಾರೆ; ಬಡವನ ಮೇಲೆ ದಯವಿರಲಿ; ಹೋಗಿ ಬರುವೆ;" ಅಂದಿತು. ಆದರೆ ಆ ಮನುಷ್ಯನು ಕುದುರೆಯನ್ನು ಹಾಗೆ ಹೋಗಗೊಡದೆ ಅಂದದ್ದು:— "ನಿನ್ನಿಂದ ನನಗೆ ಬಹಳ ಪ್ರಯೋಜನವಿರುವದರಿಂದ ನಾನು

ನಿನ್ನನ್ನು ನನ್ನ ಲಾಯಕ್ಕೆ ಒಯ್ದು ಕಟ್ಟುವೆನು." ಈ ಮಾತು ಕೇಳಿ, ಯಾವುದೇ ಒಂದು ಸಣ್ಣ ಮಾತಿಗಾಗಿ ಕೊನೆಯವರೆಗಿನ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡದ್ದಕ್ಕಾಗಿ ಕುದುರೆಗೆ ಬಹು ಪಶ್ಚಾತ್ತಾಪವಾಯಿತು.

ಸಾರಾಂಶ:— ಒಬ್ಬ ಶತ್ರುವಿನ ಮೈಸೊಕ್ಕು ಮುರಿಯಲಿಕ್ಕೆ ನಾವು ಮತ್ತೊಬ್ಬರ ಸಹಾಯ ಬೇಡಿದರೆ, ಆ ಸಹಾಯದಿಂದ ನಮ್ಮ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲದಂತೆ ನಾವು ಜಾಗರೂಕರಾಗಿರತಕ್ಕದ್ದು.

---

## ೧೩— ಆಡು, ಅದರ ಮರಿಯು ಮತ್ತು ತೋಳವು.



ಒಂದು ಆಡು ಬೆಳಿಗ್ಗೆ ಎದ್ದು, ಮೇಯಲಿಕ್ಕೆಂದು ಅಡವಿಗೆ ಹೋಯಿತು. ಆಗ ಆಡು ತನ್ನ ಮರಿಯನ್ನು ಕುರಿತು ಅಂದದ್ದು— "ಮಗೂ, ಮನೆಯ ಕದವನ್ನು ಇಕ್ಕಿಕೋ. ತೋಳಗಳ ವಂಶವೆಲ್ಲ ಹುರಿದುಹೋಗಲೆಂದು ಹೇಳಿದವರನ್ನೇ ಮಾತ್ರ ಒಳಗೆ ಕರೆದುಕೋ; ಮಿಕ್ಕವರನ್ನು ಒಳಗೆ ಬರಗೊಡಬೇಡ." ಕುರಿಯು ತನ್ನ ಮರಿಗೆ

ಹೇಳುವ ಈ ಮಾತನ್ನು ತೋಳವು ಮರೆಗೆ ನಿಂತು ಕೇಳಿ, ಕುರಿಯು ಹೊರಗೆ ಹೋದೊಡನೆ, ಬಾಗಿಲ ಹತ್ತರ ಬಂದು "ತೋಳಗಳೆಲ್ಲವೂ ಹಾಳಾಗಿ ಹೋಗಲಿ;" ಎಂದು ಅಂದಿತು. ಈ ಮಾತನ್ನು ಕೇಳಿ, ಕುರಿಮರಿಯು ಬಾಗಿಲ ತೆರೆಯಬಹುದೆಂದು ಅದಕ್ಕೆ ಅನಿಸಿತ್ತು; ಆದರೆ, ಕುರಿಮರಿಯು ಇದು ಯಾರ ಸ್ವರವಿರುವದೋ ಎಂದುಕೊಂಡು ಮೊದಲು ಬಾಗಿಲು ತೆರೆಯದೆ, ಕಿಟಕಿಯೊಳಗಿಂದಲೇ ಇಣಿಕಿ ಹಾಕಿ ನೋಡಿ ತೋಳವನ್ನು ಕುರಿತು ಅಂದದ್ದು— "ನೀನು ಆಡು ಇದ್ದರೆ, ನಿನಗೆ ಗಡ್ಡವೇಕಿಲ್ಲ?" ಇದನ್ನು ಕೇಳಿ ತೋಳವು ನಾಚಿಕೊಂಡು ಸುಮ್ಮನೆ ಬಂದ ದಾರಿಯಿಂದ ಹೊರಟುಹೋಯಿತು.

ಸಾರಾಂಶ:— ಮೋಸಗಾರರೊಡನೆ ಬಹು ಜಾಗರೂಕತೆಯಿಂದಿರಬೇಕು.

---

## ೧೪— ಕಟಿಕನೂ ನಾಯಿಯೂ.

ಒಬ್ಬ ಕಟಿಕರವನು ಒಂದು ದಿನ ಅಜಾಗರೂಕನಾಗಿ ತನ್ನ ಅಂಗಡಿಯಲ್ಲಿ ಕುಳಿತಿದ್ದನು. ಅಷ್ಟರಲ್ಲಿ ಒಂದು ನಾಯಿಯು ಅವನ ಅಂಗಡಿಯಲ್ಲಿ ಹೊಕ್ಕು, ಮಾಂಸದ ದೊಡ್ಡದೊಂದು ಕರಣಿಯನ್ನು ಕದ್ದೊಯ್ಯಿತು. ಇದನ್ನು ನೋಡಿ ಕಟಿಕರವನು ನಾಯಿಗೆ ಅಂದದ್ದು— "ನನ್ನಂಗಡಿಯಿಂದ ಮಾಂಸ ಕದ್ದೊಯ್ದು ನೀನು ನನಗೆ ಕಲಿಸಿದ ಪಾಠವನ್ನು ನಾನೆಂದೂ ಮರೆಯಲಾರೆ."

ಸಾರಾಂಶ:— ಕಳಕೊಂಡು ಬುದ್ಧಿಗಲಿತದ್ದನ್ನು ಮನುಷ್ಯನೆಂದೂ ಮರೆಯುವದಿಲ್ಲ.

---

## ೧೫— ಗಿಳಿಯೂ ಗುಬ್ಬಚ್ಚಿಯೂ (ಗುಬ್ಬಿಯೂ).

ಒಂದು ಚಿಕ್ಕ ತೋಟದಲ್ಲಿರುವ ಗಿಳಿಗೂ ಗುಬ್ಬಚ್ಚಿಗೂ ಗೆಳೆತನ ಕೂಡಿತು. ಗುಬ್ಬಿಯು ತೋಟದೊಳಗೆ ಅತ್ತಿತ್ತ ಹಾರ್ಯಾಡಿ ತನ್ನ ಆಹಾರವನ್ನು ದೊರಕಿಸಿ, ಆಗಾಗ್ಗೆ ಗಿಳಿಯನ್ನು ಕಾಣಲಿಕ್ಕೆ ಹೋಗುತ್ತಿತ್ತು. ಗುಬ್ಬಚ್ಚಿಯ ಈ ಪ್ರೇಮದ ಸ್ವಭಾವ ಕಂಡು ಗಿಳಿಗೆ ಬಹು ಆನಂದವಾಯಿತು. ಒಂದು ದಿನ ಗಿಳಿಯು ತನ್ನ ತಾಯಿಯನ್ನು ಕುರಿತು:— "ಅಮ್ಮಾ, ಈ ಗುಬ್ಬಚ್ಚಿಯು ಎಷ್ಟು ಒಳ್ಳೆಯವಳಿರುವಳು! ನೋಡಮ್ಮ!" ಎಂದು ಅಂದಿತು. ಈ ಮಾತಿಗೆ ಗಿಳಿಯ ತಾಯಿಯು:— ನಿಜ; ಆದರೆ ನಿನ್ನಂಥ ಹುಚ್ಚಿಯು ನೀನೇ ಸರಿ; ಈ ಗುಬ್ಬಚ್ಚಿಯು ನಿನಗೆ ಇಂದು ಒಳ್ಳೆಯವಳೆಂದು ಕಾಣಬಹುದು: ಆದರೆ ನಾಳೆ ಚಳಿಗಾಲ ಪ್ರಾರಂಭವಾದಾಗ ಗಿಡಗಳ ಎಲೆಗಳೆಲ್ಲವೂ

ಉದುರಿಹೋಗಿ ಗಿಡ ಬೋಲ್ಡಾಗುವವು; ಆ ಕಾಲಕ್ಕೆ ಮೈಗೆ ಮರೆಯಿಲ್ಲದೆ ನೀನು ಚಳಿಯಿಂದ ನಡುಗುತ್ತಿರಲು, ಈ ನಿನ್ನ ಪ್ರೇಮದ ಗೆಳತಿಯು ನಿನ್ನಿಂದ ಸಾವಿರಾರು ಮೈಲುಗಳ ಮೇಲೆ ಎಲ್ಲಿಯಾದರೂ ತನ್ನಷ್ಟಕ್ಕೆ ತಾನು ಸುಖವಾಗಿರಲಿಕ್ಕೆ ಹೋಗುವಳು, ಕಂಡ್ಯಾ ”

ಸಾರಾಂಶ:— ಮನುಷ್ಯನ ಸ್ವಭಾವ ಪರೀಕ್ಷೆಯಾಗದೆ ಒಮ್ಮೆಲೆ ಸ್ನೇಹ ಬೆಳಿಸುವದು ಹಿತವಲ್ಲ.

---

## ೧೬— ಆಡು ಮತ್ತು ಕಾಗೆ.

ಒಂದು ಕಾಗೆಯು ಒಂದು ಆಡಿನ ಬೆನ್ನ ಮೇಲೆ ಕುಳಿತುಕೊಂಡು ತನ್ನ ಚುಂಚಿನಿಂದ ಆಡಿನ ಬೆನ್ನು ಕುಕ್ಕ ಹತ್ತಿತು. ಆಗ ಆಡು ಅದನ್ನು ಕುರಿತು :—“ ನೀನು ನನ್ನ ಬೆನ್ನು ಕುಕ್ಕುವಂತೆ ನಾಯಿಯ ಬೆನ್ನು ಕುಕ್ಕು ನೋಡೋಣ; ಅಂದರೆ ಮಾತ್ರ ನಿನಗೆ ಎದೆಗಾರನೆನ್ನುವೆ ” ಅಂದಿತು. ಈ ಮಾತಿಗೆ ಕಾಗೆಯು:— “ ಒಬ್ಬನಿಗೆ ತೊಂದರೆ ಕೊಡುವಮೊದಲು ಅವನಿಂದ ನನಗೇನಾದರೂ ತೊಂದರೆಯಾಗುವದು ಹೇಗೋ ಎಂದು ನಾನು ಮುಂದಾಲೋಚನೆ ಮಾಡುವದುಂಟು. ಜಗಳಗಂಟರ ತಂಟೆಗೆ ನಾನೆಂದೂ ಹೋಗುವದಿಲ್ಲ. ಆದರೆ ಸುಮ್ಮನೆ ತಾಳಿಕೊಂಡಿರುವವರಿಗೆಂದೂ ತೊಂದರೆ ಕೊಡದೆ ಬಿಡುವದಿಲ್ಲ.




ಸಾರಾಂಶ— ಒಬ್ಬರನ್ನು ಪೀಡಿಸುವವನೇ ಇನ್ನೊಬ್ಬರಿಗೆ ಹೆದರುತ್ತಿರುತ್ತಾನೆಂಬುವದನ್ನು ಮರೆಯಲಾಗದು.

## ೧೭— ಕತ್ತೆಯೂ ತೋಳವೂ.

ಒಂದು ಕತ್ತೆಯು ಕಾಡಿನಲ್ಲಿ ಅಲೆಯುತ್ತಿರುವಾಗ ಅದಕ್ಕೆ ಕಾಲಲ್ಲಿ ಮುಳ್ಳು ನಟ್ಟಿತು. ತನ್ನ ತನಗೇ ಆ ಮುಳ್ಳು ತೆಗೆಯಲಿಕೆಬರದೆ ಪೇಚಾಡುತ್ತಿರುವಷ್ಟರಲ್ಲಿ ಅತ್ತಕಡೆಯಿಂದ ಒಂದು ತೋಳವು ಬರುತ್ತಿರುವದನ್ನು ಅದು ಕಂಡಿತು. ಆಗ ತೋಳವನ್ನು ಕುರಿತು ಕತ್ತೆಯು—“ ವೈದ್ಯರಾಜರೇ! ನನ್ನ ಕಾಲಿನಲ್ಲಿ ನಟ್ಟಿರುವ ಈ ಮುಳ್ಳನಷ್ಟು ತಾವು ದಯವಿಟ್ಟು ತೆಗೆದರೆ, ನಾನು ತಮಗೆ ಕೃತಜ್ಞನಾಗಿರುವೆನು; ” ಅಂದಿತು. ಕತ್ತೆಯ ಮಾತನ್ನು ತೋಳವು ಮನ್ನಿಸಿ, ತನ್ನ ಹಲ್ಲುಗಳಿಂದ ಕತ್ತೆಯ ಕಾಲಲ್ಲಿ ನಟ್ಟ ಮುಳ್ಳನ್ನು ತೆಗೆಯಿತು. ಮುಳ್ಳು ಹೊರಗೆ ಬಂದದ್ದೊಂದೇತಡ: ದುಷ್ಟಸ್ವಭಾವದ ಆ ಕತ್ತೆಯು ತೋಳನಿಗೆ ಬಲವಾಗಿ ತನ್ನ ಹಿಂಗಾಲಿನಿಂದ ಒದೆ ಕೊಟ್ಟಿತು. ಈ ಏಟಿನಿಂದ ತೋಳವು ನೆಲಕ್ಕೆ ಬಿದ್ದುಕೊಂಡಿತು. ಮತ್ತು ಇದನೆಲ್ಲ ಕಣ್ಣಾರೆ ನೋಡುತ್ತಲೇ ಕತ್ತೆಯು ತನ್ನ ದಾರೀ ಹಿಡಿಯಿತು.

ಸಾರಾಂಶ— ಕಷ್ಟಕಾಲಕ್ಕೆ ತನಗೆ ನೆರವಾದವರನ್ನು ತನ್ನ ಕಷ್ಟಕಾಲ ಹೋದೊಡನೆ, ಹೀಯಾಳಿಸಿ ಹಿಂಸಿಸುವಂಥ ನೀಚತನವು ಬಹು ನಿಂದ್ಯವಾದುದು.

— — — —

## ೧೮— ಒಕ್ಕಲಿಗನೂ ಕುರಿಗಳೂ.

ಒಂದಾನೊಂದು ಕಾಲಕ್ಕೆ ದೇಶದಲ್ಲೆಲ್ಲ ಬರಗಾಲವು ಬೀಳಲು, ಒಬ್ಬ ಒಕ್ಕಲಿಗನು ಕೋಳಿಯ ತತ್ತಿಯ ಮಾಂಸದಿಂದಲೇ ಅನೇಕ ದಿನ ತನ್ನ ಹೊಟ್ಟೆಪಾಡು ಸಾಗಿಸಿಕೊಂಡಿದ್ದನು. ತನ್ನಲ್ಲಿದ್ದ ಕೋಳಿಯ ತತ್ತಿಗಳು ತೀರುತ್ತ ಬಂದೊಡನೆ, ಅವನು ಕುರಿಮರಿಗಳನ್ನೇ ಕೊಂದು ಜೀವನ ಸಾಗಿಸಲಾರಂಭಿಸಿದನು. ಇದನ್ನು ನೋಡಿದಾಕ್ಷಣವೇ ಅವನು ಸಾಕಿರುವ ಆಡುಗಳೆಲ್ಲ ಒಂದಾಗಿ ಕಲೆತು, ಹೀಗೆ ಯೋಚಿಸಿದವು:— “ ಈಗಿದ್ದ ಕುರಿಗಳಷ್ಟು ಮುಗಿದವೆಂದರೆ, ನಮ್ಮ ಒಡೆಯನು ನಮ್ಮನ್ನೂ ಕೊಂದು ತಿನ್ನುವವನೇ ಸರಿ. ಆದುದರಿಂದ ಅಂಥ ಪ್ರಾಣಸಂಕಟ ಬರುವ ಮೊದಲೇ ನಾವು ಇಲ್ಲಿಂದ ಕಾಲ್ಕೆಗೆಯುವದು ಒಳ್ಳೇದು. ” ಈ ಯೋಚನೆಯು ಎಲ್ಲರಿಗೂ ಒಪ್ಪಿತವಾದನಂತರ, ಆ ಆಡುಗಳೆಲ್ಲವೂ ಅದೇ ದಿನ ಸಂಧಿಸಾಧಿಸಿ ಅಲ್ಲಿಂದ ಓಡಿಹೋದವು.

ಸಾರಾಂಶ— ಮುಂದೆ ಒದಗುವ ಸಂಕಟವನ್ನು ಮೊದಲೇ ತಿಳಿದುಕೊಂಡು, ಅದರಿಂದ ಪಾರಾಗಲು ಹಂಚಿಕೆ ನಡಿಸುವವನೇ ಜಾಣನು.

———— ————

## ೧೯— ಅಡವೀಬೆಕ್ಕು ಮತ್ತು ಕಣಕಪ್ಪಡೆ.



ಒಂದು ಅಡವಿಯ ಬೆಕ್ಕಿನ ಕೈಗೆ ಒಂದು ಕಣಕಪ್ಪಡೆ ಸಿಕ್ಕಿತು. ಆಗ ತನ್ನನ್ನು ಬಿಡಲು ಅದು ಅಂಗಲಾಚಿ ಬೇಡಿಕೊಂಡಿತು. ಅದನ್ನು ಕೇಳಿ, ಬೆಕ್ಕು ಅಂದದ್ದು:— ಹಾಗೆಂದೂ ಆಗದು; ನನ್ನ ಕೈಗೆ ಸಿಕ್ಕಿರುವ ಪಕ್ಷಿಯನ್ನು ನಾನೆಂದೂ ಜೀವಂತ ಬಿಡುವದಿಲ್ಲ ಕಂಡ್ಯಾ! ” ಅದಕ್ಕೆ ತಿರಿಗಿ ಕಪ್ಪಡಿಯು ಅಂದದ್ದು— “ ಆದರೆ ಸ್ವಾಮಿ, ನಾನು ಪಕ್ಷಿಯಲ್ಲ;— ನಾನೊಂದು ಪಶು; ನನ್ನ ಮುಖವು ಇಲಿಯಂತೆ ಕಾಣುವದಿಲ್ಲವೇ ನಿಮಗೆ ? ” ಇವನ್ನು ಕೇಳಿದೊಡನೆ, ಆ ಬೆಕ್ಕು ಅದನ್ನು ಬಿಟ್ಟಿತು. ಮುಂದೆ ಕೆಲ ದಿನಗಳಾದನಂತರ, ಮತ್ತೊಂದು ಅಡವಿ ಬೆಕ್ಕಿನ ಕೈಗೆ ಅದು ಸಿಕ್ಕುಕೊಂಡಿತು. ಆ ಬೆಕ್ಕು ಇಲಿಯ ಹೆಸರೆತ್ತಿದೊಡನೆ ಬಹು ರೇಗುತ್ತಿತ್ತು. ಆಗ ಅದನ್ನು ಕುರಿತು ಕಣಕಪ್ಪಡಿಯು ಕೈಮುಗಿದು ಬೇಡಿಕೊಂಡಿದ್ದು:— “ ಅಪ್ಪಾ, ಬಡವನಾದ ನನ್ನನ್ನು ದಯವಿಟ್ಟು ಬಿಡು; ಪ್ರಾಣದಾನ ಕೊಡು. ” ಅದಕ್ಕೆ ಬೆಕ್ಕು ಅಂದದ್ದು.— “ ನೀನು ಇಲಿಯಂತೆ ಕಾಣಿಸುತ್ತೀ! ಆದುದ

ರಿಂದ ನಾನು ನಿನ್ನನ್ನು ಬಿಡಲಾರೆ." ಕಣಕಪ್ಪಡಿ ಅಂದದ್ದು— "ಅಣ್ಣಯ್ಯನೇ ನಾನು ಇಲಿಯಲ್ಲ; ನಾನೊಂದು ಪಕ್ಷಿ; ಇಗೋ ನೋಡು ನನ್ನ ರೆಕ್ಕೆಗಳನ್ನು." ಈ ಮಾತನ್ನು ಕೇಳಿ ಅಡವೀಬೆಕ್ಕು ಅದನ್ನು ಬಿಟ್ಟುಬಿಟ್ಟಿತು.

ಸಾರಾಂಶ — ಪ್ರಾಣಕ್ಕೆ ಸಂಕಟ ಬಂದಾಗ ಜಾಣರಾದವರು ಹಂಚಿಕೆಯಿಂದ ಪಾರಾಗುವರು.

---

## ೨೦— ಅಂಗಡಿಕಾರನೂ ಇಬ್ಬರು ಹುಡುಗರೂ.

ಇಬ್ಬರು ಹುಡುಗರು ಒಂದು ಫಲಾಹಾರದ ಅಂಗಡಿಗೆ ಹೋದರು; ಅಂಗಡಿಕಾರನು ಬೇರೆ ಕೆಲಸದಲ್ಲಿ ತೊಡಗಿರುವದನ್ನು ನೋಡಿ, ಅವರಲ್ಲೊಬ್ಬನು ಮೆಲ್ಲಗೆ ಒಂದು ಉಂಡಿಯನ್ನು ಕದ್ದು ಬೇರೆಯವನ ಕೈಯಲ್ಲಿ ಕೊಟ್ಟನು; ಅವನದನ್ನು ತನ್ನ ಕಿಸೆಯ(ಜೇಬಿನ)ಲ್ಲಿ ಬಚ್ಚಿಟ್ಟನು. ತಟ್ಟೆಯೊಳಿಟ್ಟ ಉಂಡಿಯೊಳಗಿನ ಎಲ್ಲಕ್ಕೂ ಮೇಲಿನ ಉಂಡಿಯೇ ಇಲ್ಲದ್ದನ್ನು ಲಕ್ಷಿಸಿ, ಆ ಅಂಗಡಿಕಾರನು ಸಂದೇಹಪಟ್ಟು, ಅಂದದ್ದು:— "ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು ನನ್ನ ಉಂಡಿಯನ್ನು ಕದ್ದಿರುವದು ಖಂಡಿತ." ಈ ಮಾತು ಕೇಳಿದಾಕ್ಷಣವೇ ಕದ್ದ ಹುಡುಗನು "ದೇವರ ಆಣೆಯಿಂದ ಹೇಳುವೆನು; ನಿಮ್ಮ ಉಂಡಿಯನ್ನು ಕದ್ದಿಲ್ಲ ನಾನು." ಉಂಡಿಯನ್ನು ಕದ್ದು



ಕಿಸೆಯಲ್ಲಿಟ್ಟುಕೊಂಡವನು ಕೂಡ "ನಾನುನಿ

ಉಂಡಿಯನ್ನು ಕದ್ದಿಲ್ಲವೆಂಬೂ ಆಣೆಯಿಟ್ಟು ಹೇಳುವೆನು," ಎಂದು ಅಂದನು. ಇಷ್ಟಾದ ಮೇಲೆ ಅಂಗಡಿಕಾರನು ಅಂದದ್ದು:— "ನಿಮ್ಮಿಬ್ಬರಲ್ಲಿ ಯಾವನು ಉಂಡಿಯನ್ನು ಕದ್ದ ನೆಂಬುವದು ಹೇಳಲಿಕ್ಕೆ ಬರದಿದ್ದರೂ, ನಿಮ್ಮಿಬ್ಬರಲ್ಲಾರಾದರೊಬ್ಬರು ಕಳ್ಳರು ಇರಲಿ ಕ್ಕೇಬೇಕು; ಅಂತೂ ನೀವಿಬ್ಬರೂ ಮಹಾ ಠಕ್ಕರಿರುವಿರೆಂಬುದು ನನಗೆ ಮನದಟ್ಟಾಗಿದೆ.

ಸಾರಾಂಶ— ಮೋಸದಿಂದ ತುಂಬಿಕೊಂಡು ಸತ್ಯವೆಂದು ತೋರುವ ಮಾತುಗಳಾಡುವದು ಸರಿಯಾದದ್ದಲ್ಲ. ಆದರೆ ಆ ಸತ್ಯವು ಕಾರ್ಯದಲ್ಲಿಯೂ ಕಂಡು ಬರಲಿಕ್ಕೆಬೇಕು.

## ೨೧— ಕುರಿಯೂ, ಕುರಿಮರಿಯೂ ತೋಳವೂ.



ಒಂದು ಕುರಿಮರಿಯು ಒಂದು ಹೋತಿನೊಡನೆ ಮೇಯುತ್ತಿರಲು, ಒಂದು ತೋಳವು ಬಂದಿತು. ಕುರಿಯನ್ನು ಹೋತಿನಿಂದ ದೂರಕ್ಕೆ ಒಯ್ದು, ಕೊಂದು ತಿನ್ನಬೇಕೆಂಬ ಹಂಚಿಕೆಯಿಂದ ಅದು ಕುರಿಮರಿಗೆ ಅಂದದ್ದು:— "ತಮ್ಮಾ, ನೀನು ನಿಮ್ಮ ತಾಯಿಯ ಬಿಟ್ಟು ಬಂದದ್ದು ಬಹು ತಿಳಿಗೇಡಿತನದ ಕೆಲಸವಾಯಿತು! ಅಲ್ಲಿದ್ದರೆ ನಿನಗೆ ಹೊಟ್ಟೆತುಂಬ ಹಾಲು ಕುಡಿಯಲಿಕ್ಕೆ ಸಿಗಬಹುದಾಗಿತ್ತು. ಆದರೆ ಇಲ್ಲಿಯ ಕಾಡಿನಲ್ಲಿ ನಿನ್ನ ಹೊಟ್ಟೆಯ ಪಾಡು ಸಾಗುವದೆಂತು? ನೀನು ನಿನ್ನ ತಾಯಿಯ ಕಡೆಗೆ ಹೋಗಬೇಕೆಂದು ಅಪೇಕ್ಷೆಪಟ್ಟರೆ, ನಡೆ, ನಾನು ನಿನ್ನ ಜೊತೆಗೆ ಬಂದು ಕಳಿಸಿಬರುವೆನು." ತೋಳನ ಈ ಠಕ್ಕುತನದ ಮಾತು ಕೇಳಿ

ಕುರಿಮರಿಯು:— " ಸ್ವಾಮೀ, ನನ್ನಪ್ರಾಣಕ್ಕೆ ಅಪಾಯ ತಗಲಬಾರದೆಂಬ ಮುಂದಾಲೋಚನೆಯಿಂದಲೇ, ನನ್ನ ತಾಯಿಯು ಈ ಹೋತಿನೊಡನೆ ಕಳಿಸಿರುವಳು. ಈಗ ನೀವಂತೂ ನನ್ನನ್ನು ಮೋಸಗೊಳಿಸಿ ದೂರಕ್ಕೆ ಒಯ್ದು ತಿಂದು ತೇಗಬೇಕೆಂದಿರುವಿರಿ; ಅಂದಮೇಲೆ ನಾನು ನಿಮ್ಮಿಬ್ಬರಲ್ಲಿ ಯಾರನ್ನೆಂತು ನಂಬಲಿ! ಎಂಬುದನ್ನು ನೀನೇ ದಯವಿಟ್ಟು ನನಗೆ ತಿಳಿಹೇಳು! ಅಂದರೆ ಒಳಿತಾಗುವದು. ಎಂದು ಉತ್ತರ ಕೊಟ್ಟಿತು.

ಸಾರಾಂಶ— ಮೋಸಗಾರರ ಮೋಸವನ್ನು ಸ್ಪಷ್ಟವಾಗಿ ಬೈಲಿಗೆಳೆದು ಮಾತಾಡುವದರಿಂದ ಅನೇಕ ಸಲ ಅವರಿಗೇನೇ ನಾಚಿಕೆ ಹುಟ್ಟುವದು; ಅಲ್ಲದೆ ಹೀಗೆ ಬಾಯಿಬಿಚ್ಚಿ ಸತ್ಯ ನುಡಿಯುವವರಿಗೂ ಸುಖವಾಗುವದು.

## ೨೨— ಒಂಟೆಯ ಪ್ರಥಮದರ್ಶನ.

ಎಲ್ಲಕ್ಕೂ ಮೊದಲು ಜನರು ಒಂಟೆಯನ್ನು ನೋಡಿದಾಗ, ಅದರ ಬೆನ್ನ ಮೇಲಿನ ಎತ್ತರವಾದ ಇಣಿಯನ್ನು ಕಂಡು ಬಹು ಆಶ್ಚರ್ಯಗೊಂಡು, ಅವರು ಓಡಿ ಹೋದರು; ಆದರೆ ಮುಂದೆ ಒಂಟೆಯ ಒಳ್ಳೇತನವು ಜನರಿಗೆ ಕಂಡುಬಂದಾಗ, ಅವರು ನಿರ್ಭಯರಾದರು; ಇಷ್ಟೇ ಅಲ್ಲದೆ ಅದನ್ನು ಕೆಲಸಕ್ಕೆ ಹಚ್ಚಿದರು; ಬರಬರುತ್ತ ಒಂಟೆಯ ಈಲು ಸ್ವಭಾವವನ್ನು ತಿಳಿದುಕೊಂಡು ಜನರು ಅದರ ಮೇಲೆ, ದೊಡ್ಡ ದೊಡ್ಡ ಭಾರಗಳನ್ನು ಹೇರಿ. ಅದನ್ನು ಊರೂರಿಗೆ ತಿರುಗಿಸಲಾರಂಭಿಸಿದರು.

ಸಾರಾಂಶ— ಸಾಧು ಪ್ರಾಣಿಯು ಬಹು ಪರಿಚಿತವಾದರೆ ಇದೇ ಹಾಡಾಗುವದು.

## ೨೩— ಮುದಿಬೆಕ್ಕು ಮತ್ತು ಇಲಿಯು.

ಒಂದು ಬೆಕ್ಕು ಮುದಿಯಾಯಿತು; ಹೀಗಾಗಿ ಇಲಿ ಬೇಟೆಯಾಡುವಷ್ಟು ಅದರಲ್ಲಿ ಬಲ ಉಳಿಯಲಿಲ್ಲ; ಆಗ ಇನ್ನುಮುಂದೆ ಇಲಿಗಳನ್ನು ಹೇಗೆ ಹಿಡಿಯಬೇಕೆಂಬುವದೊಂದು ಸುಲಭವಾದ ಹಂಚಿಕೆಯನ್ನು ಅದು ಕಂಡು ಹಿಡಿಯಿತು. ತಾನಿರುವ ಮನೆಯಲ್ಲಿ ಇಲಿಗಳು ದಿನಾಲು ರಾತ್ರಿಯಲ್ಲಿ ಕಾಳುಕಡಿಯಿಟ್ಟ ಚೀಲಗಳನ್ನು ಹರಿದು ಕಾಳು ತಿನ್ನಲಿಕ್ಕೆ ಬರುತ್ತಿರುವ ಸಂಗತಿಯು ಅದಕ್ಕೆ ಜ್ಞಾಪಕವಾಯಿತು. ಈಹಂಚಿಕೆಯಿಂದ ಅದಕ್ಕೆ ಸಂತೋಷವಾಗಿ ಆ ಬೆಕ್ಕು ದಿನಾಲು ರಾತ್ರೆ ಕಾಳುಕಡಿಯ ಚೀಲಗಳಿಗೆ ಮರೆಯಾಗಿ ಹೊಂಚು ಹಾಕಿಕೊಂಡು ಕೂಡುತ್ತಿತ್ತು. ಈ ಸಂಗತಿಯನ್ನೆಲ್ಲ ಮತ್ತೊಂದು ಮುದಿಬೆಕ್ಕು ಕಂಡುಹಿಡಿದು ಮಿಕ್ಕ ಇಲಿಗಳಿಗೆಲ್ಲ ಹೇಳಿತು; ಹೀಗಾಗಿ ಒಂದು ಇಲಿಯೂ ಸಹ ಚೀಲದ ಬಳಿ ಬರಲಿಲ್ಲ.

ಸಾರಾಂಶ— ಎಷ್ಟು ಯುಕ್ತಿಮಾಡಿದರೂ ಠಕ್ಕತನವು ಬೈಲಿಗೆ ಬರದೆ ಹೋಗುವದಿಲ್ಲ.

## ೨೪-- ನರಿಯೂ ಕೋಳಿಯೂ.

ಒಬ್ಬ ಒಕ್ಕಲಿಗನು ನರಿಯನ್ನು ಹಿಡಿಯಲಿಕ್ಕೆಂದು ಒಂದು ಬಲಿ ಹಾಕಿಟ್ಟಿದ್ದನು; ಬೆಳಿಗ್ಗೆದ್ದು ನೋಡುವಷ್ಟರಲ್ಲಿ ಒಂದು ದೊಡ್ಡ ನರಿಯು ಅದರಲ್ಲಿ ಶಿಕ್ಕಿಕೊಂಡಿತ್ತು.



ಈ ತಮಾಶೆಯನ್ನು ದೂರಿಂದಲೇ ಒಂದು ಕೋಳಿಯು ನೋಡಿತು; ಆದರೆ ನರಿಯಂಥ ಠಕ್ಕ ಹಾಗೂ ದುಷ್ಟ ವೈರಿಯನ್ನು ನಂಬುವದು ವಿಹಿತವಲ್ಲೆಂದು ಮೆಲ್ಲಗೆ ಅಂಜಂಜುತ್ತ ಅದು ಆ ಬಲಿಯ ಹತ್ತರ ಬಂದು ನರಿಯನ್ನು ನೋಡುತ್ತ ನಿಂತುಕೊಂಡಿತು; ನರಿಯು ಕೋಳಿಯನ್ನು ನೋಡಿದಾಗ ತಾನು ಒಳ್ಳೇ ಸಂಭಾವಿತನಂತೆ ನಟಿಸಿ, ಅಂದದ್ದು:-- "ತಮ್ಮಾ! ನಾನು ಬಲಿಯಲ್ಲಿ ಶಿಕ್ಕಿಕೊಂಡಿರುವದನ್ನು ಕಂಡಿಯಾ! ಇದೆಲ್ಲವೂ ನಿನಗಾಗಿ. ನಿನ್ನನ್ನು ಕಂಡು ನಿನ್ನ ಕ್ಷೇಮ ಸಮಾಚಾರ ಕೇಳಿಕೊಂಡು ಹೋಗಬೇಕೆಂದು ನಾನು ಅತ್ತಕಡೆಗೆ ಹಾಯ್ದು ಹೋಗುವವನು ಇತ್ತ ಹಾಯ್ದೆನು; ಮತ್ತು ದಾರಿಯಲ್ಲಿ ಈ ಬಲೆಯಲ್ಲಿ ಬಿದ್ದುಕೊಂಡೆನು; ಇನ್ನು ಮಾತ್ರ ನೀನು ದಯವಿಟ್ಟು ನನಗೊಂದು ಚಿಕ್ಕ ಕಟ್ಟಿಗೆಯನ್ನು ತಂದು ಕೊಟ್ಟರೆ, ಸಾಕು; ನಾನು ಅದನ್ನು ಮೆಲ್ಲಗೆ ಈ ಬಲಿಯಲ್ಲಿ ಹಾಕಿ ನನ್ನ ಕಾಲನ್ನು ಬಿಡಿಸಿಕೊಳ್ಳುವೆನು. ಇಷ್ಟೊಂದು ಉಪಕಾರಮಾಡಿದರೆ,

ನಾನು ನಿನ್ನನ್ನೆಂದೂ ಮರೆಯಲಾರೆ. ” ಇದನ್ನು ಕೇಳಿ ಕೋಳಿಯು ಮನೆಗೆ ಹೋಗಿ, ನರಿಯು ಬಲಿಯಲ್ಲಿ ಬಿದ್ದ ಸಂಗತಿಯನ್ನು ತನ್ನ ಒಡೆಯನಿಗೆ ತಿಳಿಸಿತು; ಆ ಒಕ್ಕಲಿಗನು ದೊಡ್ಡದೊಂದು ಬಡಿಗೆಯನ್ನು ಕೈಯಲ್ಲಿ ತೆಗೆದುಕೊಂಡು ಬಂದು ಆ ನರಿಯನ್ನು ನೈಯಮುರಿ ಹೊಡೆದನು. ಇದರಿಂದ ಆ ನರಿಯು ಸತ್ತುಹೋಯಿತು.

---

## ೨೫— ಅತಿಆಶೆ ಗತಿಗೆಡಿಸಿತು.

ಒಬ್ಬ ಒಕ್ಕಲಿಗನ ಮನೆಯಲ್ಲಿ ಒಂದು ಸೀತಾಫಲದ ಗಿಡವಿತ್ತು. ಅದಕ್ಕೆ ಸವಿಯಾದ ಫಲಗಳಾಗುತ್ತಿದ್ದವು; ಒಂದು ಸಲ ಆವನು ತನ್ನ ಒಡೆಯನಿಗೆ ಕೆಲವು ಸೀತಾಫಲದ ಹಣ್ಣುಗಳನ್ನು ಒಯ್ದು ಕೊಟ್ಟನು. ಹಣ್ಣುಗಳು ಬಲು ಸವಿಯಿರುವದನ್ನು ಮನಗಂಡು ಒಡೆಯನು ಆ ಸೀತಾಫಲದ ಗಿಡವನ್ನು ಕಿತ್ತಿ ತಂದು ತನ್ನ ಮನೆಯ ಮುಂದೆ ಹಚ್ಚಿದನು. ಇದರಿಂದ ಆ ಗಿಡವು ಒಣಗಿಹೋಯಿತು. ಈ ಸಂಗತಿಯು ಆ ಒಕ್ಕಲಿಗನಿಗೆ ತಿಳಿದಾಗ ಆವನಂದದ್ದು:–– ಅತ್ಯಾಶೆಯ ಪರಿಣಾಮವು ಹೀಗೆ ಆಗುವದೆಂಬುದು ಕಟ್ಟಿಟ್ಟದ್ದೇಸರಿ! ನನ್ನ ಒಡೆಯನು ಆ ಸೀತಾಫಲ ಗಿಡವನ್ನು ನನ್ನ ಮನೆಯಲ್ಲಿಯೇ ಇರಗೊಟ್ಟಿದ್ದರೆ, ಅವನಿಗೂ ನನಗೂ ಕೂಡಿಯೇ ಅದರ ಸವಿಯಾದ ಫಲಗಳು ತಿನ್ನಲಿಕ್ಕೆ ಸಿಗುತ್ತಿದ್ದವು.

ಸಾರಾಂಶ— ಒಂದು ಸ್ಥಳದಲ್ಲಿ ಫಲದಾಯಕವಾಗುವ ವಸ್ತುವನ್ನು ಅತ್ಯಾಶೆಯಿಂದಾಗಲಿ ಸ್ವಾರ್ಥಬುದ್ಧಿಯಿಂದಾಗಲಿ ಬೇರೆಕಡೆಗೆ ಒಯ್ದರೆ ಅದರ ಪರಿಣಾಮವು ಮೇಲಿನಂತೆ ಆಗುವದು ನಿಜ್ಜವೇ!

---

## ೨೬–– ಕೂಲಿಕಾರಳೂ ಕೋಳಿಯೂ.

ಒಬ್ಬ ಕೂಲಿಕಾರಳ ಹತ್ತರ ಒಂದು ಕೋಳಿಯಿತ್ತು. ಅದು ಮೇಲು ಜಾತಿಯದಿದ್ದುದರಿಂದ ಅದರ ತತ್ತಿಗಳಿಗೆ ಹೆಚ್ಚಿಗೆ ಬೆಲೆಬರುತ್ತಿತ್ತು. ಒಂದಾನೊಂದುದಿನ ಆ ಕೂಲಿಕಾರಳು ತನ್ನಲ್ಲಿ ತಾನೇ ಹೀಗೆ ಯೋಚಿಸಿಕೊಂಡಳು. “ ಈ ಕೋಳಿಗೆ ಹೆಚ್ಚು ತಿನ್ನಲಿಕ್ಕೆ ಕೊಟ್ಟರೆ ದಿನಾಲು ಎರಡು ತತ್ತಿಗಳನ್ನು ಹಾಕಬಹುದು; ಅಂದರೆ ನನಗೆ ಹೆಚ್ಚು ಹಣ ಸಿಗುವದು. ” ಈ ಮೇರೆಗೆ ಆಲೋಚನೆಮಾಡಿ ಅವಳು ಆ ಕೋಳಿಗೆ ಹೆಚ್ಚು ತಿನ್ನಲಿಕ್ಕೆ ಹಾಕಹತ್ತಿದಳು; ಅದರಿಂದ ದಿನಕ್ಕೊಂದು ಬಗೆಯಿಂದ ಆ ಕೋಳಿಯು ಕೊಬ್ಬಿ ಮುಂದೆ ತತ್ತಿಗಳನ್ನು ಇಡದಂತಾಯಿತು.

ಸಾರಾಂಶ— ಹೆಚ್ಚು ಲಾಭವಾಗಬೇಕೆಂದು ದುರಾಶೆ ಪಟ್ಟರೆ, ಅನೇಕಸಲ ಇದ್ದದ್ದು ಕೂಡ ಕೈಬಿಟ್ಟು ಹೋಗುವ ಸಂಘರ್ಭವಿರುತ್ತದೆ.

## ೨೭— ಬೇಟೆಗಾರನೂ ಪಾರಿವಾಳವೂ.

ಒಂದಾನೊಂದು ದಿನ ಒಂದು ಪಾರಿವಾಳವು ಒಂದು ಅರಳಿಯ ಮರದ ಮೇಲೆ ಕುಳಿತಿರಲು, ಒಬ್ಬ ಬೇಟೆಗಾರನು ಬೇಟೆಯಾಡಲಿಕ್ಕೆಂದು ಅಲ್ಲಿಗೆ ಬಂದನು. ಅವನು ತನ್ನ ಬಂದೂಕಿನ ಗುರಿಯಿಟ್ಟು ಪಾರಿವಾಳಕ್ಕೆ ಹೊಡೆಯುವಷ್ಟರಲ್ಲಿ ಅವನ ಕಾಲ್ಕೆಳಗೆ ಅಪಿತುಕೊಂಡಿದ್ದ ಒಂದು ಹಾವು ಅವನನ್ನು ಕಚ್ಚಿತು. ಹಾವಿನ ವಿಷವು ಮೈಯಲ್ಲಿ ಛೇದಿಸಿ ಏರಹತ್ತಿದಾಕ್ಷಣವೇ ಆ ಬೇಟೆಗಾರನು ತನ್ನ ಕೈಯಲ್ಲಿಯ ಬಂದೂಕನ್ನು ಬೀಸಾಕಿ ಅಂದದ್ದು:— ಪರರನ್ನು ಕೊಲ್ಲಲು ಹವಣಿಸುತ್ತಿರುವ ನನಗೇ ದೇವರು ಹಾವಿನ ರೂಪದಿಂದ ದಂಡಿಸಿದನು.



ಸಾರಾಂಶ— ತಾನು ಇನ್ನೊಬ್ಬರಿಗೆ ಅಪಾಯಮಾಡುವಾಗ ತನಗೆ ಯಾರಾದರೂ ಅಪಾಯ ಮಾಡುತ್ತಿರುವರೆಂಬುದನ್ನು ಮರೆಯಕೂಡದು.

## ೨೮— ಚಿಕ್ಕ ಹಾಗೂ ದೊಡ್ಡ ಮೀನು.

ಒಂದು ದೊಡ್ಡ ಮೀನವು ಮರಿಮೀನವನ್ನು ನುಂಗಬೇಕೆಂದು ಬೆನ್ನಟ್ಟಿತ್ತು; ಇದನ್ನು ಕಂಡು ಮರಿಮೀನು ಹೆದರಿ ತನ್ನ ಜೀವ ಉಳಿಸಿಕೊಳ್ಳಲಿಕ್ಕೆಂದು ಚಿಕ್ಕದೊಂದು ನೀರಿನ ಗುಂಡಿಯಲ್ಲಿ ಸೇರಿಕೊಂಡಿತು; ಅಲ್ಲಿಯೂ ದೊಡ್ಡ ಮೀನು ಬಂದುದನ್ನು ಕಂಡು ಮರಿಮೀನು ಆ ಹೊಂಡದ ದಂಡೆಗೆ ಓಡಿತು; ಅಲ್ಲಿಯೂ ದೊಡ್ಡ ಮೀನು ಬರುವ

ದನ್ನು ನೋಡಿ ಮರಿಮೀನು ನೀರಿನ ಹೊರಗೆ ಬೈಲಿಗೆ ಬಂದಿತು. ದೊಡ್ಡ ಮೀನವೂ ಅದರ ಬೆನ್ನಟ್ಟಿತ್ತೇಸರಿ; ಎರಡೂ ಮೀನಗಳು ಹೀಗೆ ನೀರಿಗೆ ಎರವಾಗಿ ಬೈಲಿಗೆ ಬಂದು ಬಿದ್ದು ನೀರಿಲ್ಲದ್ದರಿಂದ ಪ್ರಾಣಹೋಗುವಷ್ಟರ ಮಟ್ಟಿಗೆ ವ್ಯಾಕುಲವಾಗಿದ್ದವು. ಈ ಸ್ಥಿತಿ ಯನ್ನು ಮರಿಮೀನು ನಿರೀಕ್ಷಿಸಿ ಅಂದದ್ದು:— " ನನ್ನಂತೆಯೇ ನನ್ನ ವೈರಿಯು ಕೂಡ ಪ್ರಾಣಬಿಡುತ್ತಿರುವದನ್ನು ಕಂಡು ನಾನು ಸುಖದಿಂದ ಸಾಯುವೆನು. "

---

## ೨೯— ನರಿಯೂ ಮಂಗವೂ.



ಮೃಗಗಳಿಗೆ ರಾಜನಾದ ಸಿಂಹವು ಮಡಿದ ಬಳಿಕ ಮತ್ತೊಬ್ಬ ರಾಜನನ್ನು ಆರಿಸಲಿಕ್ಕೆಂದು ಒಂದು ಸಲ ಮೃಗಗಳು ತಮ್ಮದೊಂದು ಸಭೆ ನೆರೆಯಿಸಿದವು. ಆ ಸಮಯದಲ್ಲಿ ಮಂಗವು ತನ್ನ ಚೇಷ್ಟೆಯಿಂದ ಎಲ್ಲ ಪಶುಗಳಿಗೂ ಬಹು ರಂಜಿಸಿತು; ಮಂಗನ ಚೇಷ್ಟೆಯಿಂದ ಸಂತೋಷಪಟ್ಟು ಮೃಗಗಳೆಲ್ಲ ಮಂಗನಿಗೇ ಪಟ್ಟಗಟ್ಟಿದವು; ಆದರೆ ಇದು ನರಿಗೆ ಸರಿದೋರಲಿಲ್ಲ; ಆದ್ದರಿಂದ ಏನಾದರೂ ಹಂಚಿಕೆಯಿಂದ ಮಂಗನ ಸೊಕ್ಕು ಮುರಿಯಬೇಕೆಂದು ನರಿಯು ನಿಶ್ಚಯಿಸಿತು. ಒಂದು ದಿನ, ಒಬ್ಬ ಒಕ್ಕಲಿಗನು ಬಲಿಹಾಕಿ

ಇಟ್ಟಿದ್ದನು. “ಇದು ನರಿಯ ಕಣ್ಣಿಗೆ ಬಿದ್ದಾಕ್ಷಣವೇ ಅದು ಮಂಗನ ಕಡೆಗೆ ಬಂದು ಅಂದದ್ದು:– ಸ್ವಾಮಿ, ಒಂದೆಡೆಯಲ್ಲಿ ಕೊಬ್ಬರಿಯ ರಾಶಿಯನ್ನು ಕಂಡಿದ್ದೇನೆ. ತಮಗೆ ತಿನ್ನುವ ಅಪೇಕ್ಷೆ ಇದ್ದರೆ, ತಮಗೆ ತೋರಿಸುವೆನು. ನನ್ನ ಜೊತೆ ನಡೆಯಿರಿ,” ಕೊಬ್ಬರಿಯ ಮಾತೆತ್ತಿದೊಡನೆ ಮಂಗನ ಬಾಯಿಗೆ ನೀರುಬಿಟ್ಟು, ಅದು ನರಿಯನ್ನು ಅಲ್ಲಿಯ ವರೆಗೆ ಬೆನ್ನಟ್ಟಿತು; ಆಗ ನರಿಯು ಬೋನಿಗೆ ಹಚ್ಚಿಟ್ಟ ಕೊಬ್ಬರಿಯನ್ನು ತೋರಿಸಿತು. ಅದನ್ನು ತೆಗೆದುಕೊಂಡು ತಿನ್ನುವದರ ದೆಸೆಯಿಂದ.ಮಂಗವು ತನ್ನದೊಂದು ಕೈಯನ್ನು ಬೋನಿನಲ್ಲಿ ಹಾಕಿತು. ತತ್‌ಕ್ಷಣವೇ ಕೈಯು ಒಳಗೆ ಸಿಕ್ಕಿಕೊಂಡಿತು. ಈ ಮೇರೆಗೆ ತನ್ನನ್ನು ಮೋಸಗೊಳಿಸಿದ್ದಕ್ಕಾಗಿ ಮಂಗವು ನರಿಯನ್ನು ಬಹುಪರಿಯಾಗಿ ಬೈದುಕೊಂಡಿತು. ಆಗ ನರಿಯು ನಗುನಗುತ್ತ:– “ ಏನಯ್ಯಾ, ನೀನು ಅರಸನಿರುವ ಸಂಗತಿಯು. ಆ ಬೋನಿಗೆ ತಿಳಿಯಬಾರದೇ ” ?

———

## ೩೦— ನಾಯಿಯೂ ತೋಳವೂ.



ಒಂದು ನಾಯಿಯು ತನ್ನ ಯಜಮಾನನ ಬಾಗಿಲಲ್ಲಿ ಮಲಗಿರುವಾಗ ಒಂದು ತೋಳವು ಅದನ್ನು ಹಿಡಿಯಿತು; ಮತ್ತು ಹರಿದು ತಿನ್ನುವಷ್ಟರಲ್ಲಿ ನಾಯಿಯು ಅಂದ

ದ್ದು— ' ಅಣ್ಣನೇ! ಮೈಯಲ್ಲಿ ಬಲವಿಲ್ಲದ್ದರಿಂದ ನಾನೀಗ ಬಹು ಬಡವಾಗಿದ್ದೇನೆ. ಹೀಗಿರುವ ನನ್ನನ್ನು ನೀನು ತಿಂದರೆ, ನಿನ್ನ ಹೊಟ್ಟೆಯು ಅದೆಂತು ಶಾಂತವಾಗುವದು? ನನ್ನನ್ನು ಕೊಂದುದಕ್ಕೆ ನಿನ್ನ ಹಸಿವೆಯಾದರೂ ಹಿಂಗಿದರೆ ಒಳಿತು; ಅದಿಲ್ಲದೆ ಹೋದರೆ, ಪ್ರಯೋಜನವೇನು? ಆದುದರಿಂದ ನೀನು ಕೆಲದಿನ ತಡೆ. ನನ್ನ ಒಡೆಯನ ಮನೆಯಲ್ಲಿ ಇಷ್ಟರಲ್ಲಿ ಒಂದು ಮದುವೆಯಾಗುವದಿದೆ; ಆ ವಿವಾಹ ಸಮಾರಂಭದಲ್ಲಿ ನಾನು ಚನ್ನಾಗಿ ತಿಂದು ತೇಗಿ ಮೈತುಂಬಿಕೊಂಡೆನೆಂದರೆ, ಆಗ ನೀನು ನನ್ನನ್ನು ತಿಂದರೇನಾದರೂ ನಿನ್ನ ಹಸಿವೆಯಡಗಬಹುದು; " ತೋಳಕ್ಕೆ ಈ ಮಾತು ಒಪ್ಪಿತವಾಗಿ, ಅದು ಹೊರಟು ಹೋಯಿತು. ಮುಂದೆ ಕೆಲದಿನಗಳಾದ ತರುವಾಯ ಒಂದುದಿನ ನಾಯಿಯು ಬಾಗಿಲಲ್ಲಿ ಕುಳಿತಿರಲು, ತೋಳವು ಅಲ್ಲಿಗೆ ಬಂದು ಅಂದದ್ದು:— " ಈ ಮೊದಲು ನೀನು ಮಾತು ಕೊಟ್ಟ ಮೇರೆಗೆ ನಾನೀಗ ನಿನ್ನನ್ನು ತಿನ್ನಬೇಕೆಂದು ಯೋಚಿಸಿದ್ದೇನೆ. ಮರಣಕ್ಕೆ ಸಿದ್ಧನಾಗಿ ಹೊರಕ್ಕೆ ಬಾ. " ಒಳಗಿದ್ದುಕೊಂಡೇ ಆ ನಾಯಿಯು " ಅಣ್ಣಯ್ಯನೇ ! ನಾನು ಬಾಗಿಲ ಹೊರಗೆ ಮಲಗಿರುವದನ್ನು ನೀನು ಕಂಡರೆ ಮಾತ್ರ ನನ್ನ ಒಡೆಯನ ಮನೆಯ ಮದುವೆಯ ದಾರಿನೋಡದೆ, ನನ್ನನ್ನು ನಿರ್ದಾಕ್ಷಿಣ್ಯವಾಗಿ ತಿಂದುಬಿಡು. " ಎಂದು ಉತ್ತರ ಕೊಟ್ಟಿತು.

ಸಾರಾಂಶ— ಸಂಕಟದೊಳಗಿಂದ ಒಮ್ಮೆ ಪಾರಾದ ಮೇಲೆ ಮತ್ತೊಮ್ಮೆ ಅಂಥ ಸಂಕಟಕ್ಕೆ ಗುರಿಯಾಗದಂತೆ ಜಾಗರೂಕನಾಗಿರುವದೇ ಜಾಣನ ಲಕ್ಷಣವು.

— — — —

## ೨೧— ನಾವಿನಲ್ಲಿ ಕುಳಿತ ಇಬ್ಬರು ಪ್ರಯಾಣಿಕರು.

ಇಬ್ಬರು ಪ್ರಯಾಣಿಕರು ನಾವಿನಲ್ಲಿ ಕುಳಿತುಕೊಂಡು ಜಲಪರ್ಯಟನ ಮಾಡುತ್ತಿದ್ದರು. ಅವರಿಬ್ಬರಿಗೂ ಒಬ್ಬರನ್ನು ಕಂಡರೆ ಒಬ್ಬರಿಗಾಗುತ್ತಿರಲಿಲ್ಲ. ಅವರಿರ್ವರೂ ನಾವಿನ ಒಂದೊಂದು ತುದಿಗೆ ಕುಳಿತಿದ್ದರು. ಕೆಲಹೊತ್ತಿನಮೇಲೆ ದೊಡ್ಡದೊಂದು ಬಿರುಗಾಳಿ ಬಿಟ್ಟಿತು. ನಾವು ಮುಳುಗುವಮಟ್ಟಿಗೆ ಹೊರಳಾಡಹತ್ತಿ ಎಲ್ಲರೂ ಹೆದರಿದರು. ಆಗ ಇಬ್ಬರು ಪ್ರಯಾಣಿಕರಲ್ಲಿ ಒಬ್ಬನು ನಾವಿಕನಿಗೆ ಕೇಳಿದ್ದು:— " ಏನಯ್ಯಾ, ನಾವಿನ ಯಾವಬದಿಯು ಮೊದಲು ಮುಳುಗುವದೆಂದು ನಿನಗನಿಸುತ್ತದೆ? " ಅಂಬಿಗನು ಎರಡನೇಬದಿಯು, " ಎಂದು ಉತ್ತರಕೊಟ್ಟನು. ಪ್ರಯಾಣಿಕನು ಅಂದದ್ದು:— ಹಾಗಾದರೆ ಅಡ್ಡಿಯಿಲ್ಲ; ನನಗಿಂತ ಮುಂಚಿತವಾಗಿ ನನ್ನ ವೈರಿಯು ಸಾಯುವದನ್ನು ಕಣ್ಮುಟ್ಟ ನೋಡುವದರಲ್ಲಿಯೇ ನನಗೆ ಸಂತೋಷ.

— — — —

## ೩೨— ಎರಡು ಕೋಳಿಗಳು.



ಒಂದು ತಿಪ್ಪೆಯ ಒಡೆತನದ ಸಲುವಾಗಿ ಎರಡು ಕೋಳಿಗಳಲ್ಲಿ ಜಗಳ ನಡೆಯಿತು; ಅವುಗಳಲ್ಲಿ ಗಟ್ಟಿಯಾಗಿರುವದೊಂದು ಕೋಳಿಯು ಬಲಹೀನವಾಗಿರುವ ಕೋಳಿಗೆ ಹೊಡೆದು ಮೈನುಗ್ಗು ಮಾಡಿದ್ದರಿಂದ ಬಲಹೀನವಾದ ಕೋಳಿಯು ಹೆದರಿ ಅವಿತುಕೊಂಡು ಕುಳಿತಿತು. ಇದರಿಂದ ಗಟ್ಟಿಯಾದ ಕೋಳಿಗೆ ಬಹು ಗರ್ವ ಬಂದಿತು; ಮತ್ತು ತನ್ನ ಬಲವನ್ನು ಎಲ್ಲರಿಗೆ ತಿಳಿಸಬೇಕೆಂದು ಒಬ್ಬ ಒಕ್ಕಲಿಗನ ಗುಡಿಸಲಿನ ಮೇಲೆ ಕುಳಿತುಕೊಂಡು " ನಾನುಗೆದ್ದೆ; ನಾನುಗೆದ್ದೆ. " ಎಂದು ಮುಕ್ತಕಂಠವಾಗಿ ಕೂಗಲಾರಂಭಿಸಿತು. ಈ ಸಂದರ್ಭಲ್ಲಿ ಹಾರಾಡುತ್ತಿದ್ದ ಒಂದು ಗರುಡಪಕ್ಷಿಯು ಈ ಕೋಳಿಯನ್ನು ಕಂಡು ಅದನ್ನು ತಿನ್ನಲಿಕ್ಕೆಂದು ಒಯ್ದುಬಿಟ್ಟಿತು. ತನ್ನ ವೈರಿಯು ಈ ಮೇರೆಗೆ ಗರುಡಪಕ್ಷಿಗ ತುತ್ತಾದುದನ್ನು ಮತ್ತೊಂದು ಬಲಹೀನ ಕೋಳಿಯು ತಾನು ಕುಳಿತ ಸ್ಥಳದಿಂದಲೇ ನೋಡಿ, ಹೊರಕ್ಕೆ ಬಂದು, ಮತ್ತೆ ತನ್ನ ಹಿಂಡಿನಲ್ಲಿ ಸೇರಿ ಬಡಾಯಿಕೊಚಿಕೊಳ್ಳ ಹತ್ತಿತು.

ಸಾರಾಂಶ— ಯಾವದೊಂದು ಕಾರ್ಯದಲ್ಲಿ ತನಗೆ ಯಶ ದೊರೆತರೆ, ಅಷ್ಟಕ್ಕೇ ಮನುಷ್ಯನು ಗರ್ವಪಡಕೂಡದು; ಯಾಕಂದರೆ, ಮನುಷ್ಯನ ದೈವವು ಯಾವಕಾಲಕ್ಕೆ ಹೇಗೆ ಪಲ್ಲಟಿಸುವದೆಂಬುದು ಗೊತ್ತಿನದಲ್ಲ.

---

## ೩೩— ಕಾಲಜ್ಞಾನಿಯು.

ತಾನೊಬ್ಬ ಮಹಾ ಕಾಲಜ್ಞಾನಿಯೆಂದು ಭಾವಿಸಿರುವ ಒಬ್ಬ ಗೃಹಸ್ಥನು ಬೀದಿಯಲ್ಲಿ ನಿಂತುಕೊಂಡು ಮುಂದಿನ ಆಗುಹೋಗುಗಳನ್ನು ಹೇಳುತ್ತಿದ್ದನು: ಅಲ್ಲದೆ ಕಳಕೊಂಡವರ ಪದಾರ್ಥಗಳು ಇಂಥಲ್ಲಿಯೇ ಇರುವವೆಂಬದನ್ನು ಹೇಳುತ್ತಿದ್ದನು. ಒಂದುದಿನ ಅವನು ಈ ಕೆಲಸದಲ್ಲಿ ಮೈಮರೆತು ಹೋಗುತ್ತಿರಲು, ಒಬ್ಬ ಹಾಸ್ಯಗಾರನು ಅವನಿದ್ದೆಡೆಗೆ ಓಡುತ್ತ ಬಂದು ಗಾಬರಿಯಿಂದ ಅಂದದ್ದು— "ಸ್ವಾಮಿ, ನಡೆಯಿರಿ; ಬೇಗ ನಡೆಯಿರಿ! ನಿಮ್ಮ ಮನೆಗೆ ಬೆಂಕಿಹತ್ತಿದ್ದು, ಇಷ್ಟರಲ್ಲಿ ಸುಟ್ಟುಹೋಗಿರುವದೇನೋ!" ಈ ಮಾತುಕೇಳಿದೊಡನೆ ಆ ಕಾಲಜ್ಞಾನಿಯು ಗಾಬರಿಯಿಂದ ಧಾವಿಸಿ ತನ್ನ ಮನೆಕಡೆಗೆ ಓಡಿದನು. ಅವನ ಹಿಂದಿಂದ ಆ ಹಾಸ್ಯಗಾರನೂ ಮಿಕ್ಕ ಕೆಲವು ಜನರೂ ಓಡಿದರು. ಬಂದು, ನೋಡುತ್ತಾರೆ, ಮನೆಗೇನೂ ಆಗಿಲ್ಲ; ಆಗ ಆ ಹಾಸ್ಯಗಾರನು ಕಾಲಜ್ಞಾನಿಯನ್ನು ಕುರಿತು "ಏನುಸ್ವಾಮಿ! ಹಿಂದೆ ಆದ ಮುಂದೆ ಆಗುವ ಅನೇಕ ಕಾಲಜ್ಞಾನದ ಮಾತುಗಳನ್ನೆಲ್ಲ ನೀವು ಜನರಿಗೆ ಹೇಳುವಿರಿ! ಆದರೆ ಇದೇನು! ನಿಮ್ಮ ಮನೆಯ ಸಮಾಚಾರವೇ ನಿಮಗೆ ತಿಳಿಯಲಿಲ್ಲವಲ್ಲ?" ಅಂದನು.

---

## ೩೪— ಚತುರಳಾದ ಹೆಂಗಸು.

ಒಂದೂರಲ್ಲಿ ಒಬ್ಬಾಕೆ ಚತುರ ಸ್ತ್ರೀಯಳಿದ್ದಳು. ಅವಳಿಗೆ ವರ್ತಮಾನ, ಭೂತ, ಭವಿಷ್ಯಕಾಲದ ಸಂಗತಿಗಳೆಲ್ಲ ತಿಳಿಯುತ್ತವೆಂದು ಬಹು ಹೆಸರುವಾಸಿಯಾಗಿದ್ದಳು. ಕೆಲದಿನಗಳಾದ ಮೇಲೆ ಅವಳು ಮಾಟಮಾಡಿಸಿದಳೆಂಬ ಆರೋಪಣೆಯಿಂದ ಅವಳಿಗೆ ದೇಹಾಂತ ಶಿಕ್ಷೆ ವಿಧಿಸಬೇಕೆಂದು ತೀರ್ಪು ಆದಮೇರೆಗೆ, ಅವಳನ್ನು ದೇಹಾಂತ ಶಿಕ್ಷೆ ಕೊಡುವಸ್ಥಳಕ್ಕೆ ಒಯ್ಯುತ್ತಿರಲು, ಬೀದಿಯಲ್ಲಿ ನಿಂತಿರುವ ಒಬ್ಬ ಹೆಂಗಸು ಅವಳನ್ನು ಕಂಡು "ದೇವರನ್ನು ಒಲಿಸಿಕೊಂಡು, ಹಿಂದುಮುಂದಿನ ಸಂಗತಿಗಳನ್ನು ಹೇಳುವ ನಿನಗೆ ಮನುಷ್ಯನಾದ ನ್ಯಾಯಾಧೀಶನ ಮನಸ್ಸು ಒಲಿಸಲಿಕ್ಕೆ ಆಗಬಾರದೆಂದರೆ ಆಶ್ಚರ್ಯವಲ್ಲವೇ?

---

## ೩೫— ಪ್ರಯಾಣಿಕನೂ ಜ್ಯೋತಿಷಿಯೂ.

ಒಬ್ಬ ಜ್ಯೋತಿಷಿಯು ದುರ್ಬಿನಿನಿಂದ ಮುಗಿಲಲ್ಲಿರುವ ನಕ್ಷತ್ರಗಳ ವೇಧ ತೆಗೆದುಕೊಳ್ಳುವದರಲ್ಲಿ ತೊಡಗಿರಲು ಅವನು, ಕಾಲು ತಪ್ಪಿ ಒಂದು ಗುಂಡಿಯಲ್ಲಿ ಬಿದ್ದನು. ಇದನ್ನು ನೋಡಿ, ಅದೇ ದಾರಿಯಿಂದ ನಡೆದಿರುವ ಒಬ್ಬ ಪ್ರಯಾಣಿಕನು ಅವನಿಗೆ ಅಂದದ್ದು:— ಮಿತ್ರನೇ, ಮುಗಿಲಲ್ಲಿಯ ನಕ್ಷತ್ರಗಳ ದಾರಿಗಳು ನಿಶ್ಚಿತವಾಗಿರುವದರಿಂದ ಅವು ತಮ್ಮ ತಮ್ಮ ಮಾರ್ಗದಿಂದ ತಪ್ಪದೆ ನಡೆಯುವವು. ಹಾಗೆ ನಮ್ಮ ಮಾರ್ಗಗಳಿಲ್ಲ. ನಮ್ಮ ದಾರಿಯಲ್ಲಿ ತೆಗ್ಗು ತೆವರುಗಳು ಬಹಳ; ಆದುದರಿಂದ ನಕ್ಷತ್ರಗಳ ವೇಧ ತೆಗೆದುಕೊಳ್ಳುವದಕ್ಕಿಂತ ನಮ್ಮ ದಾರಿಯಲ್ಲಿಯ ತೆಗ್ಗು ಮುಗ್ಗುಗಳನ್ನು ವಿಶೇಷವಾಗಿ ಲಕ್ಷಿಸುವದು ಹೆಚ್ಚು ಲಾಭಕರವಲ್ಲವೇ?

ಮೇಲಿನ ಮೂರು ಕಥೆಗಳ ಸಾರಾಂಶ— ತಾವು ಆಚರಿಸದೆ, ಜನರಿಗೆ ಉಪದೇಶಿಸುತ್ತಿರುವವರು ಜನರ ನಿಂದೆಗೆ ಪಾತ್ರರಾಗದೆ ಇರರು.

## ೩೬— ಬೆಳವ ಮತ್ತು ಕೋಳಿ.

ಒಬ್ಬ ಮನುಷ್ಯನು ಒಂದು ಬೆಳವವನ್ನು ಬಲೆಯಲ್ಲಿ ಹಿಡಿದನು. ಮತ್ತು ಅದನ್ನು ತಂದು ಕೋಳಿಯ ಹಿಂಡಿನಲ್ಲಿ ಬಿಟ್ಟನು. ತಮ್ಮಲ್ಲಿಗೆ ಹೊಸದಾಗಿ ಒಬ್ಬ ಅತಿಥಿಯು ಬಂದುದನ್ನು ಕಂಡು ಆ ಕೋಳಿಗಳೆಲ್ಲವೂ ತಮ್ಮ ಚುಂಚಿನಿಂದ ಬಹುಪರಿಯಾಗಿ ಆ ಬೆಳೆವವನ್ನು ಪೀಡಿಸಿದವು. ಮುಂದೆ ಅವು ತಮ್ಮೊಳಗೇ ಕಾದಾಡಿ ಒಬ್ಬರಿಗೊಬ್ಬರ ಮೈನೆತ್ತರ ಸುರಿಯುವಂತೆ ಜಗಳಾಡುವದನ್ನು ಬೆಳವವು ನೋಡಿ ಅಂದದ್ದು:—ಇವು ತಮ್ಮ ತಮ್ಮೊಳಗೆ ಜೀವಿತದ ಎಚ್ಚರವಿಲ್ಲದೆ ಇಷ್ಟು ಕಾದಾಡುತ್ತಿದ್ದ ಬಳಿಕ ನನ್ನಂಥ ಪರಕೀಯನಿಗೆ ಇವು ಹಿಂಸಿಸುವಲ್ಲೇನು ಸೋಜಿಗವು ?

ಸಾರಾಂಶ— ಸ್ವಾಭಾವಿಕವಾಗಿಯೇ ಜಗಳಗಂಟನಿದ್ದಲ್ಲಿಗೆ ಹೋಗುವವನಿಗೆ ಸುಖವಾಗುವದೆಂಥ ಮಾತು?

——————

## ೩೭-- ನರಿಯಮ್ಮ ಮತ್ತು ಸಿಂಹಮ್ಮ



ಒಂದಾನೊಂದು ದಿನ ಒಂದು ಹೆಣ್ಣು ನರಿಯು, ಒಂದು ಹೆಣ್ಣು ಸಿಂಹದ ಹತ್ತಿರ ಹೋಗಿ, ತನ್ನ ಮರಿಗಳನ್ನು ಕುರಿತು ತಾನೇ ಹೊಗಳಿ ಮಾತಾಡಿ " ನಮಗೆ ಪ್ರತಿವರ್ಷ ಎಷ್ಟೊಂದು ಮರಿಗಳು ಹುಟ್ಟುತ್ತವೆ; ಆದರೂ ಆ ಬಗ್ಗೆ ನಾವೇನೂ ಆ ಬಗ್ಗ ಯಾರ ಮುಂದೆಯಾಗಲಿ ನಮ್ಮ ದೊಡ್ಡಸ್ತಿಕೆಯನ್ನು ಹೇಳಿಕೊಳ್ಳುವದಿಲ್ಲ. ಇನ್ನು ಕೆಲವರು ವರ್ಷಕ್ಕೆ ಅದೂ ಒಂದು ಸಾರೆ— ಒಂದೇ ಮರಿ—ಈದರೂ ಅವರ ಸೊಕ್ಕು ಹಿಡಿಸಲಾರದಷ್ಟಿರುತ್ತದೆ; ಎಂದು ನುಡಿಯಿತು. " ನರಿಯಮ್ಮ ತನಗೇನೇ ಹಿಗ್ಗಿಸಿ ಹಾಸ್ಯಮಾಡಿ ನುಡಿದ ಈ ಮಾತನ್ನು ಸಿಂಹಮ್ಮ ತಿಳಿದುಕೊಂಡು ಅಂದದ್ದು:— " ಅಮ್ಮ, ನಿಮ್ಮಗಳಿಗೆ ಪ್ರತಿಸಲ ಅಷ್ಟೊಂದು ಮರಿಗಳಾಗುವದು ನಿಜವಷ್ಟೇ! ಆದರೂ ನಿಮ್ಮ ಮಕ್ಕಳಿಗೆ ಎಷ್ಟಾದರೂ " ನರಿ " ಗಳೆಂದೇ ಕರೆಯುವದುಂಟು! ಮತ್ತು ನಮ್ಮ ಮಗು ಒಂದೇ ಇದ್ದಾಗ್ಯೂ ಅದಕ್ಕೆ " ಸಿಂಹ " ಎಂದು ಜನರು ಅನ್ನುವದುಂಟು. "

ಸಾರಾಂಶ— ಯಾವದೊಂದು ವಸ್ತುವು ಗುಣದಿಂದಲ್ಲದೆ ಸಂಖ್ಯೆಯಿಂದ ಹೆಚ್ಚಿಗಿದ್ದರೆ ಪ್ರಯೋಜನವೇನು?

## ೩೮— ವರ್ತಕನಾದ ಕುರುಬನು.

ಒಬ್ಬ ಕುರುಬನು ಸಮುದ್ರ ದಂಡೆಯಲ್ಲಿ ಕುರಿಗಳನ್ನು ಮೇಯಿಸುತ್ತ ನಿಂತಿರುವಾಗ ಸಮುದ್ರರಾಜನ ಶೋಭೆಯನ್ನು ಕಂಡು ಬಹು ಸಂತೋಷಪಟ್ಟನು. ಆ ವೇಳೆಯಲ್ಲಿ ಸಮುದ್ರವು ಶಾಂತವಿದ್ದು, ಅಲ್ಲಲ್ಲಿ ವರ್ತಕರ ಹಡಗಗಳು ತೇಲುತ್ತಿದ್ದವು. ಇದನ್ನೆಲ್ಲ ಕಂಡು ತಾನೂ ಒಂದು ಡೋಣಿಯನ್ನು ಕೊಂಡು ವ್ಯಾಪಾರ ನಡಿಸಬೇಕೆಂದು ಅವನು ಯೋಚಿಸಿ, ತನ್ನ ಬಳಿಯಿರುವ ಕುರಿಗಳನ್ನೆಲ್ಲ ಮಾರಿ, ಅದರಿಂದ ಬಂದ ದುಡ್ಡಿನಿಂದ ಒಂದು ವ್ಯಾಪಾರದ ಚಿಕ್ಕದಾದ



ಡೋಣಿಯನ್ನು ಕೊಂಡು, ಅದರಲ್ಲಿ ಖಜ್ಜೂರಿಯನ್ನು ಹಾಕಿಕೊಂಡು ವ್ಯಾಪಾರಕ್ಕಾಗಿ ನಡೆದನು. ದಾರಿಯಲ್ಲಿ ದೊಡ್ಡದೊಂದು ಬಿರುಗಾಳಿ ಬಿಟ್ಟಿತು. ಡೋಣಿಯು ಮುಳುಗಬಾರದೆಂದು ಅವನು ಅದರಲ್ಲಿಯ ಖಜ್ಜೂರಿಯನ್ನೆಲ್ಲ ಸಮುದ್ರದಲ್ಲಿ ಬೀಸಾಕಿ ಮುನ್ನಡೆದನು. ಇಷ್ಟಾದರೂ ಬಿರುಗಾಳಿ ನಿಲ್ಲದೆ ಅದು ಹೆಚ್ಚುತ್ತ ನಡೆದು ಕೊನೆಗೆ ಆ ಡೋಣಿಯು ದಂಡೆಯ ಹತ್ತರ ಬಂದು ಒಂದು ಬಂಡೆಗಲ್ಲಿಗೆ ತಾಕಿ ಒಡೆದು ಚೂರು ಚೂರಾಯಿತು; ಈ ಸಂಕಟದೊಳಗಿಂದ ಅವನೊಬ್ಬನೇ ಸುದೈವದಿಂದ ಪಾರಾದನು. ಇಷ್ಟೆಲ್ಲ ಅವಸ್ಥೆಯಾದನಂತರ ತನ್ನ ಕುರಿಗಳನ್ನು ಮಾರಿದ ಮನುಷ್ಯನ ಹತ್ತಿರ ಹೋಗಿ, ಕುರಿ ಕಾಯಲಿಕ್ಕೆಂದು ಊಳಿಗದವನಾದನು. ಹೀಗಿರುವದರಿಂದ ಕೆಲದಿನಗಳಲ್ಲಿ ಅವನ ಕೈಯಲ್ಲಿ ಹಣ ಕೂಡಿತು; ಆ ಮೇಲೆ ಮೊದಲಿನಂತೆ, ಒಂದು ದಿನ ಅವನೇ ಕುರಿ ಕಾಯುತ್ತ ಸಮುದ್ರದಂಡೆಯಲ್ಲಿ ಕುಳಿತಿರಲು, ಸಮುದ್ರನಾಥನ ಶಾಂತಸ್ವರೂಪವನ್ನು ಕಂಡು “ ಇನ್ನುಮುಂದೆ ನಾನು ನಿನ್ನ ಶಾಂತರೂಪಕ್ಕೆ ಮರುಳಾಗ

ಲಾರೆ. ಒಮ್ಮೆ ಕೈಯಲ್ಲಿದ್ದುದನ್ನು ಕಳೆದುಕೊಂಡು ನಿನ್ನಿಂದ ಜಾಣತನ ಕಲಿತಿದ್ದೇನೆ. ಅದನ್ನೆಂತು ಮರೆಯಲಿ!

ಸಾರಾಂಶ — ತಾನರಿಯದ ವ್ಯವಸಾಯದಲ್ಲಿ ಮನುಷ್ಯನೆಂದೂ ಸೇರಕೂಡದು; ಮೇಲಾಗಿ ಯಾತರಿಂದ ತನಗೊಮ್ಮೆ ನಷ್ಟವಾಯಿತೋ ಅದನ್ನು ತಿರುಗಿ ನಂಬದಿರುವದೇ ಜಾಣತನ.

---

## ೩೯— ದೇವರು ಮತ್ತು ನಾಸ್ತಿಕನು.

ಒಬ್ಬ ನಾಸ್ತಿಕನು ದೇವರ ಗೇಲಿ—ಮಾಡಬೇಕೆಂದು ಒಂದು ಗುಡಿಗೆ ಹೋದನು. ಹೋಗುವಾಗ ಅವನು ತನ್ನ ಕೈಯಲ್ಲಿ ಒಂದು ಚಿಮಣಿಯನ್ನು ಹಿಡಿದಿದ್ದನು. ಗುಡಿಗೆ ಹೋದಬಳಿಕ ದೇವರನ್ನು ಕುರಿತು “ ದೇವರೇ! ನನ್ನ ಕೈಯಲ್ಲಿರುವ ವಸ್ತುವು ಜೀವಂತ ಅದೆಯೋ ನಿರ್ಜೀವವಿದೆಯೋ ಹೇಳು ” ಅಂದನು. ಕೈಯಲ್ಲಿದ್ದ ವಸ್ತುವು ಜೀವಂತ ವಿರುವದೆಂದು ದೇವರು ಹೇಳಿದರೆ, ಚಿಮಣಿಯನ್ನು ಅಲ್ಲಿಂದಲ್ಲಿಯೇ ಒಡೆದು ಹಾಕಬೇಕು; ಮತ್ತು ದೇವರ ಮಾತನ್ನು ಸುಳ್ಳುಮಾಡಬೇಕು; ಎಂದು ಆತನ ಅಪೇಕ್ಷೆಯಿದ್ದಿತು. ದೇವರಿಗೆ ಈತನ ಇಂಗಿತವೇನಿರುವದೆಂಬುದು ತಿಳಿದು ಅವನಿಗೆ “ ನೀನು ಅಪೇಕ್ಷಿಸಿದಂತೆ, ನಿನ್ನ ಕೈಯೊಳಗಿನ ವಸ್ತುವು ಆಗುವದು. ಜೀವಂತ ಇರಬೇಕೆಂದರೆ ಇರುವದು. ಸಾಯಬೇಕೆಂದರೆ ಸಾಯುವದು. ” ಎಂದನು.

ಸಾರಾಂಶ— ದೇವರ ಮುಂದೆ ಖೊಟ್ಟಿತನ, ಸುಳ್ಳು, ಮೋಸ ನಡೆಯುವದಿಲ್ಲ.

---

## ೪೦— ವೈದ್ಯನೂ ರೋಗಿಯೂ.

ಒಬ್ಬ ವೈದ್ಯನು ಒಬ್ಬ ರೋಗಿಗೆ ಔಷಧ ಕೊಡುತ್ತಿದ್ದನು. ಒಂದು ದಿನ ವೈದ್ಯನು ಬೇನೆಯವನ ಮನೆಗೆ ಹೋಗಿ “ ಏನು ರಾಯರೇ, ಈದಿನ ನಿಮ್ಮ ಮೈಯಲ್ಲಿ ಹೇಗಿದೆ? ” ಎಂದು ಕೇಳಿದನು. ಅದಕ್ಕೆ ಬೇನೆಯವನು “ ನಿಜವಾಗಿಯೂ ನಾನೀದಿನ ಸುಖವಾಗಿದ್ದೇನೆ. ” ಅಂದನು. ಅದಕ್ಕೆ ವೈದ್ಯನು “ ಅಡ್ಡಿಯಿಲ್ಲ; ಇನ್ನು ನಿಮಗೆ ಗುಣವಾಯಿತು; ” ಅಂದನು. ಮಾರನೇ ದಿನವೂ ವೈದ್ಯನು ಬೇನೆಯವನಿಗೆ ಅದೇ ಪ್ರಶ್ನೆ ಕೇಳಿದನು. ಅದಕ್ಕೆ ಬೇನೆಯವನು “ ಈದಿನ ನನಗೇಕೋ ಮೈಯಲ್ಲಿ ಚಳಿ ಕಟ್ಟಿದೆ; ” ಅಂದನು. ಆಗ ವೈದ್ಯನು “ ಯೋಚನೆ ಇಲ್ಲ; ಇದಂತೂ ಒಳ್ಳೇ ಲಕ್ಷಣ; ” ಹೀಗಂದನು. ತರುವಾಯ

ರೋಗಿಯ ಕೆಲ ಮಿತ್ರರು ತಮ್ಮ ಮಿತ್ರನ ಆರೋಗ್ಯಕ್ಕಾಗಿ ವಿಚಾರಿಸಲು ಮನೆಗೆ ಬಂದಾಗರೋಗೀಯು ಅಂದದ್ದು:— " ವೈದ್ಯರಿಗೆ ನನ್ನ ಆರೋಗ್ಯದ ಲಕ್ಷಣಗಳು ಇಷ್ಟು ಚನ್ನಾಗಿಕಾಣುತ್ತಿರುವವೆಂದ ಮೇಲೆ ಇನ್ನೇನು ನಾನು ಹೆಚ್ಚು ದಿನ ಬದುಕಿರಲಾರೆನೆಂದು ಕಾಣುತ್ತದೆ. "

---

## ೪೧— ನಿರಾಶೆಗೊಂಡ ಜಾಲಗಾರರು.

ಕೆಲವು ಜಾಲಗಾರರು ಒಂದು ಹೊಳೆಯಲ್ಲಿ ಮೀನ ಹಿಡಿಯಲಿಕ್ಕೆಂದು ಜಾಲ ಹಾಕಿಕೊಂಡು ಕುಳಿತಿದ್ದರು. ಅವರು ಅನೇಕ ಸಾರೆ ಜಾಲ ಬೀಸಾಡಿದರೂ ಮೀನಗಳು ಬಲಿ ಬೀಳಲಿಲ್ಲ. ಇಷ್ಟಕ್ಕೆ ನಿರಾಶೆಗೊಳ್ಳದೆ, ಮತ್ತೊಮ್ಮೆ ಒಬ್ಬನು ಜಾಲ ಬೀಸಾಡಿದನು; ಕೆಲ ಹೊತ್ತಿನ ಮೇಲೆ ಜಾಲವನ್ನು ಹಿಡಿದೆತ್ತಲು ಸ್ವಲ್ಪ ಭಾರವಾಗಿ ಅನಿಸಿದ್ದರಿಂದ ಇಡೀ ಜಾಲವನ್ನೇ ಎತ್ತಿ ನೋಡಲು, ಆ ಜಾಲದಲ್ಲಿ ಒಂದು ದೊಡ್ಡ ಕಲ್ಲೂ ಚಿಕ್ಕದೊಂದು ಮೀನೂ ಶಿಕ್ಕಿರುವದಾಗಿ ಕಂಡು ಬಂದಿತು. ಇಷ್ಟೊತ್ತಿನವರೆಗೆ ಕಷ್ಟಪಟ್ಟ ಶ್ರಮವೆಲ್ಲ ವ್ಯರ್ಥವಾಯಿತೆಂದು ಅವನು ಬಹು ನೊಂದುಕೊಂಡನು.



ಆಗ ಅವರಲ್ಲಿ ಒಬ್ಬನು:— " ಏನಯ್ಯಾ! ಸುಖದುಃಖಗಳೆಂಬವು ಅವಳಿ ಜವಳಿ; ಒಂದರ ಹಿಂದೊಂದು ಹೀಗೆ ಅವುಯಾವಾಗಲೂ ಹೋಗಿಬರುತ್ತಿರುತ್ತವೆ. " ಹೀಗೆಂದನು.

ಸಾರಾಂಶ— ಸುಖದುಃಖಗಳೆಂಬವು ಮನುಷ್ಯನ ಬೆನ್ನಟ್ಟಿರುವವೆಂಬುವದನ್ನು ಜ್ಞಾಪಕದಲ್ಲಿಟ್ಟುಕೊಂಡೇ ಮನುಷ್ಯನು ಯಾವಾಗಲೂ ನಡೆಯುತ್ತಿರಬೇಕು.

---

## ಮನುಷ್ಯನೂ ಆತನ ಕಟ್ಟಿಗೆಯ ದೇವರೂ.

ಶ್ರೀಮಂತನಾಗಬೇಕೆಂಬ ಅಪೇಕ್ಷೆಯುಳ್ಳ ಒಬ್ಬ ಬಡ ಮನುಷ್ಯನಿದ್ದನು. ಅವನು ದಿನಾಲು ಒಂದು ಕಟ್ಟಿಗೆಯ ದೇವರ ಮೂರ್ತಿಯ ಮುಂದೆ ಕುಳಿತುಕೊಂಡು ಪ್ರಾರ್ಥಿಸುತ್ತಿದ್ದನು. ಹೀಗೆ ಎಷ್ಟೋ ಕಾಲ ಕಳೆದು ಹೋದರೂ ಅವನಿಗೇನೂ ಹಣ ಸಿಗಲಿಲ್ಲ; ಸಾಲದ್ದಕ್ಕೆ ಆತನ ಬಡತನವೇ ಬೆಳೆಯುತ್ತ ನಡೆಯಿತು. ತನ್ನೀ ಬಡತನಕ್ಕಾಗಿ ಬಹಳ ಸಂತಾಪಗೊಂಡು ಒಂದು ದಿನ ಅವನು ಆ ಮೂರ್ತಿಯನ್ನು ನೆಲಕ್ಕೆ ಅಪ್ಪಳಿಸಿದನು. ಆ ದೇವರ ಮೂರ್ತಿಯು ತುಂಡಾದೊಡನೆ ಅದರೊಳಗಿದ್ದ ಅನೇಕ ವರಹಗಳು ಕೆಳಕ್ಕೆ ಬಿದ್ದವು. ಇದನೆಲ್ಲ ನೋಡಿದ ಆ ಮನುಷ್ಯನು ಆಶ್ಚರ್ಯಚಕಿತನಾಗಿ "ಹೊಡೆತಕ್ಕೆ ಪ್ರಸನ್ನನಾಗುವ ದೇವರನ್ನು ನಾನು ವ್ಯರ್ಥವಾಗಿ ಇಷ್ಟು ದಿನ ಪ್ರಾರ್ಥಿಸಿದೆನು! ನಾನೆಂಥ ದಡ್ಡ!" ಎಂದು ಅಂದುಕೊಂಡನು.

ಸಾರಾಂಶ— ಸಾಮೋಪಾಯದಿಂದ ಆಗದ ಕಾರ್ಯವು ಎಷ್ಟೋ ಸಲ ದಂಡೋಪಾಯದಿಂದ ಸಾಧ್ಯವಾಗುತ್ತದೆ.

— — — —

## ೪೩— ಗರುಡಪಕ್ಷಿಯೂ ಮನುಷ್ಯನೂ.

ಒಬ್ಬ ಮನುಷ್ಯನು ತನ್ನ ಜಾಲದಲ್ಲಿ ಒಂದು ಗರುಡ ಪಕ್ಷಿಯನ್ನು ಹಿಡಿದನು, ಮತ್ತು ಅದರ ರೆಕ್ಕೆಗಳನ್ನು ಕತ್ತರಿಹಾಕಿ ಅದನ್ನೊಂದು ಸರಪಳಿಯಿಂದ ಒಂದು ಕಂಬಕ್ಕೆ ಕಟ್ಟಿದನು. ಅವನ ನೆರೆಯಲ್ಲಿಯೇ ಒಬ್ಬ ಬೇಟೆಗಾರನಿರುತ್ತಿದ್ದನು. ಗರುಡ ಪಕ್ಷಿಯ ಗೋಳಾಟ ನೋಡಿ ಅವನು ದಯೆಯಿಂದ ಕರಗಿದವನಾಗಿ ಆ ಮನುಷ್ಯನಿಗೆ ಕೈಯಿಂದ ದುಡ್ಡು ಕೊಟ್ಟು ಆ ಗರುಡಪಕ್ಷಿಯನ್ನು ಕೊಂಡು ಚನ್ನಾಗಿ ಸಾಕಿದನು. ಮತ್ತು ಆ ಗರುಡ ಪಕ್ಷಿಯ ರೆಕ್ಕೆಗಳು ಬಲಿತನಂತರ ಅದನ್ನು ಬಿಟ್ಟನು. ಗರುಡ ಪಕ್ಷಿಯು ಬೇಟೆಗಾರನ ವಿಷಯದಲ್ಲಿ ಬಹು ಕೃತಜ್ಞತೆಯನ್ನಿಟ್ಟುಕೊಂಡಿದ್ದರಿಂದ ಅಡವಿಯೊಳಗಿಂದ ಅವನಿಗೊಂದು ಮೊಲವನ್ನು ತಂದುಕೊಟ್ಟಿತು. ಇದನ್ನೆಲ್ಲ ಒಂದು ನರಿಯು ಕಂಡು— "ಮಿತ್ರಾ! ನಾನು ಇಂಥ ಸಂದರ್ಭಕ್ಕೆ ಸಿಲುಕಿದ್ದರೆ, ಈ ಮೊಲವನ್ನು ನಾನು ನನ್ನ ಮೊದಲಿನ ಒಡೆಯನಿಗೆ ಕೊಡುತ್ತಿದ್ದೆ; ಏಕೆಂದರೆ, ನಮಗೆ ಯಾರಿಂದ ಭಯವೆನಿಸುವದೋ, ಅವರೊಡನೆಯೇ ಸ್ನೇಹ ಬೆಳಿಸಿ ಭೀತಿಯನ್ನು ಹೋಗಲಾಡಿಸುವದೇ ಜಾಣತನವು. ನಿನ್ನನ್ನು ಆಪತ್ತಿನೊಳಗಿಂದ ಪಾರುಮಾಡಿ, ಕಾಪಾಡಿದವ

ನಿಂದ ನಿನಗೇನೂ ತೊಂದರೆಯಾಗದು; ಆದರೆ, ಯಾವನು ನಿನ್ನನ್ನು ಮೊದಲು ಪಕ್ಕ ಕಿತ್ತು ಕಟ್ಟಿ ಹಾಕಿದ್ದನೋ, ಅವನಿಂದಲೇ ನಿನಗೆ ಪುನಃ ಭಯವಿದೆ; ಆದುದರಿಂದಲೇ ಈ ಮೊಲವನ್ನು ಅವನಿಗೆ ಕೊಟ್ಟು, ಅವನೊಡನೆ ಸ್ನೇಹ ಬೆಳಿಸು; ಅಂದರೆ ಜಾಣತನ;" ಹೀಗೆ ಬೋಧಿಸಿತು. ನರಿಯ ಮಾತನ್ನು ಗರುಡಪಕ್ಷಿಯು ಕೇಳಿಕೊಂಡು— "ಮಿತ್ರಾ! ನಿನ್ನೀ ಉಪದೇಶವು ನರಿಗೆ ಶೋಭಿಸುವಂತೇ ಇದೆ: ಆದರೆ ನನ್ನ ಮಾತು ಕೇಳಿದರೆ, ನಾನು ಹೇಳುವದೇನಂದರೆ, ನಮಗೆ ಪಯಿದೋರಿದವನಿಗೆ ನಾವು ನಮ್ಮ ಕೃತಜ್ಞತೆಯನ್ನು ತೋರ್ಪಡಿಸಲಿಕ್ಕೆ ಬೇಕು; ಮತ್ತು ಯಾವಾತನಿಂದ ನಮಗೆ ತೊಂದರೆಯಾಗುವಂತಿದೆಯೋ, ಅವನೊಡನೆ ಬಹು ಜಾಗರೂಕತೆಯಿಂದ ನಡೆಯುವದೇ ಜಾಣತನವು."

ಸಾರಾಂಶ— ದೊಡ್ಡವರೊಡನೆ ದೊಡ್ಡಸ್ತನದಿಂದಲೇ ನಡೆಯಲಿಕ್ಕೆ ಬೇಕು; ಅವರಿಂದ ನಮಗೆ ತೊಂದರೆಯಾಗಲಿ; ಆಗದಿರಲಿ; ಆ ಬಗ್ಗೆ ಯೋಚನೆ ಮಾಡಕೂಡದು.

---

## ೪೪— ಒಕ್ಕಲಿಗನೂ ಅವನ ಮಕ್ಕಳೂ.

ಒಬ್ಬ ಒಕ್ಕಲಿಗನು ತೀರ ಸಾಯಲಿಕ್ಕಾದನು; ಆಗ ಅವನು ತನ್ನ ಮಕ್ಕಳನ್ನೆಲ್ಲ ಹತ್ತಿರಕ್ಕೆ ಕರೆದು ಹೇಳಿದ್ದು— "ಮಕ್ಕಳಿರಾ! ನನ್ನ ತರುವಾಯ ಈ ಹೊಲ ಮತ್ತು ತೋಟಗಳೆಲ್ಲ ನಿಮ್ಮವೇ; ಆದರೂ ನಿಮಗೊಂದು ಗುಟ್ಟಿನ ಮಾತು ನಾನು ಹೇಳುವದೇನೆಂದರೆ, ಈ ಭೂಮಿಯಲ್ಲಿ ಎಲ್ಲಿಯೋ ಒಂದೆಡೆಯಲ್ಲಿ ಹಣ ಹುಗಿದಿಟ್ಟಿದ್ದು, ಮೊಳವುದ್ದ ಅಗಿದರೆ ಅದು ನಿಮಗೆ ಸಿಗುವದು." ಇಷ್ಟು ಹೇಳಿ ಆ ಒಕ್ಕಲಿಗನು ಮಡಿದನು. ತರುವಾಯ ಅವನ ಮಕ್ಕಳು ತಮ್ಮೊಳಗೆ ತಾವು ಯೋಚಿಸಿಕೊಂಡು ಆ ಭೂಮಿಯನ್ನೆಲ್ಲ ಅಗಿದು ನೋಡಿದರು; ಆದರೂ ಹಣ ಸಿಗಲಿಲ್ಲ; ಆದರೆ ಆ ಭೂಮಿಯನ್ನವರು ಚನ್ನಾಗಿ ಅಗಿದುದರಿಂದ ಆ ವರ್ಷ ಆ ಹೊಲವು ಚನ್ನಾಗಿ ಬೆಳೆದು ಫಲ ಕೊಟ್ಟಿತು. ಇದನ್ನೆಲ್ಲ ಯೋಚಿಸಿಕೊಳ್ಳಲು, ತಮ್ಮ ತಂದೆಯು ಭೂಮಿಯಲ್ಲಿ ಹಣ ಹೂಳಿಟ್ಟಿದ್ದರ ಅರ್ಥವೇನೆಂಬುದು ಅವರ ಮನಸ್ಸಿನಲ್ಲಿ ಹೊಳೆಯಿತು. ಇಷ್ಟೇ ಅಲ್ಲದೆ ಮುಂದಾದರೂ ಅವರು ಜಾಗರೂಕತೆಯಿಂದ ತಮ್ಮ ಹೊಲ ಸಾಗುಮಾಡುವ ಕ್ರಮವನ್ನೇ ನಡಿಸಿದರು.

ಸಾರಾಂಶ— ಕೇವಲ ದುಡ್ಡೆಂದರೇನೇ ದ್ರವ್ಯವಲ್ಲ. ದ್ರವ್ಯವು ಅನೇಕ ಪದಾರ್ಥಗಳಲ್ಲಿ ಅಡಕವಾಗಿದೆ. ಮೈಗಳ್ಳರಿಗೆ ಕೆಲಸದ ರುಚಿ ಹಚ್ಚಬೇಕಾದರೆ ಹಂಚಿಕೆಯಿಂದಲೇ ಸೈ.

## ೪೫— ಖಂಡೇರಾಯನೂ ಜೇನುನೊಣವೂ.

ಒಂದು ಜೇನು ನೊಣವು ಖಂಡೇರಾಯನಿಗೆ ಜೇನುತುಪ್ಪ ತುಂಬಿ ಒಂದು ಪಾತ್ರೆಯನ್ನು ಒಯ್ದು ಕೊಟ್ಟಿತು. ಖಂಡೇರಾಯನು ಸಂತುಷ್ಟನಾಗಿ– "ನಿನಗೆ ಬೇಕಾದ್ದನ್ನು ನಾನು ಕೊಡುವೆನು ಬೇಡು" ಅಂದನು. ಅದಕ್ಕೆ ಜೇನುನೊಣವು ಅಂದದ್ದು– "ನಾನು ಕಚ್ಚಿದವರಿಗೆ ಬಹಳ ನೋವಾಗುವಂತೆ ನನ್ನಲ್ಲಿ ಶಕ್ತಿ ಕೊಡು." ಜೇನುನೊಣದ ಈ ದುಷ್ಟತನದ ಮಾತು ಕೇಳಿ ಖಂಡೇರಾಯನಿಗೆ ಬಹು ಕೋಪ ಬಂದು, ಅವನಂದದ್ದು– "ನಿನಗೆ ನಾನು ವಚನ ಕೊಟ್ಟದ್ದರಿಂದ ಪ್ರಕೃತ ನೀನು ಬೇಡಿದ್ದನ್ನು ಕೊಡುವೆ; ಆದರೆ ಒಂದು ಮಾತು ಮಟ್ಟಿಗೆ ಜ್ಞಾಪಕದಲ್ಲಿಡು. ನೀನು ಕಚ್ಚಿದೊಡನೆ ನಿನ್ನ ಕೊಂಡೆಯು ಉದುರಿ, ನೀನು ಸತ್ತುಹೋಗುವಿ.



ಸಾರಾಂಶ— ಅನ್ಯರನ್ನು ಪೀಡಿಸಲು ಅಪೇಕ್ಷಿಸುವವನು ತಾನಾಗಿಯೇ ಕಷ್ಟಕ್ಕೆ ಗುರಿಯಾಗುವದುಂಟು.

---

## ೪೬— ಕಂಬಾರನೂ ಅವನ ನಾಯಿಯೂ.

ಒಬ್ಬ ಕಂಬಾರನು ಒಂದು ನಾಯಿ ಸಾಕಿದ್ದನು. ಅದು ಹಗಲೆಲ್ಲ ನಿದ್ದೆ ಮಾಡಿ, ತನ್ನ ಒಡೆಯನು ಊಟಕ್ಕೆ ಕುಳಿತೊಡನೆ ಎಚ್ಚರಾಗಿ ಅವನ ಹತ್ತಿರಕ್ಕೆ ಹೋಗುತ್ತಿತ್ತು. ಒಂದಾನೊಂದು ದಿನ ಆ ಕಂಬಾರನು ಅದನ್ನು ಕುರಿತು– "ನಾನು ಕೆಲ

ಸಕ್ಕೆ ಕುಳಿತಿರುವಾಗ ನೀನು ಮಲಗಿರುತ್ತೀ; ನಾನು ಊಟಕ್ಕೆ ಎದ್ದೊಡನೆ ನಾನಿರುವಲ್ಲಿ ಬರುವಿ. ಇದರ ಗುಟ್ಟೇನು? ಹೇಳುವಿಯಾ? " ಎಂದು ಕೇಳಿದನು. ಅದಕ್ಕೆ ಆ ನಾಯಿಯು– " ಮಲಗುವ ಹಾಗೂ ಎಚ್ಚರಾಗುವ ಕಾಲಗಳು ನಿಶ್ಚಿತವಾಗಿರುತ್ತವೆ. ಯೋಗ್ಯ ಕಾರ್ಯವನ್ನು ಯೋಗ್ಯ ಕಾಲಕ್ಕೆ ಮಾಡಿದರೇನೇ ಸುಖವಾಗುವದು. "

---

## ೪೭— ತೋಳವೂ ಸಿಂಹವೂ.

ಒಂದು ತೋಳ ಹಾಗೂ ಸಿಂಹ ಇವೆರಡೂ ಕಾಡಿನಲ್ಲಿ ತಿರುಗಾಡುತ್ತಿರುವಾಗ ತೋಳವು ಸಿಂಹವನ್ನು ಕುರಿತು ಅಂದದ್ದು:– " ಮಹಾ ಸ್ವಾಮೀ! ಕೊಂಚ ತಡೆಯಿರಿ; ಇಲ್ಲಿಂದ ಸಮೀಪದಲ್ಲಿಯೇ ಕುರಿಗಳು ಮೇಯುತ್ತಿರುವ ಲಕ್ಷಣವು ತೋರುತ್ತದೆ; ಏಕೆಂದರೆ, ಇದೀಗ ನಾನೊಂದು ಕುರಿಮರಿಯ ಸ್ವರ ಕೇಳಿದೆ; ಕೆಲ ಹೊತ್ತು ನೀವು ಇಲ್ಲಿಯೇ ತಡೆದರೆ ನಾನು ಒಂದು ಕುರಿಮರಿ ಹಿಡಿದು ತರುವೆನು. " ಇಷ್ಟು ಮಾತನಾಡಿ ಯಾವ ದಿಕ್ಕಿನಲ್ಲಿ ಕುರಿಯ ಒದರುವಿಕೆಯು ಕೇಳಿಸಿತ್ತೋ ಅದೇ ದಿಕ್ಕಿನಿಂದ ತೋಳವು ಹೊರಟಿತು. ಹೋಗಿ ನೋಡುವಷ್ಟರಲ್ಲಿ ಕುರಿಯ ಒಂದು ಹಿಂಡು ಅಲ್ಲಿ ಮೇಯುತ್ತಿದ್ದು, ಹತ್ತಿರದಲ್ಲಿಯೇ ಕುರಿ ಕಾಯುವವನೂ ನಿಂತಿದ್ದನು. ಅವನನ್ನು ನೋಡಿದೊಡನೆ, ತೋಳವು ಹೆದರಿತು. ಅದರ ಕೈ ಕಾಲುಗಳೇ ಹೋದವು. ತರುವಾಯ ಅದು ಸಿಂಹದ ಹತ್ತಿರ ಬಂದಿತು. ಸಿಂಹವು ಅದನ್ನು ಕುರಿತು ಅಂದದ್ದು:– " ಏನಯ್ಯಾ! ಬರಿಗೈಲೆ



ಬಂದಿ? ಇದೇನು? ” ಅದಕ್ಕೆ ತೋಳವು— “ ಮಹಾ ಸ್ವಾಮೀ, ನಾನು ಮೊದಲು ಊಹಿಸಿದಂತೆ, ಅಲ್ಲಿ ಒಂದು ಕುರಿಗಳ ಹಿಂಡು ಮೇಯುತ್ತಿರುವದೇನೋ ನಿಜ; ಆದರೆ ಕುರಿಗಳು ಬಹು ಕೃಶವಾಗಿವೆ; ಅವೆಲ್ಲವುಗಳನ್ನು ತಾವು ತಿಂದರೂ ನಿಮ್ಮ ಹೊಟ್ಟೆ ತುಂಬದು; ” ಎಂದು ಉತ್ತರ ಕೊಟ್ಟಿತು.

ಸಾರಾಂಶ— ಕೈಗೆ ಬರದ ವಸ್ತುವಿಗೆ ಏನಾದರೊಂದು ಹೆಸರಿಡುವದು ಮನುಷ್ಯನ ಸ್ವಭಾವವಾಗಿದೆ.

---

## ೪೮— ಸಿಂಹವೂ ಎತ್ತೂ.

ಒಂದಾನೊಂದು ಸಮಯದಲ್ಲಿ ಒಂದು ಸಿಂಹವು ಒಂದು ಎತ್ತನ್ನು ಕೊಂದು ತಿನ್ನಬೇಕೆಂದು ಹವಣಿಸಿತು. ಆ ಮೇಲೆ ಅದು ಒಳ್ಳೇ ಆದರದಿಂದ ಎತ್ತಿಗೆ ತನ್ನ ಮನೆಗೆ ಬರಮಾಡಿಕೊಂಡು ಔತಣ ಮಾಡಿಸಬೇಕೆಂದು ಎತ್ತನ್ನು ಕುರಿತು— “ಮಿತ್ರಾ! ನಮ್ಮ ಮನೆಯಲ್ಲಿ ಈ ದಿನ ಸೊಗಸಾದ ಪಕ್ವಾನ್ನ ಮಾಡಿದ್ದೇವೆ; ನೀನೂ ನಮ್ಮ ಮನೆಯಲ್ಲಿ ಊಟ ಮಾಡಬೇಕೆಂದು ನನ್ನ ಬಲವಾದ ಅಪೇಕ್ಷೆ; ದಯವಿಟ್ಟು ನನ್ನ ಬಿನ್ನಹವನ್ನು ಮನ್ನಿಸುವಿಯಾ? ” ಎಂದಿತು. ಅದಕ್ಕೆ ಎತ್ತು ಒಪ್ಪಿಕೊಂಡು ಸಿಂಹದ ಜೊತೆ ಅದರ ಮನೆಗೆ ಹೋಯಿತು. ಅಲ್ಲಿ ಹೋಗಿ ನೋಡಲು, ದೊಡ್ಡ ದೊಡ್ಡ ಅಡಿಗೆಯ ಪಾತ್ರೆಗಳು, ಅಡಿಗೆಗಾಗಿ ಸಾಮಾನುಗಳು ಸಿದ್ಧವಿಟ್ಟದ್ದನ್ನು ಅದು ನೋಡಿತು. ಇದನ್ನೆಲ್ಲ ಕಣ್ಣಾರೆ ಕಂಡು ಎತ್ತು ಓಡತೊಡಗಿತು. ಆಗ ಸಿಂಹವು ಅಂದದ್ದು:— “ ಏನಯ್ಯಾ! ಹೀಗೆ ಓಡುವಿಯೇಕೆ ? ” ಆಗ ಎತ್ತು ಅಂದದ್ದು:— “ ನೀನು ಮಾಡಿಟ್ಟಿರುವ ಈ ಸಿದ್ಧತೆಯನ್ನು ನೋಡಿ, ಇದೆಲ್ಲ ನನ್ನ ಮಾಂಸಕ್ಕಾಗಿಯೇ ಮಾಡಿಟ್ಟಿದ್ದನೆಂದು ನಾನು ಮನಗಂಡೆ; ಆದುದರಿಂದ ನನ್ನ ದೇಹವು ಮಾಂಸದ ಪಕ್ವಾನ್ನವಾಗುವದಕ್ಕಿಂತ ಮೊದಲೇ, ಓಡಿ ಹೋಗುವದು ಲೇಸೆಂದು ಮನಗಂಡು ನಾನು ಓಡಿ ಹೋಗುವಲ್ಲೇನೂ ಆಶ್ಚರ್ಯವಿಲ್ಲವಷ್ಟೇ? ”

ಸಾರಾಂಶ:— ಘಾತುಕರ ಸವಿಮಾತಿಗೆ ಮರುಳಾಗಿ ಬಲಿಗೆ ಶಿಕ್ಕರೂ, ಅವರ ಘಾತುಕತನದ ಸ್ಪಷ್ಟ ಲಕ್ಷಣವು ತೋರಿದಾಗಾದರೂ ಜಾಣನಾದವನು ಅಲ್ಲಿಂದ ಪಾರಾಗುವದು ವಿಹಿತ.

## ೪೯— ಮಾತುಗುಳಿರಾಯ.



ಒಬ್ಬ ಮನುಷ್ಯನು ಘನವಾದ ಬೇನೆಯಿಂದ ಬೆಂಡಾಗಿ; ಬದುಕುವದಿಲ್ಲವೆಂಬುವ ಮಟ್ಟಿಗೆ ಅವನ ದೇಹಸ್ಥಿತಿ ಕ್ಷೀಣವಾಯಿತು. ವೈದ್ಯರಾದರೂ ನಿಮ್ಮ ಬೇನೆ ಗುಣವಾಗದೆಂದೇ ಹೇಳಿದರು. ಆಗ ಅವನು— “ ದೇವರೇ! ನನ್ನನ್ನು ಈ ಬೇನೆಯಿಂದ ಉಳಿಸಿದರೆ, ನಿನಗೆ ಸಾವಿರಾರು ಪುತಳಿಸರ ಮಾಡಿಸಿ ಹಾಕಿಸುವೆ ” ನೆಂದು ಹರಕೆ ಹೊತ್ತನು. ಇದನ್ನು ಕೇಳಿ ಅವನ ಹೆಂಡತಿಯು ಅವನಿಗೆ ಅಂದದ್ದು:— “ ಇದೇನು! ಇಂಥ ಅಸಾಧ್ಯವಾದ ಹರಕೆಯು ನಮ್ಮಿಂದ ಕೈಗೂಡುವದೇ? ಎಷ್ಟಾದರೂ ಬಡವರು ನಾವು; ನಮಗೆಂತು ಸಾವಿರಾರ ಪುತಳಿಗಳು ಸಿಗಬೇಕು? ” ಇದಕ್ಕೆ ಆ ಮನುಷ್ಯನು ಉತ್ತರ ಕೊಟ್ಟದ್ದು— “ ದೇವರಿಗೇನು ಬೇಕಾದಷ್ಟು ಕೆಲಸಗಳಿವೆ; ನಾನು ಕೊಡುವ ಸಾವಿರ ಪುತಳಿಗಳಿಗಾಗಿಯೇ ಅವನೇನು ನನ್ನ ಮನೆಯ ಬಾಗಿಲಲ್ಲಿ ಕುಳ್ಳಿರಲಾರನು. ” ಕೆಲ ದಿನಗಳಿಗೆ ಆ ಮನುಷ್ಯನ ಬೇನೆಯು ಗುಣವಾದ ನಂತರ ಮೊದಲು ಹರಕೆ ಹೊತ್ತಂತೆ ಹಿಟ್ಟಿನ ಒಂದು ಸಾವಿರ ಪುತಳಿಗಳನ್ನು ಮಾಡಿಸಿ, ಅವನು ದೇವರ ಹರಕೆ ಮುಟ್ಟಿಸಿದನು. ತನ್ನನ್ನು ಈ ಬಗೆಯಿಂದ ಮೋಸಗೊಳಿಸಿದನೆಂದು ದೇವರಿಗೆ ಬಹು

ಕೋಪ ಬಂದು, ಪನ್ನಿನ ವೇಷದಿಂದ ಅವನು ಆ ಮನುಷ್ಯನ ಕನಸಿನಲ್ಲಿ ಕಾಣಿಸಿಕೊಂಡು ಹೇಳಿದ್ದು:– 'ನಾಳೆ ಬೆಳಿಗ್ಗೆ ಎದ್ದು ಆ ಬೆಟ್ಟದ ಬುಡದಲ್ಲಿ ಅಗಿದು ನೋಡೆಂದರೆ, ನಿನಗೇನಾದರೂ ಹಣ ಶಿಗುವದು." ಮೂರನೇ ದಿನ ಆ ಮನುಷ್ಯನು ತನಗೆ ಶಿಗುವದೆಂದು ಹೇಳಿದ ದ್ರವ್ಯ, ಅಗಿದು ತರಲಿಕ್ಕೆಂದು ಬೆಟ್ಟಕ್ಕೆ ಹೋದನು; ಆದರೆ ಮದ್ಯ್ದವದಿಂದ ಅವನು ಕಳ್ಳರ ಕೈಗೆ ಸಿಕ್ಕನು. ತನ್ನನ್ನು ಬಿಡಲಿಕ್ಕೆ ಅವನು ಬಹುಪರಿಯಾಗಿ ಕಳ್ಳರಿಗೆ ಬಿನ್ನವಿಸಿಕೊಂಡನು; ಅಲ್ಲದೆ ಸಾವಿರಾರು ಮೋಹರುಗಳನ್ನು ಕೊಡುವೆನೆಂದೂ ಆಸೆ ತೋರಿಸಿದನು; ಆದರೆ ಕಳ್ಳರು ಅವನ ಮಾತು ನಂಬಲಿಲ್ಲ. ಅವರು ಅವನನ್ನು ಒಯ್ದು ಒಬ್ಬರಿಗೆ ಗುಲಾಮನೆಂದು ಮಾರಿದರು.

ಸಾರಾಂಶ– ಮಾತುಗುಳಿಯ ಜಂಭದ ಮಾತುಗಳು ಬಹುದಿನ ನಡೆಯುವದಿಲ್ಲ.

## ೫೦— ಖಂಡೇರಾಯನೂ, ಹಾದಿಕಾರನೂ.

ಒಬ್ಬ ಹಾದಿಕಾರನು, ಬಹು ದೂರದ ಪ್ರವಾಸಕ್ಕೆಂದು ಹೊರಟಿದ್ದನು. ಆಗ, ಅವನೊಮ್ಮೆ, ಖಂಡೇರಾಯನೊಡನೆ ನಗೆಯಾಡಬೇಕೆಂದು ಬಗೆದನು. ಆ ಮೇಲೆ ಅವನು, ತನಗೆ ಶಿಕ್ಕದ್ದರಲ್ಲಿಯ ಅರ್ಧವನ್ನು ಖಂಡೇರಾಯನಿಗೆ ಕೊಡುವದೆಂದು ಸಂಕಲ್ಪವನ್ನು ಮಾಡಿದನು. ಹಾದೀ ಹೋಗುತ್ತಿರಲು, ಅವನಿಗೆ ಒಬ್ಬಾನೊಬ್ಬ ಪ್ರವಾಸಿಯ, ಕಳೆದು ಹೋದ ಉತ್ತತ್ತಿಯ ಚೀಲವು ದೊರೆಯಿತು. ಅಗ ಅವನು ಎಲ್ಲ ಉತ್ತತ್ತಿಗಳನ್ನು ತಾನು ತಿಂದು, ಅವುಗಳ ಬೀಜಗಳನ್ನು ಮಾತ್ರ ಖಂಡೇರಾಯನ ಮುಂದೆ ಇಟ್ಟು:— "ದೇವರೇ! ನುಡಿದಂತೆ ನಾನು ನನ್ನ ನಿಯಮವನ್ನು ನಡೆಯಿಸುತ್ತಿದ್ದೇನೆ; ದಯವಿಟ್ಟು ಇದನ್ನೇ ಮನ್ನಿಸು;" ಎಂದು ನುಡಿದನು.

ಸಾರಾಂಶ:— ಪುಸ್ತಿಬಿಚ್ಚಲದಿಂದಲೇ ದೇವರನ್ನೂ ಕೂಡ, ಮೋಸಗೊಳಿಸಲೆತ್ನಿಸುವ ಮೂರ್ಖರು ಈ ಜಗದಲ್ಲಿ ಜೀವಿಸುವದುಂಟು.

## ೫೧— ಕೊಳಲೂದುವ ಜಾಲಗಾರನು.

ಜಾಲಗಾರನೊಬ್ಬನು ಮೀನಗಳನ್ನು ಹಿಡಿಯುವದಕ್ಕಿಂತ, ಕೊಳಲೂದುವಲ್ಲಿ ಬಲು ಕುಶಲನಾಗಿದ್ದನು. ಒಂದಾನೊಂದುದಿನ, ಅವನು ನದಿಯ ದಡವನ್ನು ಸೇರಿ, ಕೊಳಲನ್ನು ನುಡಿಸುತ್ತ ಕುಳಿತುಕೊಂಡನು. ಕೊಳಲ ನುಡಿಗೇಳಿ, ಒಂದಾದರೂ ಮೀನವು ಅವನ ಬಳಿಗೆ ಬರಲಿಲ್ಲ. ಆಗವನು ಕೊಳಲನ್ನು ಕೆಳಗಿಟ್ಟು ತನ್ನ ಜಾಲವನ್ನು ಜಲದಲ್ಲಿ ನೂಕಿದನು. ಕೊಂಚ ಕಾಲದಲ್ಲಿಯೇ ಬಹು ಮೀನಗಳು ಬಲೆಗೆ

ಸಿಲುಕಿದವು. ಇದನ್ನು ನೋಡಿ ಜಾಲಗಾರನು:– "ಆಹಹ! ಈ ಮೀನಗಳೆಷ್ಟು ಅರಸಿಕ ವಾಗಿವೆ; ಇಷ್ಟು ಹೊತ್ತು ನಾನು ಕೊಳಲು ನುಡಿಸುತ್ತಿದ್ದರೂ, ಆ ದನಿಗೇಳಿ ಇವು ಕುಣಿಯಲಿಲ್ಲ; ಆದರೆ ದನಿಯು ನಿಲ್ಲಲು, ಇವು ಈಗ ತಾನೇ ಕುಣಿಯತೊಡಗಿವೆ; ಎಂದನು.

———

## ೫೨— ಹುಡುಗನೂ ಹಾವೂ.

ಒಬ್ಬ ಕುರುಬರ ಹುಡುಗನು ಒಮ್ಮೆ ಸಂಜೆಯ ಸಮಯದಲ್ಲಿ, ಅಡವಿಯಲ್ಲಿ ಕಟ್ಟಿಗೆಗಳನ್ನು ಕೂಡುಹಾಕುತ್ತಿದ್ದನು. ಆಗ ಅವನು ತಪ್ಪಿ, ಒಂದು ಹಾವಿಗೆ ಕೈ ತಗಲಿಸಿದನು. ಆದರೂ, ತಪ್ಪಿ ಕೈ ತಗಲಿತೆಂದು ತಿಳಿದು, ಆಗ ಅವನನ್ನು ಹಾವು ಕಚ್ಚಲಿಲ್ಲ. ಆದರೆ ಆ ಹುಡುಗನಿಗೆ:– " ಎಲೋ! ಮತ್ತೆಂದೂ ಹೀಗೆ ಮಾಡಬೇಡ; ನೀನು ತಿಳಿದೂ ತಿಳಿದೂ ನನ್ನನ್ನು ತಡೆಯುವಿಯಾದರೆ, ಅದರ ಪರಿಣಾಮವೆಂದೂ ಒಳಿತಾಗದು; ಚನ್ನಾಗಿ ಇದನ್ನು ನೆನಪಿನಲ್ಲಿಡು; ಎಂದು ನುಡಿಯಿತು.



ಸಾರಾಂಶ— ಯಾವದೊಂದು ಕೆಲಸ ಮಾಡಿದಲ್ಲಿ, ಅದನ್ನು ಮಾಡಿದ ಮನುಷ್ಯನ ಒಳಿತು, ಕೆಡಕು ಉದ್ದೇಶವನ್ನರಿತು, ಜಾಣರು ಆ ಕೆಲಸದ ಪರೀಕ್ಷೆಯನ್ನು ಮಾಡುತ್ತಾರೆ.

———

## ೫೩— ಜಾಲಗಾರನೂ ಅವನ ದೈವವೂ.

ಒಬ್ಬಾನೊಬ್ಬ ಜಾಲಗಾರನು, ಅನೇಕಸಾರೆ, ತನ್ನ ಬಲೆಯನ್ನು ಜಲದಲ್ಲಿ ಚಲ್ಲಿಕೊಟ್ಟನು. ಆದರೂ ಒಂದೂ ಮೀನವು ಅವನಿಗೆ ಸಿಕ್ಕಲಿಲ್ಲ. ಆಗ ಅವನು ನಿರಾಶನಾಗಿ, ತನ್ನ ಸಾಧನೆಗಳನ್ನೆಲ್ಲ ಕೂಡಹಾಕಿಕೊಂಡು ಮನೆಗೆ ಹೋಗಲನುವಾದನು. ಅಷ್ಟು

ರಲ್ಲಿಯೇ ದೊಡ್ಡದೊಂದು ಮೀನವು ತನ್ನಷ್ಟಕ್ಕೆ ತಾನೇ ಹಾರಿಬಂದು, ಆತನ ಬುಟ್ಟಿಯಲ್ಲಿ ಬಿದ್ದಿತು. ಅದನ್ನು ನೋಡಿ ಆ ಜಾಲಗಾರನಿಗಾದ ಉಲ್ಲಾಸವು ಹೇಳಲಳವಲ್ಲ.

ಸಾರಾಂಶ:— ಅನೇಕಸಾರೆ ಯತ್ನಪಟ್ಟರೂ ಸಾಧ್ಯವಾಗದ ಸಂಗತಿಯು, ಒಮ್ಮೊಮ್ಮೆ ನಿರಾಯಾಸವಾಗಿ ಸಿದ್ಧಿಸುವದುಂಟು. ಆದರೆ ಇದು ಅಪರೂಪ.

———————

## ೫೪— ಕಡಜೀರಗಿಹುಳಗಳೂ ಜೇನುತುಪ್ಪದ ತಪ್ಪೇಲಿಯೂ.

ತೆರೆದಿಟ್ಟ ಜೇನುತುಪ್ಪದ ತಪ್ಪೇಲಿಯೊಂದನ್ನು ಕೆಲವು ಕಡಜೀರಗಿಹುಳಗಳು ಕಂಡವು. ತುಪ್ಪವನ್ನು ತಿನ್ನಬೇಕೆಂಬ ಅತ್ಯಾಶೆಯಿಂದ ಹುಳಗಳೆಲ್ಲವುಗಳೂ ತಪ್ಪೇಲಿಯಲ್ಲಿ ಭರದಿಂದ ಸೇರಿಕೊಂಡವು. ಇವರಿಂದ ತಪ್ಪೇಲಿಯಲ್ಲಿ ತಿಕ್ಕಾಟವು ಹೆಚ್ಚಾಗಿ ಹೋಗಿ, ಹುಳಗಳಿಗೆ ಹೊರ ಹೊರಡಲು ಕೂಡ ಬಿರಿಯಾಯಿತು. ಅಗ ಅವಕ್ಕೆ ಹಿಚಿಕಿಕೊಂಡಂತಾಗಿ, ಹುಳಗಳೆಲ್ಲವೂ ಅಲ್ಲಿಯೇ ಜೀವವನ್ನು ಬಿಟ್ಟವು.

ಸಾರಾಂಶ:— ಅತ್ಯಾಶೆಯ ಫಲವನ್ನು ಒಮ್ಮೊಮ್ಮೆ ಆಗಲೇ ಭೋಗಿಸಬೇಕಾಗುತ್ತದೆ.

———————

## ೫೫— ಬೇಟೆಗಾರನೂ ಪಾರಿವಾಳವೂ.

ಒಮ್ಮೆ, ಒಂದು ಪಾರಿವಾಳವು ಒಬ್ಬ ಬೇಟೆಗಾರನ ಬಲೆಯಲ್ಲಿ ಸಿಕ್ಕಿತು. ಆಗ ಅದು ದಯೆಯು ದನಿಯಿಂದ:— "ಅಣ್ಣಾ! ನನ್ನನ್ನೀಗ ದಯಮಾಡಿ ನೀನು ಬಿಟ್ಟುಬಿಡುವಿಯಾದರೆ, ನಾನು ಬೇರೆ ಅನೇಕ ಪಾರಿವಾಳಗಳನ್ನು ಮೋಸಗೊಳಿಸಿ, ನಿನ್ನ ಬಲೆಯಲ್ಲವು ಬೀಳುವಂತೆ ಮಾಡುವೆನು;" ಎಂದಿತು. ಇದನ್ನು ಕೇಳಿ,— "ಏನು! ನಿನ್ನನ್ನು ಬಿಟ್ಟುಬಿಡುವದಂತೂ ನನ್ನ ಮನದಲ್ಲಿಯೇ ಇರಲಿಲ್ಲ; ಮೇಲೆ, ನಿನ್ನ ಈ ಭಾಷಣದಿಂದಂತೂ, ನೀನು ದಯೆಗೆ ಪಾತ್ರನಿರುವದಿಲ್ಲೆಂದೇ ನನಗೆ ಎನಿಸಹತ್ತಿದೆ: ಯಾಕಂದರೆ ತಾನು ಉಳಿಯಲೆಂದು, ತನ್ನವರನ್ನೂ ಕೂಡ ಸಂಕಟಕ್ಕೆ ಸಿಲುಕಿಸಲು ಸಿದ್ಧರಾಗುವವರು ನೀಚರಲ್ಲವೇ? ಅವರಿಗೆ ಮರಣಕ್ಕಿಂತಲೂ ದಾರುಣವಾದ ದಂಡನೆಯೂ ಕಡಿಮೆಯೇ ಸರಿ;" ಎಂದು ಬೇಟೆಗಾರನು ಅಂದನು.

ಸಾರಾಂಶ:— ಸ್ವಾರ್ಥಕ್ಕಾಗಿ ಸ್ವಜನರನ್ನು ಘಾತಿಸಲೆಳಸುವವನು ಅತಿ ಪಾತಕಿಯೇ. ಅವನಷ್ಟು ನೀಚನು ಅವನೇ.

## ೫೬— ಸಿಂಹವೂ, ಕತ್ತೆಯೂ, ಕೋಳಿಯೂ.



ಕೋಳಿಯ ಕೂಗಿಗೆ ಸಿಂಹವು ಭಯಪಡುವದೆಂದು ವಾರ್ತೆಯು. ಒಮ್ಮೆ ಒಂದು ಕತ್ತೆಯೂ ಕೋಳಿಯೂ ಕೂಡಿ ಮೇಯುತ್ತಿರುವಾಗ, ಸಿಂಹವೊಂದು ಅಲ್ಲಿಗೆ ಬಂದಿತು. ಅದನ್ನು ನೋಡಿದೊಡನೆಯೇ ಕೋಳಿಯು ಉಚ್ಚಸ್ವರದಿಂದ ಕೂಗಹತ್ತಿತು. ಕೂಗು ಕೇಳಿದೊಡನೆ ಸಿಂಹವು ಭಯದಿಂದ ಓಡತೊಡಗಿತು. ತನಗೇ ಬೆದರಿ ಸಿಂಹವು ಓಡಿತೆಂದು ಬಗೆದು, ಕತ್ತೆಯು ಒಳ್ಳೇ ಆಧ್ಯತೆಯಿಂದ ಸಿಂಹದ ಬೆನ್ನಹತ್ತಿತು. ಕೋಳಿಯ ಕೂಗು ಕೇಳಿಸದಷ್ಟು ದೂರಹೋಗಿ, ಸಿಂಹವು ಹಿಂತಿರುಗಿ ತನ್ನ ಪಂಜರದ ಒಂದೇ ಹೊಡೆತದಿಂದ ಕತ್ತೆಯನ್ನು ನೆಲಕ್ಕುರುಳಿಸಿತು.

ಸಾರಾಂಶ:— ದೊಡ್ಡವರು ಸ್ವಲ್ಪ ಅಂಜಿಕೆಯಲ್ಲಿರಲು, ತಮ್ಮನ್ನೇ ನೋಡಿ ಅವರಂಜಿರುವರೆಂದು ಬಗೆದು, ಅವರನ್ನು ತೊಂದರೆ ಪಡಿಸುವವರು ಅತಿ ಮೂರ್ಖರೇ ಸರಿ. ಆದರೆ ಅವರ ಪರಿಣಾಮವು ಕಡೆಗೆ ಮೇಲಿನ ಕಥೆಯಲ್ಲಿಯ, ಕತ್ತೆಯಂತಾಗುವಲ್ಲಿ ಸಂದೇಹವಿಲ್ಲ.

## ೫೭— ಮುದಿಕೆಯೂ ವೈದ್ಯನೂ.

ಮುದಿಕೆಯೊಬ್ಬಳು, ತನ್ನ ಕಣ್ಣಿಲ್ಲಿ ಹೂವು ಬಿದ್ದು ಕಣ್ಣು ಕಾಣದಂತಾಗಿರಲು, ಒಬ್ಬ ಚನ್ನಾದ ವೈದ್ಯನನ್ನು ಕರೆತಂದು ಅವನಿಗೆ ಕಣ್ಣು ತೋರಿಸಿದಳು. ಆ ವೈದ್ಯನು ತನ್ನ ಕಾರ್ಯದಲ್ಲಿ ಕುಶಲನಿದ್ದನು; ಆದರೆ ಬಲು ಠಕ್ಕನಾಗಿದ್ದನು. ಅವನು ಪ್ರತಿದಿವಸ ಔಷಧ ಕೊಡಲೆಂದು ಆ ಮುದಿಕೆಯ ಮನೆಗೆ ಬಂದು, ಆಕೆಯ ಕಣ್ಣು ಕಟ್ಟಿ, ಹೋಗುವಾಗ್ಯೆ ಮನೆಯಲ್ಲಿಯ ಏನೊಂದು ಪದಾರ್ಥವನ್ನು ಒಯ್ಯುತ್ತಿದ್ದನು. ಆ ಮುದಿಕೆಯ ಕಣ್ಣುಗಳು ಚನ್ನಾಗುವವರೆಗೂ ವೈದ್ಯರ ಈ ಕಾರ್ಯವು ಹಾಗೇ ಸಾಗಿತ್ತು. ಆದುದರಿಂದಲೇ ಅವಳ ಮನೆಯು ತೆರವಾಗುತ್ತ ಬಂದಿತ್ತು. ಕಡೆಗೆ ವೈದ್ಯನು ಕಣ್ಣುಗಳನ್ನು ನೆಟ್ಟಗೆ ಮಾಡಿದ್ದಕ್ಕಾಗಿ ಆ ಮುದಿಕೆಯ ಬಳಿಯಲ್ಲಿ ಮೆಚ್ಚು ಕೇಳಿದನು. ಆಗ ಅವಳು:— "ನನ್ನ ಕಣ್ಣುಗಳು ಮುನ್ನಿಗಿಂತಲೂ ಹೆಚ್ಚು ಮಂದ ವಾಗಿವೆ; ಅಂದಮೇಲೆ ನಿಮಗೆ ನಾನು ಮೆಚ್ಚು ಕೊಡುವದೆಂತು?" ಎಂದಳು. ಆಗ ವೈದ್ಯನು ಕೋಪಗೊಂಡು ಒಳ್ಳೇದು! ನೋಡುವೆನು! ಎಂದು ಮುದಿಕೆಯ ಮೇಲೆ ಹಲ್ಲು ಕಚ್ಚುತ್ತ, ನ್ಯಾಯಾಧೀಶನ ಬಳಿಯಲ್ಲಿ ತನ್ನ ಮೆಚ್ಚಿಗಾಗಿ ದೂರಹೇಳಿದನು. ನ್ಯಾಯಾಧೀಶನ ಆಜ್ಞೆಯಂತೆ ಆ ಮದಿಕೆಯು ನ್ಯಾಯಸ್ಥಾನಕ್ಕೆ ಬರಲು, ಮೆಚ್ಚುಕೊಡುವೆನೆಂದು ವೈದ್ಯನೊಡನೆ ಮಾತನಾಡಿರುವೆಯಾ? ಎಂದು ನ್ಯಾಯಾಧೀಶನು ಕೇಳಿದನು. ಆಗ ಆ ಮುದಿಕೆಯು:— "ದಣಿಯರೇ! ಈ ವೈದ್ಯರನ್ನು ನನ್ನ ಮನೆಗೆ ಕರೆದೊಯ್ಯುವ ಪೂರ್ವದಲ್ಲಿ, ನನ್ನ ಮನೆಯಲ್ಲಿ ಅನೇಕ ವಸ್ತುಗಳು ನನಗೆ ಕಾಣುತ್ತಿದ್ದವು; ಈಗ ವೈದ್ಯರು ನನ್ನ ಕಣ್ಣುಗಳು ಗುಣವಾಗಿವೆಯೆಂದು ಹೇಳುತ್ತಿದ್ದರೂ, ಮನೆಯಲ್ಲಿಯ ಒಂದೂ ಒಡವೆಯು ನನಗೆ ಕಾಣಬರುವದಿಲ್ಲ; ಇದರ ಮೇಲಿಂದ ಬಲ್ಲವರು ಎಲ್ಲವನ್ನೂ ತಿಳಿದುಕೊಳ್ಳಿರಿ;" ಎಂದಳು. ಇದನ್ನು ಕೇಳಿ, ನಡೆದ ಸಮಾಚಾರವೆಲ್ಲ ನ್ಯಾಯಾಧೀಶನ ಸ್ಮರಣೆಗೆ ಬಂದು, ಅವನು ಆ ಮುದಿಕೆಯ ಎಲ್ಲ ಒಡವೆಗಳನ್ನು ಅವಳಿಗೆ ತಿರುಗಿ ಕೊಡುವದೆಂದು ವಿಧಿಸಿದನು. ವೈದ್ಯರ ಮೆಚ್ಚಿನ ಮಾತಂತೂ ಮೇಲೆಯೇ ಕಾಣುತ್ತದೆ.

ಸಾರಾಂಶ—ಮೋಸಗಾರಿಕೆಯು ಒಂದಿಲ್ಲೊಂದುದಿನ ಬಯಲಿಗೆ ಬರುವದು ನಿಶ್ಚಯ.

---

## ೫೮— ಸೀತಾಫಲವೂ, ರಾಮಫಲವೂ,

ಒಂದಾನೊಂದು ದಿನ ಸೀತಾಫಲ, ರಾಮಫಲ ಇವೆರಡೂ ತಮ್ಮ ತಮ್ಮ ಮೇಲ್ಮೆಯ ಸಲುವಾಗಿ ಕಾದಾಡುತ್ತಿದ್ದವು. ಕಾದಕಾದುತ್ತ ಅವುಗಳ ಕೂಗು ಬಳಿಯಲ್ಲಿಯ ತೋಟವೊಂದರಲ್ಲಿಯ ಒಂದು ಅಂಜೀರ ಹಣ್ಣಿಗೆ ಕೇಳಿಸಿತು. ಆಗ ಆ ಅಂಜೀರವು

ಅವೆರಡಕ್ಕೆ:— "ಎಲೋ! ಹೀಗೆ ಬಡಿದಾಡುವಿರೇಕೆ? ನಾವೆಲ್ಲರೂ ನಲುಮೆಯ ಗೆಳೆಯರು. ಹೀಗಿದ್ದು ನಾವೇ ಹೀಗೆ ಜಗಳಾಡುತ್ತಿರವದು ಒಳಿತೇ? ಅಲ್ಲ ತೆಗೆ?" ಎಂದಿತು.

ಸಾರಾಂಶ:— ತಮ್ಮ ಮೇಲ್ಮೆಯ ವಿಷಯದಲ್ಲಿ ಅನ್ಯರೊಡನೆ ವಾದಿಸುತ ಕೂಡ್ರುವ ಚಟವು ಎಷ್ಟೋ ಜನರಲ್ಲಿರುತ್ತದೆ.

---

### ೨೯— ಕೋಳಿಯೂ, ನಾಯಿಯೂ, ನರಿಯೂ.

ಒಂದು ಕೋಳಿಯೂ ನಾಯಿಯೂ ಪ್ರವಾಸಕ್ಕೆ ಹೊರಟಿದ್ದವು. ಒಂದು ದಿವಸ ರಾತ್ರಿ, ಅವೆರಡೂ ಒಂದು ಗಿಡದಡಿಯಲ್ಲಿ ವಾಸವಾದವು. ಕೋಳಿಯು ಮರದ



ಮೇಲೇರಿ ಕುಳಿತಿತು. ನಾಯಿಯು ಬೊಡ್ಡೆಯ ಹತ್ತರ ಬಿದ್ದುಕೊಂಡು ನಿದ್ರಿಸಿತು. ನಸುಕಾಗಿ ನೇಸರನು ಉದಿಸಲು, ಆಗ, ಕೋಳಿಯು ಗಟ್ಟಿಯಾಗಿ ಕೂಗಹತ್ತಿತು. ಆ ದನಿಗೇಳಿ ಒಂದು ನರಿಯು ಅಲ್ಲಿಗೆ ಬಂದಿತು. ಅದು, ಕೋಳಿಯು ಎತ್ತರದ ಮರನೇರಿ ಕುಳಿತದ್ದನ್ನು ಕಂಡು, ಅದನ್ನು ಹೇಗಾದರೂ ವಂಚಿಸಿ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕೆಂದು ಬಗೆದು:— "ಎಲೋ! ನಿನ್ನ ಸ್ವರವೆಷ್ಟು ಮಧುರವಿದೆ! ನಿನ್ನ ಗಾಯನ ಕೇಳಿ ನಿನ್ನನ್ನು ಆಲಂಗಿಸುವಷ್ಟು ಆನಂದವು ಘನಗಾಗಿದೆ;" ಎಂದಂದಿತು. ಈ ವಂಚಕತನದ ವಚನಗಳನ್ನು ನೆನೆದು ಕೋಳಿಯು:—

"ಗೆಳೆಯನೇ! ಗಿಡದ ಬುಡದಲ್ಲಿ ಮಲಗಿರುವ ಕಾವಲುಗಾರನನ್ನೆಬ್ಬಿಸಿ, ಅವನಿಗೆ

ಕದವನ್ನು ತೆರೆಯಲು ಬೇಡಿಕೋ, ಅದರಿಂದ ನನ್ನ ನಿನ್ನ ಭೆಟ್ಟಿಯಾದೀತು; ಎಂದು ನುಡಿಯಿತು. ಆ ಮಾತುಗಳು ನಿಜನೆಂದು ನೆನೆದು ನರಿಯು ನಾಯಿಯನ್ನು ಕರೆಯಿತು. ಆ ಕರೆವನ್ನು ಕೇಳಿದ ಕೂಡಲೇ ನಾಯಿಯು ಎಚ್ಚತ್ತು ಒಂದು ಕ್ಷಣದಲ್ಲಿ ನರಿಯನ್ನು ಹರಿದು ಬಿಟ್ಟಿತು.

ಸಾರಾಂಶ:— ಸಾಮಾನ್ಯರಿಂದಲೂ ಕೂಡ ವಂಚಕನಿಗೆ ಚನ್ನಾಗಿ ಪ್ರಾಯಶ್ಚಿತ್ತವು ಆಗೇ ತೀರುತ್ತದೆ.

---

## ೬೦— ಸೊಂಡಿಲಿಯೂ ಅದರ ತಾಯಿಯೂ.

ಒಮ್ಮೆ ಒಂದು ಸೊಂಡಿಲಿಯ ಮರಿಯು ತನ್ನ ಮೂಗಿನಲ್ಲಿ ಆಡಾಡುತ್ತ ನಸ್ಯದ ಪುಡಿಯನ್ನು ಹಾಕಿಕೊಂಡಿತು. ಅದರಿಂದ ಅದಕ್ಕೆ ತುಸು ತೊಂದರೆಯಾಗ ತೊಡಗಿತು. ಆಗ ಅದು ತನ್ನ ತಾಯಿಗೆ:— " ಅವ್ವಾ ! ನನ್ನ ಕಿವಿಯಲ್ಲಿ ಗಟ್ಟಿಯಾಗಿ ಕೂಗಿದಂತೆ ಅದೆಷ್ಟೋ ದೊಡ್ಡ ಸಪ್ಪಳವಾಗುತ್ತಿದೆಯಲ್ಲೆ ! ನೂರು ನಗಾರಿಗಳನ್ನು ಒಮ್ಮೆಲೆ ಹೊಯ್ದಂತೆ ಕಿವಿಗೆ ಕೇಳಬರುತ್ತಿದೆಯಲ್ಲೆ ! ಮತ್ತು ನನ್ನ ಕಣ್ಣಿಂದೆಯಂತೂ ದೊಡ್ಡದೊಂದು ಕುಲಿಮೆಯನ್ನು ಹೊತ್ತಿಸಿದಂತೆ ಬೆಳಕು ಹೊಳೆಯುತ್ತಿದೆ ! " ಎಂದದೆಷ್ಟೋ ಬಗೆಯಾಗಿ ಒಂದೇಸವನೆ ಮಾತಾಡಿತು. ಆಗ ಅದರವ್ವನು:— " ಮಗುವೇ ನೀನು ವಟವಟ ಹಚ್ಚಿರುವದೆಷ್ಟು? ಹೀಗೆ ಸುಳ್ಳು ಸುದ್ದಿಗಳ ಸೊಲ್ಲಿನಿಂದ ಕಡ್ಡಿಯನ್ನೂ ಗುಡ್ಡವಾಗಿ ಮಾಡುವ ದುಶ್ಚಟಿಯು ಒಳಿತಲ್ಲ ನೋಡು " ಎಂದು ಬುದ್ಧಿಯನ್ನು ಕಲಿಸಿತು.

---

## ೬೧— ಕಡಜೀರಿಗೆಹುಳಗಳೂ, ಕೋಳಿಗಳೂ, ಒಕ್ಕಲಿಗನೂ.

ಕೆಲವು ಕಡಜೀರಿಗೆ ಹುಳಗಳೂ ಕೋಳಿಗಳೂ ನೀರಡಿಕೆಯಿಂದ ಬಹುನೊಂದು, ಒಬ್ಬಾನೊಬ್ಬ ಒಕ್ಕಲಿಗನನ್ನು ಸಾರಿ:— " ಮಹರಾಯಾ, ನಮಗಷ್ಟು ಕುಡಿಯಲು ನೀರು ಕೊಡು " ಎಂದು ಬೇಡಿಕೊಂಡವು. ಅವನಿಗೆ, ಪ್ರತಿಯಾಗಿ, ಕೋಳಿಗಳು ಹೊಲವನ್ನು ಕೆದರಿ ಕೊಡಲೊಡಂಬಟ್ಟವು. ಕಡಜೀರಿಗೆ ಹುಳಗಳು ಅವನ ಹೊಲವನ್ನು ಕಳ್ಳರಿಂದ ಕಾಯಲು ಸಮ್ಮತಿಸಿದವು. ಇದೆಲ್ಲವನ್ನೂ ಕೇಳಿ ಒಕ್ಕಲಿಗನು:— " ಮನೆಗೆದ್ದು ಮಾರು ಗೆದೆ, ಎಂಬಂತೆ ನನ್ನ ಈ ಎತ್ತುನಾಯಿಗಳ ಯೋಗಕ್ಷೇಮವನ್ನು ನೋಡಲು ನಾನು ತೆಗೆದುಕೊಳ್ಳಬೇಕು; ನೀವು ಮಾಡಲೊಡಂಬಟ್ಟ ಕೆಲಸಗಳನ್ನು ಅವೇ ಮಾಡಬಲ್ಲವು; " ಎಂದು ಹೇಳಿದನು.

ತಾತ್ಪರ್ಯವೇನೆಂದರೆ:— ತನ್ನವರನ್ನು ಬನ್ನಬಡಿಸುತ್ತ ಅನ್ಯರಿಗೆ ಅನ್ನ ಹಾಕಲು ಹೋಗುವದು ವ್ಯವಹಾರವಲ್ಲ.

## ೬೨— ಎರಡು ಕಪ್ಪೆಗಳು.



ದೊಡ್ಡದೊಂದು ಕೆರೆಯಲ್ಲಿ ಕಪ್ಪೆಗಳೆರಡು ವಾಸವಾಗಿದ್ದವು. ಒಂದು ವರ್ಷ ಬೇಸಿಗೆಯ ಬಿಸಲು ಬಹು ಪ್ರಖರವಾಗಿ, ಕೆರೆಯೊಳಗಿನ ನೀರೆಲ್ಲ ಬತ್ತಿಹೋದವು. ಆ ಎರಡೂ ಕಪ್ಪೆಗಳು ಆಗ, ಎಲ್ಲಿಯಾದರೂ ನೀರಿದ್ದಲ್ಲಿಗೆ ಹೋಗುವದೆಂದು ಹೊರಟವು. ಹೋಗಹೋಗುತ್ತ ಹಾದಿಯಲ್ಲಿ ಬಲು ಆಳವಾಗಿದ್ದ ಬಾವಿಯೊಂದನ್ನು ಅವು ನೋಡಿದವು. ಅದರಲ್ಲಿ ನೀರೂ ಬಹಳ ಇದ್ದವು. ಆಗ ಎರಡರಲ್ಲಿ ಒಂದು ಕಪ್ಪೆಯು ತನ್ನ ಜೊತೆಗಾರನಿಗೆ:— "ಗೆಳೆಯಾ! ಈ ಬಾವಿಯು ನಮ್ಮ ವಾಸಕ್ಕೆ ಯೋಗ್ಯವಾಗಿದೆ; ನಡೆ; ಇಬ್ಬರೂ ಇದರಲ್ಲಿ ಹಾರುವಾ;" ಎಂದಂದಿತು. ಎರಡನೇಯದು ಕೊಂಚ ಚತುರನಾಗಿತ್ತು. ಗೆಳೆಯನ ನುಡಿಗಳನ್ನು ಕೇಳಿ:— "ಅಲ್ಲೋ! ನೀನನ್ನುವದು ನಿಜ; ಆದರೆ ಈಗ ನಾವು ಇಳಿದು, ಮುಂದೆ ಬಾವಿಯು ಬತ್ತಿದರೆ, ಮೇಲಕ್ಕೆ ಹತ್ತಿ ಬರುವದು ಹೇಗೆ?" ಎಂದು ಅದು ಮರಳಿ ಮಾತಾಡಿತು.

ಒಟ್ಟಾರೆ ಹೇಳುವದೆಂದರೆ:— ಪೂರ್ಣ ವಿಚಾರಿಸದೆ ಏನನ್ನೂ ಮಾಡಕೂಡದು.

## ೬೩— ಖಂಡೇರಾಯನೂ ಹಾವೂ.

ದೇವನಾದ ಖಂಡೇರಾಯನ ಮದುವೆಯಾಯಿತು. ಆ ಕಾಲಕ್ಕೆ ಅನೇಕ ಪ್ರಾಣಿಗಳು ಅನೇಕ ಪ್ರಕಾರದ ಒಡವೆಗಳನ್ನು ಉಡುಗರೆಯಾಗಿ ತಂದು ಕೊಡುತ್ತಿದ್ದವು. ಒಂದು ಹಾವು ಗುಲಾಬಿ ಹೂವನ್ನು ತೆಗೆದುಕೊಂಡು ಖಂಡೇರಾಯನ ಹತ್ತಿರ ಬಂದಿತು. ಅದನ್ನು ನೋಡಿ ಖಂಡೇರಾಯನು:—— "ಎಲೋ, ನೀನು ನನಗೆ ಕೊಡಲು ತಂದ ಒಡವೆಯು ಸ್ವೀಕರಿಸಲಿಕ್ಕೆ ಯೋಗ್ಯವಾಗಿದೆ; ನಿಜವು; ಆದರೆ ಆ ಒಡವೆಯನ್ನು ನಿನ್ನಂಥ ಕಡು ಕೆಟ್ಟ ಪ್ರಾಣಿಯಿಂದ ತೆಗೆದುಕೊಳ್ಳಲು ನನಗೆ ಚನ್ನಾಗಿ ಎನಿಸುವದಿಲ್ಲ." ಎಂದು ಅಂದನು.

ಸಾರಾಂಶ:—— ಒಡವೆಯು ಬಲು ಚನ್ನಾಗಿದ್ದರೂ, ಕೊಡುವ ಮನುಷ್ಯನ ಯೋಗ್ಯತೆಯನ್ನು ತಿಳಿದು, ಅದನ್ನು ಮನುಷ್ಯನು ಸ್ವೀಕರಿಸಬೇಕು. ಯಾಕಂದರೆ, ನೀಚ ಮನುಷ್ಯನು ಸ್ವಲ್ಪೇ ಉಪಕಾರ ನಮಗೆ ಮಾಡಿದರೂ, ಅದರಿಂದ ನಮಗೆ ಮುಂದೆ ತೊಂದರೆಯಾಗದೆ ಬಿಡದು.

— — — —

## ೬೪ ಮನುಷ್ಯನೂ ಚಿಕ್ಕಾಡೂ.

ಒಬ್ಬ ಮನುಷ್ಯನ ಬೆನ್ನು ಕಡಿಯಹತ್ತಿತು. ಆಗ ಅವನು ಕೈಚಾಚಿ ನೋಡುವವಲ್ಲಿ, ಅಲ್ಲಿ ಅವನಿಗೊಂದು ಚಿಕ್ಕಾಡು ಸಿಕ್ಕಿತು. ಅದಕ್ಕೆ ಆ ಮನುಷ್ಯನು:—— "ನನ್ನ ರಕ್ತದಿಂದ ಜೀವಿಸುವ ದುಷ್ಟ ಪ್ರಾಣಿಯು ನೀನಾರು?" ಎಂದು ಕೇಳಿದನು. ಆಗ ಚಿಕ್ಕಾಡು:—— "ದೇವರ ಇಚ್ಛೆ ಇದು. ಅವನೇ ನನ್ನನ್ನು ರಕ್ತದಿಂದ ಜೀವಿಸಬೇಕೆಂದು ನಿಯಮಿಸಿರುವನು; ಅಲ್ಲದೆ ನನ್ನ ಕಡಿತವು ಮನುಷ್ಯನಿಗೆ ಸಾವು ತರುವಷ್ಟು ಭಯಂಕರವಾಗಿಲ್ಲ;" ಎಂದು ಮಾತಾಡಿತು. ಇದಕ್ಕೆ ಆ ಮನುಷ್ಯನು:— "ನಿನ್ನ ಕಡಿತವು ಅಷ್ಟೊಂದು ಭಯಂಕರವಾಗಿರದಿದ್ದರೂ, ಅದು ಬಹಳ ತ್ರಾಸದಾಯಕವಾಗಿದೆ; ಇದರಲ್ಲಿ ಸಂಶಯವೇನೂ ಇಲ್ಲ; ಇನ್ನು ಮುಂದೆ, ಆ ತ್ರಾಸ ತಪ್ಪಿಸಬೇಕೆಂದು ನಿನ್ನನ್ನು ಈಗ ನಾನು ಕೊಲ್ಲುವವನೇ;" ಎಂದು ಅಂದನು.

ಹೇಳುವ ಮಾತೆಂದರೆ:—— ಮನುಷ್ಯನು ಪ್ರಾಣಿಗಳನ್ನು ಹಿಂಸಿಸಬಾರದೆಂಬದು ನಿಜ. ಆದರೆ ಕಾರಣವಿಲ್ಲದೆ ಸುಮ್ಮನೇ ಅನ್ಯರನ್ನು ಪೀಡಿಸುವ ಪ್ರಾಣಿಗಳನ್ನು, ತಡೆತಡೆದು, ಒಮ್ಮೆ ಯಾವರೂ ಕೊಲ್ಲುವ ವೇಳೆಯು ಮನುಷ್ಯನಿಗೆ ಬಂದೇಬರುತ್ತದೆ.

## ೬೫— ಹಾಡುವ ಹಕ್ಕಿಯೂ ತೊಗಲಬಾವುಲಿಯೂ.

ಪಂಜರದಲ್ಲಿಟ್ಟ ಹಕ್ಕಿಯೊಂದು, ರಾತ್ರಿಯಲ್ಲಿ ಹಾಡತೊಡಗಿತು. ಅದನ್ನು ಕೇಳಿ ಒಂದು ತೊಗಲ ಬಾವುಲಿಯು ಪಂಜರದ ಹತ್ತರ ಬಂದು:— "ಎಲೋ, ರಾತ್ರಿಯಂತೆ ಹಗಲೇಕೆ ನೀನು ಹಾಡುವದಿಲ್ಲ?" ಎಂದು ಕೇಳಿತು. ಆ ಹಕ್ಕಿಯು:— "ಒಮ್ಮೆ ನಾನು ಹಗಲಲ್ಲಿ ಹಾಡಿದಕ್ಕೆ ನನ್ನನ್ನು ಹಿಡಿದರು. ಇನ್ನುಮುಂದೆ ನಾನು ಅನ್ಯರಿಗೆ ಸಿಗಬಾರದೆಂದು ಹಗಲಲ್ಲಿ ಹಾಡದಿರುವ ನಿಶ್ಚಯವನ್ನೇ ಮಾಡಿದ್ದೇನೆ." ಎಂದು ಉತ್ತರ ಕೊಟ್ಟಿತು. ಇದಕ್ಕೆ ತೊಗಲಬಾವಲಿಯು:— "ಈ ವಿಷಯದಲ್ಲಿ ಮೊದಲೇ ನೀನು ಯೋಚಿಸಬೇಕಾಗಿತ್ತು; ಈಗಂತೂ ನಿನ್ನನ್ನು ಪಂಜರದಲ್ಲಿ ಹಿಡಿದಿಟ್ಟಿದ್ದಾರೆ; ಅಂದಮೇಲೆ ನೀನು ಈಗ ಹಗಲು ಹಾಡಿದರೂ ನಿನ್ನನ್ನು ಹಿಡಿಯುವರಾರು?



ಸಾರಾಂಶ— ಒಮ್ಮೆ ಒಂದು ಮಾತು ಸಂಭವಿಸಿ ಹೋದವರೆ, ಆ ಮೇಲೆ ಅದನ್ನು ತಪ್ಪಿಸಲೆತ್ನಿಸುದು ಮೂರ್ಖತನವು.

———

## ೭೬— ಚಂಡಿಯೂ ಚಿಕ್ಕಾಡೂ.

ಒಬ್ಬನಿಗೆ ಒಂದು ಚಿಕ್ಕಾಡು ಕಚ್ಚಿತು. ಇದರಿಂದ ಅವನಿಗೆ ಬಹು ವೇದನೆಯಾಗ ಹತ್ತಿತು. ಇದರ ಸೇಡು ತೀರಿಸಿಕೊಳ್ಳಬೇಕೆಂದು, ಆ ಕಾರ್ಯದಲ್ಲಿ ತನಗೆ ನೆರವಾಗಲು ಅವನು ಚಂಡಿಯನ್ನು ಬೇಡಿಕೊಳ್ಳಹತ್ತಿದನು. ಇಷ್ಟರಲ್ಲಿ ಆ ಚಿಕ್ಕಾಡು ಓಡಿ ಹೋಯಿತು. ಆಗ ಅವನು:— “ ದೇವಿಯೇ! ಸಣ್ಣದೊಂದು ಚಿಕ್ಕಾಡಿನ ಸೇಡು ತೀರಿಸಿಕೊಳ್ಳುವ ಕೆಲಸದಲ್ಲಿ ನನಗೆ ನೀನು ನೆರವಾಗಲಿಲ್ಲ. ಇನ್ನು, ಯಾವನೊಬ್ಬ ದೊಡ್ಡ ವೈರಿಯೊಡನೆ ಕೈಗೆಕೈಹತ್ತಿ ಕಾದುವಾಗುತ್ತೂ, ನೀನು ಸಹಾಯಮಾಡುವದು ಕಂಡದ್ದೇ ಇದೆ. ” ಎಂದು ಸಿಟ್ಟಿನಿಂದ ನುಡಿದನು.

ತಾತ್ಪರ್ಯವೇನೆಂದರೆ:— ಸಣ್ಣ ಪುಟ್ಟ ಕೆಲಸಗಳ ಸಲುವಾಗಿಯೂ ದೇವರಲ್ಲಿ ದೂರಹೇಳಹೋಗುವದು ಮೂರ್ಖತನವೇ ಸರಿ.

---

## ೭೭— ಬೇಟೆಗಾರನೂ ಟಿಟ್ಟಿಭವೂ.

ಒಂದು ಟಿಟ್ಟಿಭ ಪಕ್ಷಿಯು ಒಬ್ಬ ಬೇಟೆಗಾರನ ಬಲೆಯಲ್ಲಿ ಬಿದ್ದಿತು. ಅದು ಆಗ, ಅವನಿಗೆ:— ಅಪ್ಪಾ! ನಾನು ನಿನಗೆ ಮಾಡಿದ ಅಪರಾಧವಾದರೂ ಏನು? ನನ್ನನ್ನು ಕೊಲ್ಲಲೇಕೆ ಸಿದ್ಧನಾಗಿರುವಿ? ನಾನೇನು ನಿನ್ನ ಬೆಳ್ಳಿ ಬಂಗಾರದ ಒಡವೆಗಳನ್ನು ಕದ್ದಿರುವೆನೆ? ಹಸಿವೆಯನ್ನು ಹೋಗಲಾಡಿಸಿಕೊಳ್ಳಲು ಧಾನ್ಯದ ನಾಲ್ಕು ಕಾಳುಗಳನ್ನು ಮಾತ್ರ ತೆಗೆದು ಕೊಂಡಿದ್ದೇನೆ, ” ಎಂದೆಷ್ಟೋ ಬಗೆಯಿಂದ ಬಳಲುತ್ತ ದೈನ್ಯದಿಂದ ನುಡಿಯಿತು. ಆದರೆ ಇದರ ಮಾತನ್ನಾರು ಆದರಿಸಬೇಕು. ಬೇಟೆಗಾರನು, ಆ ಪಕ್ಷಿಯ ಮುಂಡವನ್ನು ಮುರಿದವನೇ ತನ್ನ ಬುಟ್ಟಿಯಲ್ಲಿ ಚಲ್ಲಿಕೊಂಡನು.

ಸಾರಾಂಶ:— ಒಮ್ಮೆ ವೈರಿಯ ವಶವಾದಮೇಲೆ, ಮನುಷ್ಯನು ಎಷ್ಟು ತಾನು ನಿರಪರಾಧಿಯಾಗಿರುವೆನೆಂದು ತೋರ್ಪಡಿಸಲು ಯತ್ನಿಸಿದರೂ, ಅದೆಲ್ಲ ಹೊಳೆಯಲ್ಲಿ ಹುಣಸಿಯ ಹಣ್ಣು ತೊಳೆದಂತೆಯೇ.

## ೩೮— ಸಿಂಹವೂ, ತೋಳವೂ, ನರಿಯೂ.

ಎಲ್ಲ ಮೃಗಗಳಿಗೆ ಒಡೆಯನಾಗಿರುವ ಸಿಂಹಕ್ಕೆ ಒಮ್ಮೆ ಬಹಳ ಕಾಯಿಲೆಯಾಯಿತು. ಮಾಡಿದ ಔಷಧೋಪಚಾರಗಳೆಲ್ಲ ವ್ಯರ್ಥವಾದವು. ಕೊಂಚವೂ ಕಾಯಿಲೆಯು ಕಡಿಮೆಯಾಗಲಿಲ್ಲ. ಅದರ ಯೋಗಕ್ಷೇಮಕ್ಕೆಂದು ದಿನಾಲು ಎಲ್ಲ ಪಶುಗಳೂ ಬಂದು ಹೋಗಹತ್ತಿದವು. ನರಿಯು ಮಾತ್ರ ಈ ಕಡೆಗೆ ಸುಳಿಯಲೇ ಇಲ್ಲ. ನರಿಯ ಮೇಲೆ ತೋಳನ ವೈರತ್ವವು ಬಹಳವಾಗಿತ್ತು. ತೋಳವು ಸಿಂಹಕ್ಕೆ:— "ಜೀಯಾ! ಪ್ರಭುವೆ! ನರಿಯು ಈಚೆಗೆ ತಮ್ಮ ಸಭೆಯ ಕಡೆಗೆ ಸುಳಿಯುವದೇ ಇಲ್ಲ; ಏನೊಂದು ಸಂಚಿನಲ್ಲಿ ಅದು ತೊಡಗಿರಬೇಕೆಂದು ನನಗೆ ತೋರುತ್ತದೆ;" ಎಂದಂದಿತು. ಇದರಿಂದ ಸಿಂಹಕ್ಕೆ ನರಿಯ ಮೇಲೆ ಸಂಶಯ ಬಂದು, ಆಗಲೇ ಅದು ಒಂದು ಪಶುವಿನೊಡನೆ ನರಿಗೆ ಬರಹೇಳಿಕಳುಹಿಸಿತು. ಆಜ್ಞೆಯಂತೆ ನರಿಯು ಸಭೆಯನ್ನು ಸೇರಲು ಸಿಂಹವು ನರಿಗೆ:— "ಎಲೋ, ನನಗೆ ಈಪರಿ ಕಾಯಿಲೆಯಾದರೂ ನನ್ನ ಯೋಗಕ್ಷೇಮಕ್ಕೆಂದು ನೀನು ಬರದಿರಲು ಕಾರಣವೇನು?" ಎಂದು ಕೇಳಿತು. ಆಗ ನರಿಯು ಸಿಂಹಕ್ಕೆ:— "ಒಡೆಯಾ, ಏನು ಹೇಳಲಿ; ನಿನ್ನಸಲುವಾಗಿ ಒಬ್ಬ ಚನ್ನಾದ ವೈದ್ಯನನ್ನು ಹುಡುಕುತ್ತಿದ್ದೆನು; ನಿನ್ನೆ ತಾನೆ, ಅವನು ನನಗೆ ಸಿಕ್ಕಿದನು; ನಿನ್ನ ಕಾಯಿ



ಲೆಯ ಸ್ಥಿತಿಯನ್ನು ಅವನಿಗೆ ವಿವರಿಸಿ ಹೇಳಿದನು; ಅದೇ ಸುಲಿದ ತೋಳದ ತೊಗಲನ್ನು ಹೊದ್ದುಕೊಂಡಲ್ಲದೆ, ಈ ರೋಗವು ಹೋಗದೆಂದು ಹೇಳಿದನು; " ಎಂದು ಬಲುನಯವಾಗಿ ನುಡಿಯಿತು. ಇದೆಲ್ಲ ನಿಜವೆಂದು ತೋರಿ ಸಿಂಹವು ತೊಗಲಿಗಾಗಿ ತೋಳವನ್ನು ಆ ಕೂಡಲೇ ಸೀಳಿಬಿಟ್ಟಿತು.

ತಾತ್ಪರ್ಯವೇನಂದರೆ:— ಅನ್ಯರನ್ನು ನಾಶಮಾಡಲು ಇಚ್ಛಿಸಿದರೆ, ಮನುಷ್ಯನು ತಾನೇ ನಾಶಕ್ಕೊಳಗಾಗುವನು.

---

## ೬೯— ತೋಟಿಗನೂ, ಅವನ ನಾಯಿಯೂ.

ಒಬ್ಬ ತೋಟಿಗನ ನಾಯಿಯು, ಬಾವಿಯ ದಂಡೆಯ ಮೇಲೆ ಜಿಗಿದಾಡುತ್ತಿರುವಾಗ, ಜೋಲಿಯು ಹೋಗಿ ಬಾವಿಯಲ್ಲಿ ಬಿದ್ದಿತು. ಅದರ ಕೂಗನ್ನು ಕೇಳಿ ತೋಟಿಗನು, ಅದನ್ನು ಮೇಲೆ ತೆಗೆಯಲು ಹೋದನು. ಬಾವಿಯಲ್ಲಿಳಿದು ನಾಯಿಯನ್ನು ಮೇಲೆ ತೆಗೆಯಲು ಯತ್ನಿಸುತ್ತಿರುವಾಗ ಅವನ ಕೈಯನ್ನು ಆ ನಾಯಿಯು ಕಚ್ಚಿತು. ಅದರ ಈ ಕೃತಘ್ನತೆಗೆ ತೋಟಿಗನು ಸಿಟ್ಟಿಗೆದ್ದು ಅದನ್ನು ಬಾವಿಯಲ್ಲಿಯೇ ಬಿಟ್ಟುಕೊಟ್ಟನು. ಆಗ ಆ ನಾಯಿಯು ಅಲ್ಲಿಯೇ ಒದರುತ್ತ ಕೆಲಕಾಲದ ಮೇಲೆ ಮುಳುಗಿ ಮರಣ ಹೊಂದಿತು.

ತಾತ್ಪರ್ಯವೆಂದರೆ:— ಕೃತಘ್ನಮನುಷ್ಯನು, ಸಾಯುತ್ತಿದ್ದರೂ, ಅವನಿಗೆ ಯಾರೂ ದಯದೋರುವದಿಲ್ಲ.

---

## ೭೦— ಹೆಣ್ಣು ಹಂದಿಯೂ, ಹೆಣ್ಣು ಬೆಕ್ಕೂ.

ಹೆಣ್ಣು ಹಂದಿಗೂ ಹೆಣ್ಣು ಬೆಕ್ಕಿಗೂ ಒಮ್ಮೆ ಸಂತತಿಯ ಸಲುವಾಗಿ ಪರಸ್ಪರ ಮಾತುಕಥೆಗಳು ನಡೆದಿದ್ದವು. ಮಾತಾಡುತ್ತಾಡುತ್ತ ಬೆಕ್ಕು ಸ್ವಲ್ಪ ಜಂಭದಿಂದ ಹಂದಿಗೆ:— " ನನ್ನ ಕುಟುಂಬವೇನು ಸಣ್ಣಪುಟ್ಟದಿಲ್ಲ; ಇತರರಂತೆ ದೇವರ ದಯೆಯಿಂದ ನನಗೂ ಮಕ್ಕಳು ಮರಿಗಳು ಬಹಳವಾಗಿವೆ; " ಎಂದು ನುಡಿಯಿತು. ಹಂದಿಯೂ ಕೊಂಚ ತಿರಸ್ಕಾರದಿಂದ:— " ಆಗಿರಬಹುದು; ಆದರೇನು? ನೀನು ನಿನ್ನ ಮಕ್ಕಳನ್ನು ಬಲು ಅವಸರದಿಂದ ಹಡೆಯುತ್ತೀ; ಆದ್ದರಿಂದಲೇ ಪಾಪ! ಅವು ಕುರುಡಾಗಿಯೇ ಹೊರಹೊರಡುತ್ತವೆ; " ಎಂದು ಪ್ರತಿಯಾಗಿ ಮಾತನಾಡಿತು.

ಸಾರಾಂಶ:— ಅವಸರದಿಂದ ಮಾಡುವ ಕೆಲಸಗಳು ಬಹುತರವಾಗಿ ಪೂರ್ಣವಾಗಿ ಫಲಿಸುವದಿಲ್ಲ.

## ೭೧— ಶರೆಬಡಕ ಗಂಡನು.

ಒಬ್ಬ ಹೆಣ್ಣುಮಗಳ ಗಂಡನು ಬಹಳ ಶರೆಬಡಕನಿದ್ದನು. ಅವನನ್ನು ಹಾದಿಗೆ ಹಚ್ಚಲು, ಆಕೆಯು ಬಹಳವಾಗಿ ಯತ್ನಪಟ್ಟಳು. ಆದರೆ ಎಲ್ಲವೂ ವ್ಯರ್ಥವಾಯಿತು. ಆನಂತರ, ಒಮ್ಮೆ ಅವನು, ಶರೆಯನ್ನು ಕುಡಿದು ಶುದ್ಧಿಯಿಲ್ಲದೇ ಬಿದ್ದಿರಲು, ಆ ಹೆಂಗಸು ಅವನನ್ನು ಸುಡುಗಾಡಿನಲ್ಲಿಯ ಒಂದು ತೆಗ್ಗಿನಲ್ಲಿ ಒಯ್ದಿಟ್ಟು, ಅವನಿಗೆ ಶರೆಯ ಅಮಲು ಇಳಿಯುವ ಸಮಯವನ್ನು ನೋಡುತ್ತ ಭೂತದ ವೇಷ ಹಾಕಿಕೊಂಡು ಕುಳಿತಳು. ಅವನಿಗೆ ಮುಂದೆ, ಅಮಲಿಳಿದು ಅತ್ತಿತ್ತ ಅವನು ನೋಡುತ್ತಿರಲು, ಅವನ ಮುಂದೆ ಕೆಲವು ತಿನಸುಗಳನ್ನು ತಂದಿಟ್ಟು ಭೂತದ ದನಿಯಿಂದ:— “ ಏಳು ! ಈ ತಿನಸುಗಳನ್ನು ತಿನ್ನು ! ಸತ್ತವರಿಗೆ ಅನ್ನವನ್ನು ಕೊಡುವ ಕೆಲಸವನ್ನು ನಾನು ಕೈಕೊಂಡಿರುವೆನು; ” ಎಂದು ಹೆಂಡತಿಯು ಗಂಡನಿಗೆ ಅಂದಳು. ಈ, ಆಕೆಯ ಮಾತು ಕೇಳಿ ಗಂಡನು:— “ ಛೇ ನನ್ನ ಸ್ವಭಾವವು ನಿನಗೆ ಸರಿಯಾಗಿ ತಿಳಿದಂತೆ ಕಾಣುವದಿಲ್ಲ; ಯಾಕಂದರೆ, ಹಾಗಿದ್ದರೆ, ನೀನು ಈ ತಿನಸುಗಳನ್ನು ನನ್ನ ಮುಂದೆ ತಂದಿಡುವ ಬದಲು, ಕುಡಿಯಲು ಗುಟುಕು ಶರೆಯನ್ನೇ ತಂದಿಡುತ್ತಿದ್ದಿ; ” ಎಂದು ಆ ಭೂತಕ್ಕೆ ಹೇಳಿದನು.



ಸಾರಾಂಶ:— ಮನುಷ್ಯನಿಗೆ ಒಮ್ಮೆ ಹತ್ತಿದ ದುರ್ವ್ಯಸನವು ದೂರವಾಗುವದು ಪರಮ ದುಸ್ತರವು.

———

## ೭೨— ಕೋಗಿಲೆಯೂ, ಪಾರಿವಾಳವೂ.

ಒಬ್ಬ ಒಕ್ಕಲಿಗನು ಒಂದು ಕೋಗಿಲೆಯನ್ನೂ ಒಂದು ಪಾರಿವಾಳವನ್ನೂ ಕೊಂಡು ಕೊಂಡನು. ಕೋಗಿಲೆಯ ಗಾಯನ ಕೇಳಬೇಕು; ಪಾರಿವಾಳವನ್ನು ಹೆಚ್ಚಿ ಪಲ್ಲೆ ಮಾಡ ಕೆಂದು ಅವನ ಉದ್ದೇಶವಿತ್ತು. ಊಟದ ಮೊದಲು ಹೆಂಡತಿಗೆ ಅವನು ಅದರಂತೆ ತಿಳಿಸಿದನು. ಗಂಡನ ಆಜ್ಞೆಯಂತೆ ಆಕೆಯು ಆ ಹಕ್ಕಿಗಳನ್ನಿಟ್ಟಲ್ಲಿಗೆ ಹೋಗಿ, ಅಲ್ಲಿ ಕತ್ತಲೆಯಾದದ್ದರಿಂದ, ಪಾರಿವಾಳಕ್ಕೆ ಬದಲು ಪಲ್ಲೆ ಮಾಡಲು ಕೋಗಿಲೆಯನ್ನು ತಕ್ಕೊಂಡಳು. ಆದರೆ ಕೊಯಿತದಿಂದ ಅದರ ಮುಂಡವನ್ನು ತುಂಡರಿಸುವಷ್ಟರಲ್ಲಿ ಯೇ ಆ ಕೋಗಿಲೆಯು ಗಾಯನ ಮಾಡತೊಡಗಿತು. ಆದ್ದರಿಂದಲೇ ಆ ಹಕ್ಕಿಯ ಮರಣ ಹೋಗುವದು ಉಳಿಯಿತು.

ತಾತ್ಪರ್ಯವೇನಂದರೆ:— ಚನ್ನಾಗಿ ತಿಳಿದುಕೊಳ್ಳದೆ ಯಾವದೊಂದು ಪ್ರಾಣಿ ಯನ್ನು ಕೊಲ್ಲಲು ಸಿದ್ಧವಾಗುವದು ತೀರ ಅಪಾಯವು. ಕೊಂದನಂತರ, ಒಂದರ ಬದ ಲು ಮತ್ತೊಂದರ ಪ್ರಾಣವನ್ನು ತಾನು ತೆಗೆದುಕೊಂಡೆನೆಂದು ತನಗೆ ತಿಳಿದರೂ, ಆಗು ವದೇನದರಿಂದ? ಆದ ಆ ತಪ್ಪನ್ನು ತಿದ್ದಿಕೊಳ್ಳುವದು ಸಾಧ್ಯವೇ ಇಲ್ಲ. ಆದ್ದರಿಂದ ಲೇ, ಮೊದಲೇ ಈ ಸಂಗತಿಯನ್ನು ಚನ್ನಾಗಿ ತಿಳಿದುಕೊಳ್ಳಬೇಕು.

---

## ೭೩— ಹುಡುಗನೂ, ಕಡಲೆಯೂ.

ಒಬ್ಬ ಮನುಷ್ಯನು ಹಂಚಿನಲ್ಲಿ ಕಡಲೆಯನ್ನು ಹುರಿಯುತ್ತಿದ್ದನು. ಆಗ ಅವು " ಫಟ ಫಟ " ಎಂದು ಹಾರಹತ್ತಿದವು. ಇದನ್ನು ನೋಡಿ ಹತ್ತರವೇ ಕುಳಿತಿದ್ದ ಒಬ್ಬ ದೊಡ್ಡ ತಲೆಯ ಹುಡುಗನು:— " ಈ ಕಡಲೆಗಳು ಎಷ್ಟು ಮೂರ್ಖ ಇವೆ! ಶರೀರ ವೆಲ್ಲ ಹುರಿದುಹೋಗುತ್ತಿದ್ದರೂ, ಇವಕ್ಕೆ ಹಾಡಬೇಕೆಂದು ಹೊಳೆಯುತ್ತದೆ; ಇವುಗಳ ಜಾಣತನವೇ ಜಾಣತನವು; " ಎಂದು ನುಡಿದನು.

ತಾತ್ಪರ್ಯವೇನಂದರೆ:— ಅವೇಳೆಯಲ್ಲಿ ಅಲ್ಲದೊಂದು ಕೆಲಸ ಮಾಡುವ ವನು ನಗೆಗೆ ಈಡಾಗುತ್ತಾನೆ.

---

## ೭೪— ಕುರುಬನೂ, ತೋಳದ ಮರಿಯೂ.

ಒಬ್ಬ ಕುರುಬನಿಗೆ ಒಂದು ತೋಳದ ಮರಿಯು ಸಿಕ್ಕಿತು. ಅದನ್ನು ತಂದು ಅವನು ನಾಯಿಗಳ ಗುಂಪಿನಲ್ಲಿ ಬಿಟ್ಟನು. ಕುರುಬನ ಕುರಿಗಳನ್ನು ಕದಿಯಲಿಕ್ಕೆ ಬರುವ ತೋಳಗಳನ್ನು ಬೆನ್ನಟ್ಟುವಲ್ಲಿ, ನಾಯಿಗಳಿಗಿಂತ ಅದು ಹೆಚ್ಚು ಎಚ್ಚರವನ್ನು ತೋರಿಸುತ್ತಿತ್ತು. ಆದರೆ ಅದು ತೋಳಗಳನ್ನು ಓಡಿಸಿ, ಕೂಡಲೇ ನಾಯಿಗಳೊಡನೆ ತಿರುಗದೆ, ಸಮೀಪದಲ್ಲಿಯೇ ಸುಳಿದಾಡುತ್ತಿತ್ತು ಮತ್ತು ಒಂದಾನೊಂದು ಮೈಗಳ್ಳ ಕುರಿಮರಿಯು ಕೈಗೆ ಸಿಕ್ಕರೆ ಆ ತೋಳದ ಮರಿಯು ಬಾಯಿ ಚಪ್ಪರಿಸಿ ಬಿಡುತ್ತಿತ್ತು. ಹೀಗೆ ಬಹಳ ದಿವಸ ನಡೆದಿರಲು,



ಒಂದು ದಿನ ಈ ಸಂಗತಿಯು ಕುರುಬನ ಕಣ್ಣಿಗೆ ಬಿತ್ತು. ಕೂಡಲೇ ಆ ಕುರುಬನು ಗಿಡದ ಟೊಂಗೆಯಿಂದ ಆ ತೋಳವನ್ನು ಬಡಿದು ಕೊಂದು ಹಾಕಿದನು;

ಒಟ್ಟು ಹೇಳುವದೆಂದರೆ:— ಪ್ರಾಣಿಗಳ ಜಾತಿಸ್ವಭಾವವು ಎಲ್ಲಿದ್ದರೂ ಬೇರೆಯಾಗುವದಿಲ್ಲ.

―――――

## ೭೫— ನೀರು ಕೋಗಿಲೆಯು.

ನೀರು ಕೋಗಿಲೆಯೆಂಬ ಒಂದು ಜಾತಿಯ ಹಕ್ಕಿಯು ಇರುತ್ತದೆ. ಅದು ನೀರಲ್ಲಿ ಹಾರಿ ಮೀನಗಳನ್ನು ಹಿಡಿದು ತಿನ್ನುತ್ತಿರುತ್ತದೆ. ಒಂದು ನೀರು ಕೋಗಿಲೆಯು ಬೇಡನ

ಬಲೆಗೆ ಬೀಳಬಾರದೆಂದು ಬಗೆದು, ತನ್ನ ಗೂಡನ್ನು ನದಿಯ ದಂಡೆಯ ಮೇಲಿನ ಒಂದು ಗಿಡದ ಮೇಲೆ ಕಟ್ಟಿಕೊಂಡಿತ್ತು. ಒಂದು ದಿನ ಆ ಹಕ್ಕಿಯು ತನ್ನ ಮರಿಗೆ ಆಹಾರ ತರಲು ಹೊರಗೆ ಹೋದಾಗ, ಅಕಸ್ಮಾತ್ತಾಗಿ ನದಿಗೆ ನೆರೆ ಬಂದು, ಆ ಹಕ್ಕಿಯ ಗೂಡೂ ಮರಿಯೂ, ಕೂಡಿಯೇ ಹರಿದು ಹೋದವು. ಆ ಮೇಲೆ ಆ ಹಕ್ಕಿಯು ಬಂದು ನೋಡುತ್ತದೆ; ಅಲ್ಲೇನಿದೆ; ಮರಿಯು ಗೂಡಿನಿಂದ ಸಹಿತವಾಗಿ ನೀರ ಸೆಳವಿಗೆ ಸಿಕ್ಕಿದೆ; ಎಂದು ಅದಕ್ಕೆ ತಿಳಿಯಬಂತು. " ನಾನೆಷ್ಟು ದುರ್ದೈವಿಯು! ಒಬ್ಬ ವೈರಿಯನ್ನು ತಪ್ಪಿಸಿ ಇಲ್ಲಿಗೆ ನಾನು ಬಂದಿದ್ದರೆ, ಮತ್ತೊಬ್ಬ ವೈರಿಯ ಬಾಯಿಗೆ ಬಿದ್ದೆನಲ್ಲ; " ಎಂದು ಆ ಕೋಗಿಲೆಯು ಬಂದೇಸವನೇ ಕುದಿಯಿತು.

ಸಾರಾಂಶವೇನೆಂದರೆ:— ಒಂದು ಆಪತ್ತಿನಿಂದ ಓಡಿ ಹೋಗುತ್ತಿರಲು ಒಮ್ಮೊಮ್ಮೆ ಮತ್ತೊಂದು ಆಪತ್ತೊ ಮನುಷ್ಯನೆದುರಿಗೆ ಜಯತ್ತಾಗಿ ಬಂದು ನಿಲ್ಲುವದು.

---

## ೭೬— ಬೇಟೆಯ ನಾಯಿಯೂ, ಊರ ನಾಯಿಯೂ.

ಒಬ್ಬನ ಬಳಿಯಲ್ಲಿ ಎರಡು ನಾಯಿಗಳಿದ್ದವು. ಒಂದು ಊರದು; ಮತ್ತೊಂದು ಬೇಟೆಯದು. ಒಡೆಯನ ಕೂಡ ಬೇಟೆಗೆ ಹೋಗಿ, ಬೇಟೆಯ ನಾಯಿಯು ಒಂದಾನೊಂದು ಮೊಲವನ್ನು ತಂದರೆ, ಅದರಲ್ಲಿ ಸ್ವಲ್ಪ ಭಾಗವು ಈ ಊರನಾಯಿಗೆ ಸಿಗುತ್ತಿತ್ತು. ಒಂದು ದಿವಸ ಬೇಟೆಯ ನಾಯಿಯು ಊರ ನಾಯಿಗೆ:— " ಎಲೋ! ನಾನು ಮೈಮುರಿ ದುಡಿದು ತಂದ, ಮೊಲದಲ್ಲಿಯ ಭಾಗವು, ನಿನಗೆ ಮನೆಯಲ್ಲಿಯೇ ಕುಳಿತು ಸಿಗುತ್ತಿರುವದು ಅನ್ಯಾಯವಲ್ಲವೇ? " ಎಂದು ಕೇಳಿತು. ಇದಕ್ಕೆ ಎರಡನೇ ನಾಯಿಯು:— " ಗೆಳೆಯಾ! ಇದು ನನ್ನ ತಪ್ಪಲ್ಲ; ನನ್ನ ದನಿಯ ತಪ್ಪು. ಯಾಕಂದರೆ ಬೇಟೆಗೆ ನಿಯಮಿಸದೆ ನನ್ನನ್ನು ಮನೆಯನ್ನು ಕಾಯಲಿಕ್ಕೆ ಅವನು ಹಚ್ಚಿರುವನು; " ಎಂದು ಉತ್ತರ ಕೊಟ್ಟಿತು.

ಸಾರಾಂಶ— ಆಳಾಗಿರುವದು ಬಹು ಬಗೆಯಾಗಿರುವದು. ಹೀಗೆಯೇ ಮಾಡಿದರೆ ಒಬ್ಬನು ಆಳಾದಂತಾಯಿತು; ಮತ್ತೊಂದು ಬಗೆ ಮಾಡಿದರೆ ಆಳಾದಂತಾಗಲಿಲ್ಲೆಂದು ಹೇಳಲು ಬರುವದಿಲ್ಲ.

---

## ೭೭:— ಹಾವೂ, ಏಡಿಯೂ.



ಒಂದು ಹಾವಿಗೆ ಏಡಿಯೊಂದರ ಗೆಳೆತನವು ಬಹಳ ಇತ್ತು. ಏಡಿಯ ನಡತೆಯು ಸರಲವಾಗಿತ್ತು. ಅದು ಹಾವಿಗೆ ಚನ್ನಾಗಿ ನಡೆದುಕೊಳ್ಳಲು ಬಹಳ ಬಗೆಯಿಂದ ಹೇಳಿ ನೋಡಿತು. ಆದರೆ ಅದರ ಕಡೆಗೆ ಹಾವು ಲಕ್ಷ್ಯಗೊಡಲಿಲ್ಲ. ಒಮ್ಮೆ ಆ ಹಾವು ಮೈ ಸೆಟಿಸಿ ನಿದ್ರೆಮಾಡುತ್ತ ಬಿದ್ದಿರುವಾಗ, ಆ ಏಡಿಯು ಅದನ್ನು ಕೊಂದು ಬಿಟ್ಟಿತು. ಆ ಮೇಲೆ ಅದರ ಸರಲವಾಗಿ ಬಿದ್ದಿರುವ ಶವವನ್ನೇ ನೋಡಿ:— " ಎಲೋ! ನೀನು ಈಗ ಇದ್ದಂತೆ ಮೊದಲೂ ಇದ್ದದ್ದಾಗಿದ್ದರೆ ನಿನಗೆ ಈ ದುರವಸ್ಥೆಯು ಬರುತ್ತಿದ್ದಿಲ್ಲವಲ್ಲ " ಎಂದು ನುಡಿಯಿತು .

ಸಾರಾಂಶ:— ಮನುಷ್ಯನು ಯಾವಾಗಲೂ ಸರಲಸ್ವಭಾವದವನಾಗಿರಬೇಕು. ರಾಜಮಾರ್ಗವನ್ನು ಬಿಟ್ಟು ಅಡ್ಡಹಾದಿಯನ್ನು ಹಿಡಿದರೆ, ಅವನು ಸಂಕಟಕ್ಕೆ ಸಿಲುಕುವದರಲ್ಲಿ ಸಂದೇಹವಿಲ್ಲ.

———— ————

## ೭೮:— ತೊಗಲಬಾವುಲಿಯೂ, ಮುಳ್ಳುಗಿಡವೂ, ಸಮುದ್ರಪಕ್ಷಿಯೂ.

ಒಮ್ಮೆ, ಒಂದು ತೊಗಲಬಾವುಲಿಯೂ, ಮುಳ್ಳುಗಿಡವೂ, ಸಮುದ್ರಪಕ್ಷಿಯೂ ಸೇರಿ, ವ್ಯಾಪಾರ ಮಾಡಬೇಕೆಂದು ವಿಚಾರ ಮಾಡಿದವು. ತೊಗಲಬಾವುಲಿಯು ಬಂಡವಲನ್ನು ಹಾಕಬೇಕೆಂತಲೂ, ಲೆಕ್ಕವಿಡಬೇಕೆಂತಲೂ ನಿರ್ಣಯವಾಯಿತು. ಮುಳ್ಳುಗಿಡವು ವ್ಯಾಪಾರಕ್ಕಾಗಿ ಅನೇಕ ಅರಿವೆಗಳನ್ನು ತಂದಿತು. ಸಮುದ್ರ ಪಕ್ಷಿಯು ಹಿತ್ತಾಳಿಯನ್ನು ತಂದಿತು. ಈ ಎಲ್ಲ ವಸ್ತುಗಳನ್ನು ನೌಕೆಯಲ್ಲಿ ಹಾಕಿಕೊಂಡು ಸಮುದ್ರದೊಳಗಿಂದ ಪ್ರವಾಸಮಾಡುತ್ತಿರುವಾಗ, ಬಿರುಗಾಳಿಯು ಬಿಟ್ಟು, ನೌಕೆಯು ನೀರಲ್ಲಿ ಮುಳುಗಿತು. ಆ ಮೂವರೂ ಉಳಿದದ್ದು ದೊಡ್ಡ ದೈವ. ಆ ದಿನದಿಂದ, ತೊಗಲಬಾವುಲಿಯು ಸಾಲ ತಂದವನ ಕಣ್ಣು ತಪ್ಪಿಸಬೇಕೆಂದು, ಹಗಲು ಹೊರಗೆ ಬೀಳದಂತಾಯಿತು. ತನ್ನ ಹೋದ ಅರಿವೆಗಳು ತಿರುಗಿ ದೊರೆಯಬೇಕೆಂದು, ಹೋಗಬರುವವರ ಅರಿವೆಗಳನ್ನು ಎಳೆದು ಕೊಳ್ಳುವ ಕ್ರಮವನ್ನು ಮುಳ್ಳುಗಿಡವು ನಡೆಸಿತು. ಕಳೆದುಕೊಂಡ ಹಿತ್ತಾಳಿಯು ಸಿಕ್ಕರೆ ನೋಡಬೇಕೆಂದು, ಸಮುದ್ರಪಕ್ಷಿಯು ಸಮುದ್ರದಲ್ಲಿ ಹಾರಿಕೊಳ್ಳಲು ಹತ್ತಿತು.

ಸಾರಾಂಶ:— ಒಬ್ಬನಿಗೆ ಬಹಳ ಹಾನಿಯು ತಟ್ಟಿದರೆ, ಅದು ಅವನಿಗೆ ಎಂದೂ ಮರೆಯುವದಿಲ್ಲ.

---

## ೭೯:— ಭಾಗ್ಯಹೀನ ದಂಪತಿಯು.

ಒಬ್ಬ ಮನುಷ್ಯನ ಹೆಂಡತಿಯು ಬಲು ಕರ್ಕಶೆಯಾಗಿದ್ದಳು. ಆದುದರಿಂದ ಮನೆಯಲ್ಲಿ ಯಾವಾಗಲೂ ಕದನ ನಡೆಯುತ್ತಿತ್ತು. ಒಮ್ಮೆ ಅವಳು ತವರುಮನೆಗೆ ಹೋಗಿರಲು, ಅವಳನ್ನು ಕರೆಯಲಿಕ್ಕೆ ಗಂಡನು ಅಲ್ಲಿಗೆ ಹೋದನು. ಅವನು ಹೆಂಡತಿಗೆ:— “ ಹೇಗೆ? ಇಲ್ಲಿ ನೀನು ಕಾಲವನ್ನು ಚನ್ನಾಗಿ ಕಳೆದಿಯಾ. ಜಗಳ ಮುಂತಾದ್ದೇನೂ ಆಗಲಿಲ್ಲವೇ? ” ಎಂದು ಕೇಳಿದನು. ಹೆಂಡತಿಯು:— “ ನನ್ನ ತಾಯ್ಮನೆಯವರಿಗೆ ನಾನೇನು ಸೇರಿಲ್ಲವೆಂದು ತೋರುತ್ತದೆ; ಆಳುಮಕ್ಕಳಿಗೂ ಕೂಡ ನಾನು ಬೇಸರಳಾಗಿದ್ದೇನೆಂದು ಅವರ ವರ್ತನದಿಂದ ತಿಳಿಯುತ್ತದೆ; ” ಎಂದು ಹೇಳಿದಳು. ಗಂಡನು:— “ ಏನೇ ! ನೀನೇ ನೋಡು ! ಹಗಲು ಹೊರಗೆಹೋಗಿ ಹೋರೆಯನ್ನು ಮಾಡುತ್ತ, ನಿನ್ನ ದೃಷ್ಟಿಗೆ ದಿವಸದಲ್ಲಿ ಕೊಂಚಕಾಲವೇ ಬೀಳುತ್ತಿರುವ ಆಳಮಕ್ಕಳಿಗೂ ಕೂಡ ನಿನ್ನ ಸ್ವಭಾವವು ಸೇರದಮೇಲೆ, ಹಗಲೆಲ್ಲ ನಿನ್ನ ಸಹವಾಸದಲ್ಲಿಯೇ ಕಾಲ ಕಳೆಯುವ

ನನಗೆ ನಿನ್ನಿಂದ ಎಷ್ಟು ತ್ರಾಸವಾಗುತ್ತಿರಬಹುದೆಂಬದನ್ನು ವಿಚಾರಿಸು; ” ಎಂದು ನುಡಿದನು.

ತಾತ್ಪರ್ಯ:— ಎಲ್ಲರಿಗೂ ನಾವು ಅಪ್ರಿಯವಾದರೆ, ಅದಕ್ಕೆ ನಮ್ಮ ಸ್ವಭಾವವೇ ಕಾರಣವೆಂದು ತಿಳಿದುಕೊಂಡು ಆ ಸ್ವಭಾವವನ್ನೇ ತಿದ್ದಿಕೊಳ್ಳಲು ಪ್ರಯತ್ನಿಸಬೇಕು.

---

## ೬೦:— ನೆರೆಹೊರೆಯ ಕಪ್ಪೆಯು.



ಎರಡು ಕಪ್ಪೆಗಳು ಒಂದಕ್ಕೊಂದು ನೆರೆಯಲ್ಲಿರುತ್ತಿದ್ದವು. ಒಂದುಕೆರೆಯಲ್ಲಿರುತ್ತಿತ್ತು. ಮತ್ತೊಂದು, ಅದರ ದಂಡೆಯಮೇಲಿರುವ ದಾರಿಯ ಹತ್ತರಿರುತ್ತಿತ್ತು. ದಾರಿಯ ಮೇಲಿರುವ ನೀರು ಬತ್ತಿ ಹೋಗುತ್ತಿರುವದನ್ನು ಕಂಡು, ಕೆರೆಯಲ್ಲಿಯ ಕಪ್ಪೆಯು ನೆರೆಯ ಕಪ್ಪೆಗೆ:— “ ಎಲೋ, ನಿನ್ನ ಸ್ಥಳವನ್ನು ಬಿಟ್ಟು ಈ ಕೆರೆಯಲ್ಲಿರಲಿಕ್ಕೆ ಬಾ; ಇಲ್ಲಿ ಇಬ್ಬರೂ ಸುಖದಿಂದ ಇರುವಾ;” ಎಂದು ಕೇಳಿಕೊಂಡಿತು. ಇದನ್ನು ಕೇಳಿ ನೆರೆಯ ಕಪ್ಪೆಯು:— “ ಬಹು ದಿವಸದಿಂದ ನಾನು ಈ ಸ್ಥಾನದಲ್ಲಿರುತ್ತಿರುತ್ತೇನೆ; ಇದನ್ನು ಬಿಟ್ಟು ಬೇರೆಕಡೆ ಇರಲಾರೆನು; ಇಲ್ಲೇ ನಾನಿರುವವನು; ” ಎಂದು ಉತ್ತರ ಕೊಟ್ಟಿತು. ಮುಂದೆ ಸ್ವಲ್ಪೇ ದಿವಸಗಳಲ್ಲಿ ಆ ದಾರಿಯ ಮೇಲಿನ ಕಪ್ಪೆಯು ಗಾಡಿಯ ಗಾಲಿಗೆ ಬಿದ್ದು ಸತ್ತು ಹೋಯಿತು.

ಸಾರಾಂಶ:— ಸೋಮಾರಿಗಳು ಸಾಯಲು ಸಿದ್ಧರಾಗುತ್ತಾರೆ. ಆದರೆ ಉದ್ಯೋಗ ಮಾಡಲು ಒಲ್ಲರು.

### ೮೧:— ಕಣ್ಣುಕಪ್ಪಡಿಯೂ, ಕಾಗೆಯೂ.

ಒಂದು ಕಣ್ಣುಕಪ್ಪಡಿ ಮತ್ತು ಒಂದು ಕಾಗೆ, ಇವುಗಳ ನಡುವೆ, ಯಾರು ಹೆಚ್ಚು ಸೌಂದರ್ಯವುಳ್ಳವರೆಂಬ ಬಗ್ಗೆ ವಾದವಿವಾದ ನಡೆಯಿತು. ಮಾತನಾಡುತ್ತಾಡುತ್ತ ಕಾಗೆಯು ಕಣ್ಣುಕಪ್ಪಡಿಗೆ:— “ ನಿನ್ನ ಸೌಂದರ್ಯವನ್ನು ಬೇಸಿಗಯಲ್ಲಿ ಮಾತ್ರ ನೋಡಬೇಕು; ಆದರೆ ನನ್ನದು ನಿನ್ನಂತಲ್ಲ; ಅದು ಎಂದೂ ಒಂದೇಸವನೇ ಇರುತ್ತದೆ.” ಎಂದು ನುಡಿಯಿತು.

ಸಾರಾಂಶ:— ಎರಡು ಸೊಬಗಿನ ಒಡವೆಗಳಲ್ಲಿ, ಏತರ ಸೊಬಗು ಬಹು ದಿವಸ ಉಳಿಯುವದೋ, ಅದೇ ಹೆಚ್ಚಿನದೆಂದು ಹೇಳಬೇಕು.

---

### ೮೨:— ನರಿಯೂ ಏಡಿಯೂ.

ಒಂದು ಏಡಿಯು ಸಮುದ್ರ ಬಿಟ್ಟು ದಂಡೆಯಮೇಲೆ ಬಂದಿತು. ಆಗ ಒಂದು ನರಿಯು ಅದನ್ನು ಹಿಡಿಯಿತು. ನರಿಯು ಏಡಿಯನ್ನು ಹೊಡೆದು ತಿನ್ನುವಷ್ಟರಲ್ಲಿ ಏಡಿಯು ತನ್ನಲ್ಲಿ ತಾನೇ:— “ ಸರಿ! ಇದು ನನ್ನ ಮೂರ್ಖತನದ ಫಲವು; ಸಮುದ್ರ ಬಿಟ್ಟು ದಂಡೆಗೆಬರಲು ನನಗಾರು ಹೇಳಿದ್ದರು; ಎಂದು ಅಂದುಕೊಂಡಿತು.

ತಾತ್ಪರ್ಯವೇನಂದರೆ:— ಅಲ್ಲದ ಸಲ್ಲದ ಕೆಲಸದಲ್ಲಿ ಮನುಷ್ಯನು ಎಂದೂ ಸೇರಬಾರದು. ಒಂದುವೇಳೆ ಸೇರಿದಾಗ್ಯೆ ಸಂಕಟಸಮಯವು ಒದಗಿದರೆ ” ಮಾಡಿದ್ದು ಉಣ್ಣು ಮಹರಾಯಾ ” ಎಂಬಂತೆ ಅವನಿಗೆ ಅದು ತಕ್ಕ ಶಾಸನವೆಂದೇ ತಿಳಿಯಬೇಕು.

---

### ೮೩:— ಮೂರ್ಖನಾದ ಗಾಯಕನು.

ಒಬ್ಬ ಮನುಷ್ಯನ ಕಂಠವು ತೀರ ಕರ್ಕಶವಾಗಿತ್ತು. ಆದರೆ ಅವನು ಹಾಡಲೆಂದು ಕೂಡ್ರುವ ಮನೆಯು ಬಹು ಬೆಡಗಿನದಿತ್ತು. ಅಲ್ಲಿ ಕುಳಿತುಕೊಂಡು ಅವನು ಬಹು ಬಗೆಯ ಆಲಾಪಗಳನ್ನು ಮಾಡುತ್ತ ಗಾಯನದ ಅಭ್ಯಾಸವನ್ನು ಮಾಡುತ್ತಿದ್ದನು. ಒಮ್ಮೆ ಅವನಿಗೆ, ತಾನು ರಂಗಭೂಮಿಯಮೇಲೆ ಹಾಡಬೇಕೆಂದು ಬಯಕೆಯಾಯಿತು. ಆ ಮೇಲೆ ಅವನು ಆ ಪ್ರಕಾರಕ್ಕೆ ಎಲ್ಲ ಕಡೆಯಲ್ಲಿಯೂ ಪ್ರಕಟನೆಯನ್ನು ಮಾಡಿದನು. ಇದರಿಂದ ನಾಟಕಗ್ರಹದಲ್ಲಿ ಬಹು ಜನರು ನೆರೆದರು. ಆದರೆ ಅವನ ಗಾಯನವನ್ನು ಕೇಳಿ ಯಾರಿಗೂ ಆನಂದವಾಗಲಿಲ್ಲ. ಆದ್ದರಿಂದ ಎಲ್ಲರೂ ನಡುವೇ ಹುಯಿಲೆಬ್ಬಿಸಿ, ಚಪ್ಪಳಿಕ್ಕಿ, ಕೈಬಡಿಗೆಯಿಂದ ಭೂಮಿಗೆ ಬಡಿಯುತ್ತ, ಆಗಾಯಕನನ್ನು ಅಲ್ಲಿಂದ ಓಡಿಸಿಬಿಟ್ಟರು.

ಒಟ್ಟಿನ ಮೇಲೆ ಹೇಳುವದೇನಂದರೆ:— ತನ್ನಷ್ಟಕ್ಕೆ ತಾನೇ ಮನುಷ್ಯನು ಭಲೆ ಎಂದುಕೊಳ್ಳಬಾರದು. ಅನ್ಯರು ತನ್ನ ಗುಣವನ್ನು ಹೊಗಳಿದರೆ ಮಾತ್ರ, ತನ್ನ ನಿಜವಾದ ಪರೀಕ್ಷೆಯಾಯಿತೆಂದು ತಿಳಿಯಬೇಕು. ಇಲ್ಲವಾದರೆ ಮೇಲಿನ ಗಾಯಕನಂತೆ ಅವನು ನಗೆಗೆ ಗುರಿಯಾಗುತ್ತಾನೆ.

---

## ೬೪:— ನೀರನ್ನು ಕಲಕುತ್ತಿರುವ ಜಾಲಗಾರನು.

ಒಬ್ಬ ಜಾಲಗಾರನು ನದಿಯಲ್ಲಿ ತನ್ನ ಜಾಲವನ್ನು ಹಾಕಿದನು. ಆ ಮೇಲೆ, ಅವನು, ಮೀನಗಳನ್ನು ಬೆದರಿಸಿ ಬಲೆಯಲ್ಲಿ ಬೀಳುವಂತೆ ಮಾಡಬೇಕೆಂದು, ಒಂದು ಕೋಲಿನಿಂದ ನದಿಯ ನೀರನ್ನು ಕಲಕುಮಾಡಲಾರಂಭಿಸಿದನು. ಅಲ್ಲಿಯೇ ಹತ್ತರದಲ್ಲಿ ಕೆಲವು ಜನರಿದ್ದರು. ಅವರೊಳಗಿನವನೊಬ್ಬನು ಮುಂದೆ ಬಂದು:— “ ಏನಪ್ಪಾ, ನೀನು ಇಷ್ಟು ಗಟ್ಟಿಯಾಗಿ ನೀರನ್ನೆಲ್ಲ ಕಲಕುಮಾಡುತ್ತಿರುವ ಕಾರಣವೇನು? ನೀನು ಹೀಗೆ ಮಾಡುವದರಿಂದ ನಮ್ಮ ಕುಡಿಯುವ ನೀರು ಕಲಕಾಗಿ ಹೋಗುವವೆಂಬದು ನಿನಗೆ ಕಾಣುವದಿಲ್ಲವೇ? ” ಎಂದು ಕೇಳಿದನು. “ ಚನ್ನಾಗಿ ಹೇಳುತ್ತೀಯಯ್ಯಾ! ನಿನ್ನ ನೀರು ಕಲಕಾಗುವದರಿಂದ ನನಗೆ ಮೀನಗಳು ಸಿಕ್ಕು ನನ್ನ ಹೊಟ್ಟೆಯು ತುಂಬುತ್ತದೆ; ಇದನ್ನು ಬಿಟ್ಟು, ನಿನಗೆ ಉಪಕಾರಮಾಡಿ, ನಾನೇನು ಉಪವಾಸ ಸಾಯಲೋ? ” ಎಂದು ಜಾಲಗಾರನು ಸೆಡವಿನಿಂದ ನುಡಿದನು.



ತಾತ್ಪರ್ಯವೇನಂದರೆ:— ಕೆಲವರು ಬಲು ಸ್ವಾರ್ಥಪರಾಯಣರಾಗಿರುತ್ತಾರೆ. ಅವರು ತಮ್ಮ ಸ್ವಲ್ಪೇ ಲಾಭದ ಸಲುವಾಗಿ ಅನ್ಯರಿಗಾಗುವ ಭಯಂಕರ ಹಾನಿಯನ್ನು ಕೂಡ ಲೆಕ್ಕಿಸುವದಿಲ್ಲ. ತಮ್ಮ ಸ್ವಾರ್ಥವನ್ನು ಸಾಧಿಸಿಕೊಂಡೇ ತೀರುತ್ತಾರೆ.

## ೮೫:-- ಭರಮಪ್ಪನ ಮದುವೆಯು.

ಒಮ್ಮೆ ಭರಮಪ್ಪನು ತನ್ನ ಮದುವೇ ಮಾಡಿಕೊಳ್ಳಬೇಕೆಂದು ಮಾಡಿದನು. ಆಗ ಎಲ್ಲ ಜಾತಿಯ ಪ್ರಾಣಿಗಳಿಗೂ ಅವನು ಔತನವನ್ನು ಕೊಟ್ಟನು. ಆ ಪ್ರಕಾರಕ್ಕೆ ಎಲ್ಲ ಪ್ರಾಣಿಗಳೂ ಲಗ್ನದ ವೇಳೆಗೆ ಸರಿಯಾಗಿ ಬಂದು ನೆರೆದವು. ಆದರೆ ಆವೆಯು, ಬರಲು ಕೊಂಚ ವಿಲಂಬಮಾಡಿತು. ಅದು ಬಂದಮೇಲೆ ಅದಕ್ಕೆ ಭರಮಪ್ಪನು:- "ಎಲೇ, ನೀನು ಇಷ್ಟು ಪ್ರಾಣಿಗಳನ್ನು ನಿನ್ನ ಸಲುವಾಗಿ ಕಾಯಲು ಹಚ್ಚುವದು ಸರಿಯಾದದ್ದೇ?" ಎಂದು ಕೇಳಿದನು. "ದೇವನೇ, ನನಗೆ ನನ್ನ ಮನೆಯನ್ನು ಬಿಟ್ಟು ಬರಲು ಅಷ್ಟೊಂದು ಸೊಗಸೆನಿಸುವದಿಲ್ಲ; ಯಾಕಂದರೆ ಎಷ್ಟೆಂದರೂ ತನ್ನ ಮನೆಯಲ್ಲಿ ದೊರೆಯುವ ಸುಖವು ಅನ್ಯರಲ್ಲಿ ಎಂದೂ ಸಿಗಲಾರದು;" ಎಂದು ಆವೆಯು ಭರಮಪ್ಪನಿಗೆ ಪ್ರತಿಯಾಗಿ ನುಡಿಯಿತು. ಇದನ್ನು ಕೇಳಿ ಭರಮಪ್ಪನಿಗೆ ಕೋಪಬಂದಿತು. ಆಗ ಅವನು "ಇಂದಿನಾರಭ್ಯ ನಿನ್ನ ಮನೆಯು ನಿನ್ನ ಬೆನ್ನಲ್ಲಿಯೇ ಇದ್ದಿರಲಿ;" ಎಂದು ಶಾಪವನ್ನು ಕೊಟ್ಟನು.

ಸಾರಾಂಶ:— ಎಷ್ಟೋ ಜನರು ತಮ್ಮ ಅಲಸಿಕೆಯನ್ನು ಮುಚ್ಚಿಕೊಳ್ಳಲು ಮನಬಂದಂತೆ ಗಳಹುತ್ತಿರುತ್ತಾರೆ. ಆದರೆ ಅವರಿಗೆ ಕೊನೆಗೆ ಮೇಲಿನ ಆವೆಯಂತೆ ಕಷ್ಟವಾಗದೇ ಇರದು.

---

## ೮೬:— ತೋಲಗಳೂ, ನರಿಗಳೂ, ಗರುಡಪಕ್ಷಿಗಳೂ.

ಒಮ್ಮೆ ತೋಲಗಳಿಗೂ ಗರುಡಪಕ್ಷಿಗಳಿಗೂ ಭಯಂಕರವಾದ ಜಗಳವಾಯಿತು. ಆದರಲ್ಲಿ, ಗರುಡಪಕ್ಷಿಗಳನ್ನು ಸೋಲಿಸಬೇಕೆಂದು ತೋಲಗಳು ನರಿಗಳಿಗೆ, ತಮಗೆ ನೆರವಾಗಬೇಕೆಂದು ಬೇಡಿಕೊಂಡವು. ತೋಲಗಳ ಶಕ್ತಿಯನ್ನು, ಅವುಗಳ ವೈರಿಗಳಾದ ಗರುಡಪಕ್ಷಿಗಳ ಶಕ್ತಿಯನ್ನು ಏನೂ ಅರಿಯದೆ, ನರಿಗಳು ಒಮ್ಮೆಲೇ, ತೋಲಗಳಿಗೆ ನೆರವಾಗಲು ತಮ್ಮ ಸಮ್ಮತಿಯನ್ನು ಕೊಟ್ಟವು.

ತಾತ್ಪರ್ಯವೇನಂದರೆ:-- ಜಗಳಾಡುವ ಎರಡೂ ತಂಡಗಳ ಬಲವನ್ನರಿಯದೇ, ಆ ಜಗಳದಲ್ಲಿ ಕೈಹಾಕುವದು ಮೂರ್ಖತನವೇ ಸರಿ.

---

## ೪೭:— ಮಂಗವೂ, ಮೀನವೂ.



ಉಡಸಿಯ ಹತ್ತರ ಕಡಲಲ್ಲಿ, ಒಂದು ಹಡಗವು ಬಂಡೆಯೊಂದಕ್ಕೆ ಬಡಿದು ಒಡೆಯಿತು. ಅದರಲ್ಲಿ ಒಂದು ಮಂಗವಿತ್ತು. ಅದು ನೀರಲ್ಲಿ ಬಿದ್ದು ಮುಳುಮುಳುಗಿ ಏಳಹತ್ತಿತು. ಇದನ್ನು ನೋಡಿ, ಅದು ಮನುಷ್ಯನೆಂದು ತಿಳಿದುಕೊಂಡು, ಒಂದು ದೊಡ್ಡ ಮೀನವು, ಅದನ್ನು ತನ್ನ ಬೆನ್ನ ಮೇಲೆ ಕೂಡ್ರಿಸಿಕೊಂಡು ದಂಡೆಯ ಕಡೆಗೆ ನಡೆಯಿತು. ಬರಬರುತ್ತ ಮೀನವು ಮಂಗನಿಗೆ ನಿನ್ನ ಊರು ಯಾವದೆಂದು ಕೇಳಿತು. ನಾನು ಉಡಸಿಯವನೆಂದು ಮಂಗವು ಉತ್ತರ ಕೊಟ್ಟಿತು. ಮೀನವು:— “ ನಿನಗೆ ಕೃಷ್ಣನ ದೇವಾಲಯವು ಗೊತ್ತಿದೆಯೇ? ” ಎಂದು ಪ್ರತಿಯಾಗಿ ಮಂಗನನ್ನು ಕೇಳಿತು. ಮನುಷ್ಯನೆಂದು ಈ ಮೀನವು ನನ್ನನ್ನು ಹೀಗೆ ಪ್ರಶ್ನೆಮಾಡುತ್ತಿರುವದೆಂದು ಅರಿತು, ಮಂಗವು ತಾನು ಪೂರ್ಣವಾಗಿ ಮನುಷ್ಯನಂತೆ ನಟಿಸಿ ತೋರಿಸಬೇಕೆಂದು ವಿಚಾರಿಸಿ:— “ ಕೃಷ್ಣನ ದೇವಾಲಯವೆಂಬುದು ದೊಡ್ಡದೊಂದು ಅರಮನೆಯಿದೆ; ಅದರೊಳಕ್ಕೆ ನಾನೊಮ್ಮೆ ಹೋಗಿದ್ದೆನು; ಅಲ್ಲಿಯ ರಾಜನು ಬಹಳ ದೊಡ್ಡ ಮನಸ್ಸಿನವನಿದ್ದಾನೆ; ” ಎಂದು ಒಂದೇ ಸವನೇ ಮಾತಾಡಿತು. ಈ ಮೂರ್ಖತನದ ಮಾತುಗಳನ್ನು ಕೇಳಿ ಮೀನಕ್ಕೆ ಸಿಟ್ಟು ಬಂದು ಆ ಮಂಗನನ್ನು ಅಲ್ಲಿಯೇ ಕೆಳಗುರುಳಿಸಿ ಹೊರಟುಹೋಯಿತು.

ಸಾರಾಂಶ:— ಸುಳ್ಳಾಡಿ ಯಾರಿಗೂ ಸೌಖ್ಯವು ಸಿಕ್ಕಿಲ್ಲ. ಸಿಗುವದೂ ಇಲ್ಲ. ಆದ್ದರಿಂದ ಎಲ್ಲರೂ ಆದಷ್ಟು ಪ್ರಯತ್ನದಿಂದ ನಿಜವನ್ನೇ ನುಡಿಯಲು ಹೆಣಗಬೇಕು.

## ೮೮:— ಗೂಗೆಯೂ, ಕಾಗೆಯೂ.

ಗೂಗೆಗೆ ಹಿಂದುಮುಂದಿನದೆಲ್ಲ ತಿಳಿಯುತ್ತದೆಂದು ಜನರ ತಿಳುವಳಿಕೆ. ಅದರ ಕೂಗಿನ ಮೇಲಿಂದ ಒಳಿತು ಹೀನಗಳನ್ನು ಕೆಲವರು ತಿಳಿದು ಹೇಳುತ್ತಾರೆ. ಒಂದು ಕಾಗೆಯು ಗೂಗೆಯಂತೆ ತಾನೂ ಭವಿಷ್ಯವಾದಿಯೆನ್ನಿಸಿಕೊಳ್ಳಬೇಕೆಂದು ವಿಚಾರ ಮಾಡಿತು. ಗೂಗೆಯು ಹೇಗೆ ಕೂಗುತ್ತದೆಂಬದನ್ನು ಮನಗೊಟ್ಟು ಆ ಕಾಗೆಯು ಕೇಳಿಕೊಂಡಿತು. ಒಮ್ಮೆ ಬೀದಿಯಲ್ಲಿ ಕೆಲವು ಜನರು ಎಲ್ಲಿಗೋ ಸಾಗಿದ್ದರು. ಕಾಗೆಯು ಅವರ ತಲೆಯ ಮೇಲೆ ಆಕಾಶದಲ್ಲಿದ್ದು ಗೂಗೆಯಂತೆ ಕೂಗುತ್ತ ಕೊರಳನ್ನು ಹೊರಳಿಸಲಾರಂಭಿಸಿತು. ಮೊದಲಿಗೆ ಆ ಜನರು ಸೋಜಿಗಬಟ್ಟರು. ಹಿಂದಿನಿಂದ ಮೇಲೆ ಮೋರೆ ಮಾಡಲು ಈ ವಂಚಕ ಕಾಗೆಯು ಅವರಿಗೆ ಕಾಣಿಸಿತು. ಕೂಡಲೇ ಅವರು ಖೊಳ್ಳನೇ ನಕ್ಕುಬಿಟ್ಟು, ಹಾಸ್ಯಮಾಡುತ್ತ ಮುಂದೆ ಸಾಗಿಹೋದರು.

ತಾತ್ಪರ್ಯವೇನಂದರೆ:— ನಟನೆಯಿಂದ ಕಾಗೆಯು ಕೋಗಿಲೆಯಾಗಬಲ್ಲದೇ? ನೈಜಗುಣವಿದ್ದರೇನೇ ಮನುಷ್ಯನಿಗೆ ಯಾರಾದರೂ ಮಾನಕೊಡುತ್ತಾರೆ. ಕೇವಲ ಸೋಗು ಮಾಡುವದರಿಂದ ಎಲ್ಲರ ಹಾಸ್ಯಕ್ಕೆ ಮಾತ್ರ ಅವನು ಈಡಾಗುತ್ತಾನೆ; ಆದ್ದರಿಂದ ಗುಣವಿಲ್ಲದೇ ಒಣ ಸೋಗು ಮಾಡಲು ಯಾರೂ ಹೋಗಬಾರದು.

————

## ೮೯:— ಕಾಗೆಯೂ ನಾಯಿಯೂ.

ಒಂದು ಕಾಗೆಯು ದ್ಯಾಮವ್ವನಿಗೆ ಕೆಲವು ಒಡವೆಗಳನ್ನು ಅರ್ಪಿಸಬೇಕೆಂದು ಮನಸು ಮಾಡಿತು. ಆಗ ಅದು ನಾಯಿಗೆ ತನ್ನನ್ನು ಹಿಂಬಾಲಿಸಲು ಹೇಳಿಕೊಂಡಿತು. ಇದಕ್ಕೆ ನಾಯಿಯು:— “ ಎಲೋ ನಿನ್ನ ವಿಷಯದಲ್ಲಿ ದೇವಿಗೆ ಬಲು ಬೇಸರಾಗಿದೆ; ಆದ್ದರಿಂದ ನೀನುಕೊಡುವ ಒಡವೆಗಳನ್ನು ಆಕೆಯು ಸ್ವೀಕರಿಸುವದೇ ಇಲ್ಲ; ” ಎಂದು ಹೇಳಿತು. ಆಗ ಕಾಗೆಯು:— “ ಅಹುದಪ್ಪಾ; ಇವುಗಳನ್ನು ಸ್ವೀಕರಿಸಿ ಆಕೆಯು ನನ್ನನ್ನು ಅನುಗ್ರಹಿಸಲೆಂದೇ ನನ್ನ ಇಚ್ಛೆಯು ” ಎಂದು ಅಂದಿತು.

ಸಾರಾಂಶ:— ದೇವರು ನಮಗೆ ಅಕಲ್ಯಾಣ ಮಾಡುವನೆಂಬ ಭೀತಿಯಿಂದಲೇ ಅವನನ್ನು ಭಜಿಸುವವರು ಬಲು ಜನರು. ನಿಜವಾದ ಭಕ್ತಿಯಿಂದ ಅವನನ್ನು ಪೂಜಿಸುವವರು ಕಡಿಮೆ.

———

## ೯೦:-- ತೋಳವೂ, ಕುರಿಮರಿಯೂ.

ಒಂದು ಕುರಿಯ ಹಿಂಡಿನೊಳಗಿಂದ, ಒಂದು ಕುರಿಮರಿಯು ಹಿಂದೆ ಉಳಿಯಿತು. ಇದನ್ನು ನೋಡಿ ಒಂದು ತೋಳವು ಅದನ್ನು ಹಿಂಬಾಲಿಸಿತು. ಇನ್ನು ಇದರ ಕೈಯೊಳಗಿಂದಂತೂ ಪಾರಾಗುವ ಹಂಚಿಕೆಯು ಇಲ್ಲವೆಂದು ತಿಳಿದು ಆಕುರಿಮರಿಯು ತೋಳವು ತನ್ನ ಸಮೀಪಕ್ಕೆ ಬಂದ ಕೂಡಲೇ ನಗುತ್ತ:-" ಮಹಾರಾಯಾ, ನಾನಂತೂ ಸಾಯುವವನೇ; ಆದರೆ ಸೊಗಸಿನಿಂದ ಸಾಯಬೇಕೆಂದು ನನಗೆ ಬಯಕೆಯಾಗಿದೆ; ಆದ್ದರಿಂದ, ನನ್ನ ಮೇಲೆ ಸ್ವಲ್ಪ ದಯದೋರು; ನಿನ್ನ ಕೊಳಲನ್ನಿಷ್ಟು ನುಡಿಸಿ ತೋರಿಸು; ಕೊಂಚ ಕೇಳಿದ ನಂತರ



ನನ್ನನ್ನು ನೀನು ಕೊಲ್ಲು; ಆಗ್ಯೆ ನನಗೆ ಆನಂದವೇ ಆನಂದವಾಗುತ್ತದೆ;" ಎಂದು ನುಡಿಯಿತು. ತೋಳವು ಗಾಯನದ ಮೇಲೆ ಬಲು ಜೀವವಾದ್ದರಿಂದ, ತನ್ನ ಕೊಳಲನ್ನು ಯಾವಾಗಲೂ ಸಂಗಡಲೇ ತಂದಿರುತ್ತಿತ್ತು. ಪಾಪ, ಅದು ಉಬ್ಬಿನಿಂದ ಕೊಳಲನ್ನು ನುಡಿಸಹತ್ತಿತು. ಕುರಿಮರಿಯು ಕುಣಿಯಹತ್ತಿತು. ಇದನ್ನು ಕೇಳಿ ಸಮೀಪದಲ್ಲಿರುವ ನಾಯಿಗಳು ಓಡುತ್ತ ತೋಳವಿದ್ದಲ್ಲಿಗೆ ಬಂದವು. ಕೂಡಲೇ ತೋಳವು ಪಲಾಯನವಾಯಿತು; ಆಗದು ಮನದಲ್ಲಿ:-" ನಾನು ಹೇಳಿ ಕೇಳಿ ಕಟುಕನು; ಕುರಿಗಳನ್ನು ಕೊಲ್ಲುವದು ನನ್ನ ಕೆಲಸ; ಅದನ್ನು ಬಿಟ್ಟು ಅಲ್ಲದ ಕೆಲಸದಲ್ಲಿ ಕೈಹಾಕಿದ್ದಕ್ಕೆ ನನಗೆ ಚನ್ನಾಗಿ ಪ್ರಾಯಶ್ಚಿತ್ತವಾಯಿತು;" ಎಂದು ಗುಣಗುಟ್ಟುತ್ತ ಒತ್ತರಿಸಿತು.

ಸಾರಾಂಶ:-- ಎಷ್ಟೋ ಮನುಷ್ಯರಿಗೆ, ಕೆಲಕೆಲವು ವಿಷಯಗಳು ಬಹಳ ಸೇರುತ್ತವೆ. ಒಮ್ಮೆ ಅವರು ಅವುಗಳಲ್ಲಿ ತಲ್ಲೀನರಾದರೆಂದರೆ ಅವರಿಗೆ ಅನ್ಯದರ ಅರಿವೇ

ಇರುವದಿಲ್ಲ. ಇಂಥವರನ್ನು ಜಾಣರಾದವರು ಬಲುಬೇಗ ಚಾತುರ್ಯದಿಂದ ವಂಚಿಸಿ ಬಿಡುತ್ತಾರೆ.

---

## ೯೧:— ರಾಜಹಂಸವೂ, ರಣಪಂತವೂ.



ಒಂದು ರಣಪಂತವು ತಾನು ರಾಜಹಂಸದಂತೆ ಬೆಳ್ಳಗಾಗಬೇಕೆಂದು ಬಯಸಿತು. ರಾಜಹಂಸವು ಸದಾ ನೀರಲ್ಲಿದ್ದು ಮೈತೊಳೆದುಕೊಳ್ಳುತ್ತಿರುವದೇ ಅದು ಬಿಳಿಬಣ್ಣದ್ದಾಗಿರುವದರ ಕಾರಣವೆಂದು ಅದು ತಿಳಿದುಕೊಂಡಿತು. ಕೂಡಲೇ ಅದು ತಾನಿರುವ ಸ್ಥಳವನ್ನು ಬಿಟ್ಟು ನೀರಿದ್ದ ಸ್ಥಳಕ್ಕೆ ಬಂದಿತು. ಇರಇರುತ್ತ, ಅದರ ಮೈಬಣ್ಣವಂತೂ ಬೆಳ್ಳಗಾಗಲೇ ಇಲ್ಲ. ತುದಿಯಾಗಿ ಅದು ನರಳುತ್ತ ಪ್ರಾಣಬಿಟ್ಟಿತು.

ಸಾರಾಂಶ:—ತನ್ನ ಸ್ವಾಭಾವಿಕವಾದ ಇರುವಿಕೆಯನ್ನು ತೊರೆದು ಬೇರೆ ಸ್ಥಿತಿಯಲ್ಲಿರಲು ಯತ್ನಿಸಿದರೆ, ಯಾರಿಗೂ ಅದು ಕೈಗೂಡುವದಿಲ್ಲ; ಇಷ್ಟೇ ಅಲ್ಲ; ಅವರು ನಷ್ಟಕ್ಕೆ ಗುರಿಯಾಗುತ್ತಾರೆ.

## ೧೨— ಕತ್ತೆಯೂ ಕಾಗೆಯೂ.



ಒಂದು ಕತ್ತೆಯ ಬೆನ್ನಮೇಲೆ ಒಂದು ಕಾಗೆಯು ಕುಳಿತುಕೊಂಡು, ಅದರ ಮೈಗೆ ಚುಚ್ಚಲಿಕ್ಕೆ ಆರಂಭಿಸಿತು. ಆಗ ಕತ್ತೆಯು ಗಟ್ಟಿಯಾಗಿ ಕಿರಚುತ್ತ ಮೈ ಜಾಡಿಸಹತ್ತಿತು. ಈ ಚಮತ್ಕಾರವನ್ನು ನೋಡುತ್ತಿದ್ದ ಒಬ್ಬಾನೊಬ್ಬನು ನಗಹತ್ತಿದನು. ಆದರೆ ಈ ಪ್ರಕಾರವನ್ನು ನೋಡಿದ ಒಂದು ತೋಳಕ್ಕೆ ಮಾತ್ರ ಇದು ಸೋಜಿಗವೆನಿಸಿತು. ತೋಳವು:— “ ಏನಿದು! ಜನರೆಷ್ಟು ಅನ್ಯಾಯಿಗಳು! ಕಾಗೆಯು ಈಗ ಮಾಡುತ್ತಿರುವ ಕೆಲಸವನ್ನು ನಾನು ಮಾಡುತ್ತಿದ್ದರೆ, ನನ್ನ ಬೆನ್ಹತ್ತಿ ಜನರು ಬಡಿಯುತ್ತಿದ್ದರು; ಒಂದು ಕೆಲಸವನ್ನು ಕಾಗೆಯು ಮಾಡಿದರೆ ಜನರು ಸುಮ್ಮನೇ ನಕ್ಕುಬಿಡಬೇಕು; ಅದೇ ಕೆಲಸವನ್ನು ನಾನು ಮಾಡಿದರೆ ನನ್ನನ್ನು ಅವರು ಸಾಯಬಡಿಯಬೇಕು; ಇದು ಯಾವ ನ್ಯಾಯ; ” ಎಂದು ವಟಗುಟ್ಟಿತು.

ಸಾರಾಂಶ:— ಒಮ್ಮೊಮ್ಮೆ, ಅಪರಾಧವು ಒಂದೇಯಾಗಿದ್ದರೂ ಕೊಡುವ ಶಿಕ್ಷೆಯಲ್ಲಿ ಹೆಚ್ಚುಕಡಿಮೆಯಾದದ್ದು ಮನುಷ್ಯಮಾತ್ರರಲ್ಲಿ ಕಂಡು ಬರುತ್ತದೆ. ಇದಕ್ಕೆ ಆ ನ್ಯಾಯಾಧೀಶನ ಸ್ವಭಾವವೇ ಕಾರಣವು.

———————

## ೯೩:— ರಣಪಂತವೂ ಸರ್ಪವೂ.

ಒಮ್ಮೆ, ಹಸಿದು ಆಹಾರಕ್ಕಾಗಿ ಹಾರಾಡುತ್ತ ಇರುವ ಒಂದು ರಣಪಂತವು ನದಿಯ ದಂಡೆಯಮೇಲೆ ಒಂದು ಸರ್ಪವನ್ನು ಕಂಡಿತು. ಆಗ ಅದು ಜಪ್ಪಿಸಿ ಸರ್ಪದ ಮೇಲಕ್ಕೆ ಹಾರಿ, ಚುಂಚುವಿನಿಂದ ಅದನ್ನು ಕಚ್ಚಿಕೊಂಡು ಹೋಗಿ, ತಿನ್ನುವ ಕೆಲಸದಲ್ಲಿತ್ತು. ಇಷ್ಟರಲ್ಲಿಯೇ ಆ ಸರ್ಪವು ಅದರ ಮೈಗೆಲ್ಲ ಸುತ್ತಿ, ಕೊರಳಿಗೆ ಭಯಂಕರವಾಗಿ ಕಚ್ಚಿ, ಆ ರಣಪಂತವನ್ನು ಕೊಂದುಬಿಟ್ಟಿತು. ಸಾಯುವಾಗ ರಣಪಂತವು:— ಅನ್ಯರನ್ನು ಹಿಂಸೆಮಾಡಿ ತನ್ನ ಹಸಿವು ಹಿಂಗಿಸಲೆತ್ನಿಸುವವನಿಗೆ ಇದೇ ತಕ್ಕ ಪ್ರಾಯಶ್ಚಿತ್ತವು; " ಎಂದುಉದ್ಗಾರ ತೆಗೆಯಿತು.

ತಾತ್ಪರ್ಯವೇನಂದರೆ:— ಒಂದು ಪದಾರ್ಥವು ಸಿಗಲು ಅಶಕ್ಯವಾಗಿದ್ದು, ಮತ್ತು ಅದು ಅಕಸ್ಮಾತ್ತಾಗಿ ಸಿಕ್ಕರೆ, ಅದನ್ನು ತಿಂದು ತೇಗುವ ಸಾಮರ್ಥ್ಯವು ನಮ್ಮಲ್ಲಿಲ್ಲದಿದ್ದರೂ, ಅಂತಹ ಪದಾರ್ಥವನ್ನು ಅತ್ಯಾಸೆಯಿಂದ ನಾವು ತಿನ್ನಲಿಕ್ಕೆ ಹೋದರೆ ನಮಗೆ ನಾಶವು ಬರದೇ ಇರದು.

---

## ೯೪— ಕಾಗೆಯೂ ಪಾರಿವಾಳಗಳೂ.

ಒಂದು ಗೂಡಿನಲ್ಲಿ ಕೆಲವು ಪಾರಿವಾಳಗಳು ಇರುತ್ತಿದ್ದವು. ಒಂದು ಕಾಗೆಯು ತನ್ನ ಪುಚ್ಚಗಳನ್ನು ಬಿಳಿ ಮಾಡಿಕೊಂಡು ಆ ಗೂಡಿನಲ್ಲಿ ಹೊಕ್ಕಿತು. ಅದು ಸುಮ್ಮನಿರುವವರೆಗೆ ಪಾರಿವಾಳಗಳು ಕಾಗೆಯನ್ನು ಗುರುತಿಸಲಿಲ್ಲ. ಆದರೆ ಈ ಹೊಸಮನೆಯಲ್ಲಿ ಆ ಕಾಗೆಗೆ ಬಹುಕಾಲ ಸುಮ್ಮನಿರುವದಾಗಲಿಲ್ಲ. ಒಮ್ಮೆಲೇ ಆನಂದದ ಭರದಲ್ಲಿ "ಕಾ ಕಾ" ಎಂದು ಕೂಗತೊಡಗಿತು. ಈ ಸಪ್ಪಳವನ್ನು ಕೇಳಿ ಪಾರಿವಾಳಗಳು ಇದು ತಮ್ಮ ಜಾತಿಯದಲ್ಲೆಂದು ತಿಳಿದು, ಅದನ್ನು ಮುತ್ತಿ ಅಲ್ಲಿಂದ ಕಾಗೆಯನ್ನು ಹೊರಗೆ ನೂಕಿದವು. ಆಗ ಆ ಕಾಗೆಯು ತನ್ನ ಬಳಗದ ಬಳಿಗೆ ಹೋಗಲು ಅದರ ಪುಚ್ಚದ ಬಿಳುಪನ್ನು ನೋಡಿ, ಅವೂ ಇದನ್ನು ತಮ್ಮೊಳಗೆ ಸೇರಿಸಿಕೊಳ್ಳಲಿಲ್ಲ.

ಸಾರಾಂಶ:— ಇಲ್ಲದೊಂದು ಸೋಗು ತೆಗೆದುಕೊಂಡು ಜನರನ್ನು ವಂಚಿಸಲು ಯತ್ನಿಸುವವನು ಎಲ್ಲರ ಉಪಹಾಸಕ್ಕೆ ಗುರಿಯಾಗುತ್ತಾನೆ.

---

## ೯೫— ಕತ್ತೆಯೂ ಕಪ್ಪೆಯೂ.



ಒಂದು ಕತ್ತೆಯು ಬಹಳ ಒಜ್ಜೆಯನ್ನು ಬೆನ್ನ ಮೇಲೆ ಹೇರಿಕೊಂಡು ಬೀದಿಯಲ್ಲಿ ಹೋಗುತ್ತಿತ್ತು. ಆದರೆ ನಡುವೇ ಅದಕ್ಕೆ ಭಾರವು ಹೆಚ್ಚಾಗಿ ಒಂದು ಸಣ್ಣ ಜಲಾಶಯದಲ್ಲಿ ಅದು ಕಡಕೊಂಡು ಬಿತ್ತು. ಆಗ ಅದು ಬಹು ವೇದನೆಯನ್ನು ಹೊಂದುತ್ತ ಕಿರಚಹತ್ತಿತು. ಇದನ್ನು ನೋಡಿ ಆ ಜಲಾಶಯದಲ್ಲಿಯ ಒಂದಾನೊಂದು ಕಪ್ಪೆಯು:— “ ಎಲೋ; ಬಿದ್ದು ಸ್ವಲ್ಪೇ ವೇಳೆಯಲ್ಲಿಯೇ ನೀನು ಇಷ್ಟೊಂದು ಒದರುತ್ತಿರುವಿಯಲ್ಲ; ಜೀವವಿರುವ ವರೆಗೂ ಇಲ್ಲಿಯೇ ನಮ್ಮಂತೆ ಕಾಲಕಳೆಯಬೇಕಾದರೆ ನೀನೇನು ಮಾಡುವಿ? ” ಎಂದು ಕೇಳಿತು.

ಸಾರಾಂಶ:— ರೂಢಿಯಿಂದ, ಒಬ್ಬ ಮನುಷ್ಯನಿಗೆ ಅತಿಸುಲಭವಾಗಿ ಕಾಣುವ ಸಂಗತಿಗಳೇ, ರೂಢಿಯಿಲ್ಲದ ಮತ್ತೊಬ್ಬನಿಗೆ ಕಠಿಣವಾಗಿ ತೋರುತ್ತವೆ.

———————

## ೯೬— ಕಾಲಿಗೆ ಸರಪಳಿಯನ್ನು ಕಟ್ಟಿದ ಕಾಗೆಯು.

ತನ್ನ ಹೊಲದಲ್ಲಿ ಹೋರೆಯನ್ನು ಮಾಡುತ್ತಿರುವಾಗ ಒಬ್ಬ ಒಕ್ಕಲಿಗನಿಗೆ ಒಂದು ಕಾಗೆಯು ಸಿಕ್ಕಿತು; ಅವನು ಅದರ ಕಾಲಿಗೆ ಸರಪಳಿಯನ್ನು ಕಟ್ಟಿ ತನ್ನ ಮಗುವಿಗೆ ಆಡಲಿಕ್ಕೆಂದು ಅದನ್ನು ಕೊಟ್ಟನು. ಆ ಬಂಧನದ ಸ್ಥಿತಿಯು ಕಾಗೆಗೆ ಬೇಸರವಾಯಿತು. ಒಮ್ಮೆ ಅದು ಸರಪಳಿಯಿಂದ ಸಹಿತವಾಗಿಯೇ ಹಾರಿಹೋಗಿ ಅಡವಿಯನ್ನು ಸೇರಿತು. ಆದರೆ ಅಲ್ಲಿ ಒಂದು ಮರದ ಟೊಂಗೆಗೆ ಅದರ ಸರಪಳಿಯು ಸಿಲುಕಿಕೊಂಡಿತು. ಆದ್ದರಿಂದ ಆ ಕಾಗೆಗೆ ಹಾರಲಿಕ್ಕೆ ಬರದಂತೆ ಆಗಿ ಟೊಂಗೆಯ ಕೆಳಗೆ ಪಟಪಟ ಒದ್ದಾಡುತ್ತ ಪ್ರಾಣಬಿಟ್ಟಿತು. ಸಾಯುವಾಗ ಅದು:— “ ಹೀಗೆ ಅಡವಿಯಲ್ಲಿ ಹಸಿವಿನಿಂದ ಮರಣ ಹೊಂದುವದಕ್ಕಿಂದ ಊರಲ್ಲಿ ಮನುಷ್ಯನ ದಾಸಾನುದಾಸನಾಗುವದು ಒಳಿತೆಂದು ” ಒಂದೇಸವನೇ ಸಂಕಟಪಟ್ಟಿತು.

---

## ೯೭— ಕಂಟಿಯೂ ಸಾಗವಾನಿಯುಮರವೂ.

ಒಮ್ಮೆ ಒಂದು ಕಂಟಿಯು ಸಾಗವಾನಿಯ ಮರಕ್ಕೆ:— “ ಎಲೋ, ನಾನು ಬಲು ಗಟ್ಟಿಗನೆಂದು ನೀನು ಬಲು ಜಂಬಬಡಿಯುತ್ತೀ; ನಿನ್ನ ಗಟ್ಟಿಗತನವು ಬಿರುಗಾಳಿಯಲ್ಲಿ ಹೊರಬೀಳುವದು; ಆಗ್ಯೆ ನೀನು ಉಳಿಯುವಿಯೋ; ನಾನೋ; ತಡೆ; ನೋಡುವಾ; ” ಎಂದು ಗಹಗಹಿಸಿತು. ಇಷ್ಟರಲ್ಲಿ ಸುಂಟರಗಾಳಿಯು ಹೊಡೆಯಲಾರಂಭಿಸಿತು. ಸಾಗವಾನಿಯ ಮರವು ನೇರವಾಗಿ ಬೆಳೆದದ್ದರಿಂದ, ಗಾಳಿಯ ಹೊಡತವನ್ನು ತಡೆಯುವದಾಗದೆ ಬುಡಸಹಿತ ಕಿತ್ತುಬಿದ್ದಿತು. ಕಂಟಿಯು ತನ್ನ ಟೊಂಗಗಳನ್ನು ವಿನಯದಿಂದ ಬಾಗಿಸಿದ್ದರಿಂದ ಅದಕ್ಕೆ ಏನೂ ಬಾಧೆಯುಂಟಾಗಲಿಲ್ಲ. ಗಾಳಿಯು ನಿಂತಮೇಲೆ ಸಾಗವಾನಿಯ ಮರಕ್ಕೆ ಕಂಟಿಯು ಅಂದದ್ದು— “ ಹೇಗದೆ? ನೀನು ಸೋತಿಯೋ? ನಾನೋ? ” ಎಂದು ಹೀಯಾಳಿಸಿತು. ಅದನ್ನು ಕೇಳಿ ಸಾಗವಾನಿಯ ಮರವು:— “ ಏನು? ಅಬ್ಬಬ್ಬ! ಇದೇ ನಿನ್ನ ಶಕ್ತಿಯ ಪರೀಕ್ಷೆಯೋ? ನೀನುಳಿದದ್ದು ನಿನ್ನ ಶಕ್ತಿಯ ಮಹಿಮೆಯಿಂದಲ್ಲ; ಅಶಕ್ತತೆಯ ಮೂಲಕವಾಗಿ; ಗಾಳಿಗೆ ತಲೆಬಾಗಿ ನೀನು ಜೀವವನ್ನು ಉಳಿಸಿಕೊಂಡಿರುವಿ; ನಾನು ವೈರಿಗೆ ಎದುರಾಗಿ ಕೈಗೆ ಕೈ ಹತ್ತಿ ಕಾದಿ ಯುದ್ಧದಲ್ಲಿ ಅಕಸ್ಮಾತ್ತಾಗಿ ಬಿದ್ದೆನು; ಇದೇ ನಿಜವಾದ ಶೌರ್ಯವು; ಅಶಕ್ತತೆಯನ್ನು ತೋರಿ ಕೈಕಾಲು ಬಿದ್ದು ಜೀವವನ್ನು ಉಳಿಸಿಕೊಳ್ಳುವದಕ್ಕಿಂತ ಕಾಳಗದಲ್ಲಿ ಕಾದುತ್ತ ಕಾದುತ್ತ ಮಡಿಯುವದು ಮೇಲು; ಎಂದು ಕಂಟಿಗೆ ಚುಚ್ಚಿ ಉತ್ತರವನ್ನು ಕೊಟ್ಟಿತು.

---

## ೯೮— ಕುರುಬನೂ ಆತನ ಕುರಿಗಳೂ.

ಕುರುಬನೊಬ್ಬನು ತನ್ನ ಕುರಿಗಳನ್ನು ಕಾಯುತ್ತಿದ್ದನು. ಅವ್ರಗಳಿಗೆ..ಆಲದ ಹಣ್ಣುಗಳನ್ನೂ ಎಲೆಗಳನ್ನೂ ತಿನ್ನಲು ಹಾಕಬೇಕೆಂದು ಅಪನಿಗೆ ಒಮ್ಮೆ ಇಚ್ಛೆಯಾಯಿತು. ಕೂಡಲೇ ತನ್ನ ದೋತರವನ್ನು ಗಿಡದ ಬುಡಕ್ಕೆ ಇಟ್ಟು, ಗಿಡವನ್ನು ಹತ್ತಿ ತಾನು ಎಲೆಹಣ್ಣುಗಳನ್ನು ಕೆಳಗೆ ಒಗೆಯಹತ್ತಿದನು. ಒಗೆದದ್ದನ್ನೆಲ್ಲ, ಕುರಿಗಳು, ಬಹು ಹಸಿದದ್ದರಿಂದ, ಗಪ ಗಪ ತಿನ್ನಹತ್ತಿದವು. ತಿನ್ನುತ್ತ ತಿನ್ನುತ್ತ ಆ ಕುರುಬನ ದೋತರವನ್ನೂ ಅವು ತಿನ್ನಹತ್ತಿದವು. ಇದನ್ನು ಮೇಲಿನಿಂದಲೇ ನೋಡಿ ಕುರುಬನು:— “ ಕೃತಘ್ನ ಪಶುಗಳೇ! ಪರರಿಗೆ ಹೊದ್ದುಕೊಳ್ಳಲೆಂದು ಉಣ್ಣೆಯನ್ನು ನೀವು ಕೊಡುತ್ತೀರಿ; ಆದರೆ ನಿಮ್ಮ ದನಿಯ ದೋತರವನ್ನೂ ತಿಂದುಬಿಡಹತ್ತಿರುವಿರಿ; ಭಲೆ! ಇದಕ್ಕೇನನ್ನಬೇಕು? ” ಎಂದು ಉದ್ಗಾರ ತೆಗೆದನು.



ಸಾರಾಂಶ:— ಹಸಿವೆಯಿಂದ ಹಂಬಲಿಸುತ್ತಿರುವವನು, ತನಗೆ ಯಾರ ಪದಾರ್ಥ ಸಿಕ್ಕಿದೆ; ತಾನು ಏನನ್ನು ತಿನ್ನುತ್ತೇನೆಂಬ ಎಚ್ಚರಿಲ್ಲದವನಾಗಿರುತ್ತಾನೆ. ಆಗ್ಯೆ ಪಾಪ ಪುಣ್ಯಗಳ ಕಲ್ಪನೆಯೂ ಕೂಡ ಅವನಿಗೆ ಬರುವದಿಲ್ಲ.

———————

## ೯೯— ದೇವರೂ ಮೋಸವೂ.

ಒಮ್ಮೆ ದೇವರು, ತನ್ನ ಸೇವಕನಿಗೆ:— “ಎಲೋ! ಹೋಗು ಮತ್ತು ಮೋಸದ ಮಿಶ್ರಣ ಮಾಡಿ ಎಲ್ಲ ಕೈ ಕೆಲಸದವರಿಗೆ ಹಂಚು;” ಎಂದು ಆಜ್ಞೆ ಮಾಡಿದನು. ಅಪ್ಪಣೆಯಂತೆ ಮಿಶ್ರಣವು ಸಿದ್ಧವಾಯಿತು. ಅದನ್ನು ನೆರೆದ ಎಲ್ಲ ಕೈ ಕೆಲಸದವರಿಗೆ ಹಂಚಿದನು; ಆದರೆ ತಕ್ಕಷ್ಟಕ್ಕಿಂತ ಹೆಚ್ಚಾಗಿ ಬಹಳ ಮಿಶ್ರಣವು ಉಳಿಯಿತು. ಇಷ್ಟರಲ್ಲಿಯೇ ಸಿಂಪಿಗನೂ ಅಕ್ಕಸಾಲಿಗನೂ ಅಲ್ಲಿಗೆ ಬಂದರು. ಉಳಿದದ್ದನ್ನೆಲ್ಲ ಆ ದೇವ ಸೇವಕನು ಇವರಿಬ್ಬರಲ್ಲಿ ಹಂಚಿ ತೀರಿಸಿಬಿಟ್ಟನು.

ತಾತ್ಪರ್ಯವೇನಂದರೆ:— ಎಲ್ಲ ಉದ್ಯೋಗಗಳಲ್ಲಿಯೂ ಅಲ್ಪಸ್ವಲ್ಪ ಮೋಸವು ಇದ್ದೇ ತೀರುತ್ತದೆ. ಆದರೆ ಸಿಂಪಿಗರ ಮತ್ತು ಅಕ್ಕಸಾಲಿಗರ ಉದ್ಯೋಗವೆಂದರೆ ಮೂರ್ತಿಮಂತ ಮೋಸದ ವಾಸಸ್ಥಳವು.

----

## ೧೦೦— ಇರುವೆಗಳ ಉತ್ಪತ್ತಿಯು.

ಒಬ್ಬ ಒಕ್ಕಲಿಗನು ನೆರೆಹೊರೆಯವರ ಕಾಳುಗಳನ್ನು ಕದ್ದು ತನ್ನ ಮನೆಯಲ್ಲಿ ಕೂಡಹಾಕುವ ಪರಿಪಾಠವನ್ನಿಟ್ಟಿದ್ದನು. ಈ ದುಷ್ಟ ವರ್ತನದಿಂದ ಅವನು ಎಲ್ಲರಿಗೂ ಬೇಡಾಗಿದ್ದನು. ಅವನನ್ನು ಶಿಕ್ಷಿಸಬೇಕೆಂದು ದೇವರು ಅವನಿಗೆ ಇರುವೆಯ ಜನ್ಮವನ್ನು ಕೊಟ್ಟನು. ಇದರಿಂದ ಅವನ ರೂಪವು ಬೇರೆಯಾಯಿತಷ್ಟೇ. ಕಾಳು ಕದಿಯುವ ಕೆಲಸವು ಹಾಗೇ ಸಾಗಿತು.

ಸಾರಾಂಶ:— “ಕಲಿತ ಗುಣವು ಕಟ್ಟಿಗೆಯಲ್ಲಿ ಮಲಗಿದರೂ ಬಿಡದು;” ಎಂಬಂತೆ ಮನುಷ್ಯನ ಮೂಲ ಸ್ವಭಾವದಲ್ಲಿ ಏನಾದರೂ ಹೆಚ್ಚು ಕಡಿಮೆಯಾಗುವದಿಲ್ಲ.

----

## ೧೦೧:— ಸಾಗರ ತೀರದ ಮೇಲಿನ ಸಂಚಾರಕರು.

ಕೆಲವು ಜನ ಗೆಳೆಯರು ಸಮುದ್ರ ತೀರದ ಮೇಲೆ ಸಹಜವಾಗಿ ಸಂಚರಿಸುತ್ತಿದ್ದರು. ಆಗ ಅವರಿಗೆ ದೂರದಲ್ಲಿ ತೇಲಿ ಬರುತ್ತಿರುವಂತೆ, ಒಂದು ಕಪ್ಪು ಬಣ್ಣದ ಪದಾರ್ಥವು ಕಣ್ಣಿಗೆ ಕಾಣಿಸಿತು. ಅದನ್ನು ನೋಡಿ ಅವರು ಒಂದಾನೊಂದು ಹಡಗು ಸಮುದ್ರದಂಡೆಗೆ ಬರುತ್ತಿರಬಹುದೆಂದು ಬಗೆದರು. ಆ ಪದಾರ್ಥವು ಸಮೀಪಕ್ಕೆ ಸೇರಹತ್ತಲು ಅದೊಂದು ಚಿಕ್ಕ ನೌಕೆಯಿದೆಯೆಂದು ಅವರಿಗೆ ಭಾಸವಾಸವಾಯಿತು. ಕಟ್ಟಕಡೆಗೆ ಆಪದಾರ್ಥವು ಎದುರಿಗೇ ಬರಲು ಅದು ಒಂದು ತರಹದ ಕಪ್ಪುಬಣ್ಣದ ಹುಲ್ಲುಹೊರೆಯೆಂದು ಆ ಗೆಳೆಯರಿಗೆ ಪೂರ್ಣವಾಗಿ ತಿಳಿಯಿತು.

ಸಾರಾಂಶವೇನಂದರೆ:— ದೂರದಲ್ಲಿರುವ ಯಾವದೊಂದು ವಸ್ತುವಿನ ಅಥವಾ

ಯಾವನೊಬ್ಬ ಮನುಷ್ಯನ ಹೆಸರು ಕೇಳಿ, ನಾವು ಅದರ ಅಥವಾ ಆ ಮನುಷ್ಯನ ವಿಷಯವಾಗಿ ಕೆಲವೊಂದು ಕಲ್ಪನೆಗಳನ್ನು ಕಟ್ಟುತ್ತೇವೆ. ಆದರೆ ಆ ವಸ್ತುವು ಅಥವಾ ಆ ಮನುಷ್ಯನು ಕಣ್ಮುಂದೆ ಬರಲು ಮುಂಚಿನ ಕಲ್ಪನೆಗಳಲ್ಲಿಯ ಅನೇಕ ವಿಷಯಗಳು ಬಯಲಾಗಿ ಹೋಗಬಹುದು.

———

## ೧೦೨— ಕತ್ತೆಯೂ, ನಾಯಿಯೂ.



ಒಬ್ಬ ಸುಣ್ಣಗಾರನು ಸುಣ್ಣವನ್ನೂ ಊಟದ ಪದಾರ್ಥಗಳನ್ನೂ ತನ್ನ ಕತ್ತೆಯ ಮೇಲೆ ಹೇರಿ, ಹಿಂದಿನಿಂದ ಅದನ್ನು ತಾನು ಹೊಡೆಯುತ್ತ ಹಾದೀ ಹಿಡಿದಿದ್ದನು. ಅವನ ಹಸಿದ ನಾಯಿಯೂ ತೇಕುತ್ತ ಅವನ ಹಿಂದೇ ಸಾಗಿತ್ತು. ಕೆಲಹೊತ್ತಿನಮೇಲೆ ಸುಣ್ಣಗಾರನು ಹಾದಿಯ ದಣುವಿನಿಂದ ಬಳಲಿ ವಿಶ್ರಾಂತಿಗಾಗಿ ಒಂದು ಗಿಡದ ಬುಡದಲ್ಲಿ ಮಲಗಿ ನಿದ್ರೆಹೋದನು. ಆಗ ಕತ್ತೆಯೂ ಅತ್ತಿತ್ತ ಮೇಯುತ್ತಿತ್ತು. ಆಗ್ಯೆ ನಾಯಿಯು ಹಸಿವನ್ನು ತಡೆಯಲಾರದೆ, ಕತ್ತೆಗೆ ಅದರ ಬೆನ್ನಮೇಲಿನ ತಿನುಸುಗಳಲ್ಲಿಯ ತನ್ನ ಭಾಗವನ್ನು "ದಯವಿಟ್ಟು ಕೊಡಪ್ಪಾ" ಎಂದು ಬೇಡಿಕೊಂಡಿತು. ಆದರೆ ಅದರ ಬೇಡಿ

ಕೆಯನ್ನು ಬಗೆಯುವೆ “ ಯಜಮಾನನು ಏಳಲಿ; ತಡೆ; ಅವನು ಎದ್ದಮೇಲೆ ನಿನ್ನ ಭಾಗವು ನಿನಗೆ ಸಿಗುವದು; ಅಲ್ಲಿಯವರೆಗ ಅವಸರ ಪಡಿಸಬೇಡೆಂದು ” ಶಾಂತವಾಗಿ ಕತ್ತೆಯು ನುಡಿಯಿತು. ಪಾಪ, ನಾಯಿಯು ಅಷ್ಟಕ್ಕೇ ಸುಮ್ಮನಾಯಿತು. ಇಷ್ಟರಲ್ಲಿಯೇ ಸಮೀಪದ ಅಡವಿಯೊಳಗಿಂದ ಒಂದು ದೊಡ್ಡ ತೋಳವು ಜಿಗಿಯುತ್ತ ಬಂದು ಕತ್ತೆಯ ಕುತ್ತಿಗೆಯನ್ನು ಒತ್ತಹತ್ತಿತು. ಆಗ ಕತ್ತೆಯು:— “ ಅಯ್ಯೋ! ನನ್ನನ್ನು ಈ ಕ್ರೂರ ಪಶುವಿನ ಬಾಯಿಯೊಳಗಿಂದ ಬಿಡಿಸಿಕೋ, ” ಎಂದು ನಾಯಿಗೆ ಆರ್ತಸ್ವರದಿಂದ ಕರೆಯಹತ್ತಿತು. ಇದನ್ನು ಕೇಳಿ ನಾಯಿಯು:— “ ಯಜಮಾನನು ಏಳಲಿ; ತಡೆ; ಅವನು ಎದ್ದಮೇಲೆ ಅವನು ನಿನ್ನನ್ನು ಬಿಡಿಸಿಕೊಳ್ಳುವನು; ಅಲ್ಲಿಯವರೆಗೆ ಅವಸರ ಪಡಿಸಬೇಡೆಂದು ” ಗಂಭೀರವಾಗಿ ಅಂದಿತು. ನಾಯಿಯು ಮಾತನಾಡುತ್ತಿರುವಾಗಲೇ ತೋಳವು ಕತ್ತೆಯ ಕುತ್ತಿಗೆಯನ್ನು ಒತ್ತಿ ರಕ್ತವನ್ನು ಹೀರಿಬಿಟ್ಟಿತು.

ಸಾರಾಂಶ:— ತಮಗೆ ಅನ್ಯರು ಸಹಾಯವಾಗಬೇಕೆಂಬ ಇಚ್ಛೆ ಇದ್ದವರು, ತಾವು ಅನ್ಯರಿಗೆ ಸಹಾಯವಾಗುವದು ಉತ್ತಮ.

———

## ೧೦೩— ಊರ ಕತ್ತೆಯೂ, ಅಡವಿಯ ಕತ್ತೆಯೂ.

ಒಬ್ಬ ಮನುಷ್ಯನಲ್ಲಿ ಒಂದು ಧಷ್ಟಪುಷ್ಟ ಕತ್ತೆಯಿತ್ತು. ಒಮ್ಮೆ ಅದು ಆನಂದದಿಂದ ಒಂದು ಗಷ್ಟೆಯಲ್ಲಿ ಮೇಯುತ್ತಿತ್ತು. ಇಷ್ಟರಲ್ಲಿ ಅದಕ್ಕೆ ಒಂದು ಅಡವಿಯ ಕತ್ತೆಯ ಭೆಟ್ಟಿಯಾಯಿತು. ಅದು:— “ ಅಣ್ಣಾ! ನಿನ್ನ ಬಾಳೇ ಬಾಳು ನೋಡು! ನನಗಿಂತಲೂ, ನನ್ನ ಕಿಂತಲೂ ನೀನು ಬಲು ಸೌಖ್ಯವಾಗಿರುವಿಯೆಂದೆನಿಸುತ್ತದೆ; ” ಎಂದೆನ್ನುತ್ತ ಅದು ಅಡವಿಯಲ್ಲಿ ಹೊರಟುಹೋಯಿತು. ಮುಂದೊಮ್ಮೆ ಆ ಊರ ಕತ್ತೆಯ ಯಜಮಾನನು ಅದರ ಬೆನ್ನಮೇಲೆ ಬಲುದೊಡ್ಡ ಭಾರವನ್ನು ಹೊರಿಸಿದನು. ಇದರಿಂದ ಅದಕ್ಕೆ ಮುಂದೆ ನಡೆಯಲಿಕ್ಕೇ ಬರದಂತಾಯಿತು. ಮುಂದೆ ಸಾಗದಂತಾಗಲು, ಯಜಮಾನನು ಅದಕ್ಕೆ ಒಂದೇಸವನೇ ಬಡಿಗೆಯಿಂದ ಬಡಿಯಹತ್ತಿದನು. ಈ ಸಮಾಚಾರವು ನಡೆದಾಗಲೇ ಮೊದಲಿನ ಅಡವಿಯ ಕತ್ತೆಯು ಮತ್ತೊಮ್ಮೆ ಆ ಸ್ಥಳದ ಮುಂದೆ ಸುಳಿಯಿತು. ಆ ಊರ ಕತ್ತೆಯ ಆಗಿನ ಸ್ಥಿತಿಯನ್ನು ಕಂಡು:— “ ಗೆಳೆಯಾ! ನಾನೇನೋ ನಿನ್ನ ಸ್ಥಿತಿಯು ನನಗಿಂತ ಚನ್ನಾಗಿದೆಯೆಂದು ತಿಳಿದಿದ್ದೆನು; ಆದರೆ ಈಗಿನ ನಿನ್ನ ಸ್ಥಿತಿಯನ್ನು ನನ್ನ ಕಣ್ಣುಗಳೇ ನೋಡಲಾರವು; ಈಗ ತಾನೇ ಮೊದಲಿನ ನನ್ನ ಗ್ರಹಿಕೆಯು ತಪ್ಪೆಂದು ತಿಳಿದೆನು; ಬಂಗಾರವು ಬಲು ಚನ್ನಾದದ್ದು ನಿಜ; ಅದಕ್ಕೆ ಬೆಲೆಯು ಬಹಳ; ಆದರೆ ಹೀಗೆ ಭಾರವನ್ನು ಹೊತ್ತು, ಬಡಿಗೆಯ ಬಡಿತಗಳನ್ನು ತಿನ್ನುತ್ತ, ಸ್ವಲ್ಪ

ಸುಖವನ್ನು ಹೊಂದುವದು ನನಗಂತೂ ಸೇರುವದಿಲ್ಲ ನೋಡು;" ಎಂದಂದಿತು.

ತಾತ್ಪರ್ಯ:- ದಾಸ್ಯತ್ವದಲ್ಲಿದ್ದ ಸುಖಕ್ಕಿಂತಲೂ, ಸ್ವಾತಂತ್ರ್ಯದಲ್ಲಿರುವ ದುಃಖವೇ ಮೇಲು.

---

### ೧೦೪— ತೋಳವೂ, ಕುರಿಯೂ.

ನಾಯಿಯ ಕೈಗೆ ಸಿಕ್ಕು ಮರಣೋನ್ಮುಖವಾಗಿ ಒಂದು ಹಳ್ಳದ ದಂಡೆಯ ಮೇಲೆ ಬಿದ್ದಿರುವ ಒಂದಾನೊಂದು ತೋಳವು, ನೀರಡಿಕೆಯಿಂದ ಬಳಲಿ ಬೆಂಡಾಗಿ ಒಂದೇ ಸವನೇ ಚಡಪಡಿಸುತ್ತಿತು. ಆಗ ಒಂದು ಕುರಿಯು ಆ ಸ್ಥಳಕ್ಕೆ ಬಂದಿತು. ಅದನ್ನು ಕಂಡಕೂಡಲೇ ತೋಳವು:- "ನೆರೆಯಲ್ಲಿಯ ಕೆರೆಯ ನೀರನ್ನಿಷ್ಟು ನನ್ನ ಬಾಯಲ್ಲಿ ಬಿಡುವಿಯಾ? ನನಗೀಗ ಮಾಂಸವು ಬೇಡ ನೋಡು;" ಎಂದು ಅದಕ್ಕೆ ಬೇಡಿಕೊಂಡಿತು. ಅಹಹ! ಬೇಡಪ್ಪ! ನಿನ್ನ ಸಹವಾಸವೇ ಬೇಡ! ಈಗ ನಿನಗೆ ಮಾಂಸವು ಬೇಡಾದರೂ ನೀರಿನ ಗುಟುಕೊಂದು ಬಾಯಲ್ಲಿ ಬೀಳಬೀಳುತ್ತಿರುವಾಗಲೇ ನಿನಗದು ಬೇಕೇ ಬೇಕಾಗುವದೆಂಬದರಲ್ಲಿ ಸಂದೇಹವಿಲ್ಲ. ಆದ್ದರಿಂದ ನಿನ್ನ ಬೇಡಿಕೆಯನ್ನು ನಾನಂತೂ ಪೂರ್ಣಮಾಡಲಾರೆನೆಂದು ಕುರಿಯು ಸ್ಪಷ್ಟವಾಗಿ ಉತ್ತರ ಕೊಟ್ಟಿತು.



ಒಟ್ಟಿನಲ್ಲಿ ಹೇಳುವದೆಂದರೆ:- ಪರರಿಗೆ ಉಪಕಾರ ಮಾಡುವದು ಪರಮಧರ್ಮ

ವಾಗಿದ್ದರೂ, ಉಪಕಾರಕ್ಕೆ ಅಪಕಾರವಾಗುವ ಸಂಭವವಿದ್ದಾಗ ಮಾತ್ರ ಅದು ಅಯೋಗ್ಯವೆಂದೇ ಹೇಳಬಹುದು.

---

## ೧೦೫— ಪಾರಿವಾಳವೂ, ಚಿತ್ರವೂ.

ಒಂದು ಕನ್ನಡಿಯಲ್ಲಿ ಒಂದು ಕೆರೆಯ ಚಿತ್ರವನ್ನು ಕೂಡಿಸಿತ್ತು. ಅದನ್ನು ನೋಡಿ ನೀರೆಂದು ಬಗೆದು ಒಂದು ಪಾರಿವಾಳವು ಆ ಕನ್ನಡಿಯ ಮೇಲೆ ಬಲವಾಗಿ ಹಾರಿತು. ಆಗ ಅದರ ಚಂಚುಪುಟವು ಮುರಿಯಿತು. ಪುಚ್ಚಗಳು ಉಚ್ಚಿದವು. ಹೀಗಾದ ಕೂಡಲೇ ಅದು ಕೆಳಗೆ ಬಿದ್ದಿತು. ಬಳಿಯಲ್ಲಿಯೇ ಕೆಲವು ಹುಡುಗರು ಆಡುತ್ತಿದ್ದವು. ಇದನ್ನು ನೋಡಿದೊಡನೇ ಅವರು ಆ ಪಾರಿವಾಳವನ್ನು ಆಡಲಿಕ್ಕೆಂದು ತೆಗೆದುಕೊಂಡು ಹೋದರು.

ಸಾರಾಂಶ:— ಹಿಂದು ಮುಂದು ನೋಡದೇ ಯಾವನೊಬ್ಬನು ಅಲ್ಲದ ಕೆಲಸಕ್ಕೆ ಒಮ್ಮೆಲೇ ಕೈಹಾಕಿದರೆ ಅವನು ಹೀಗೆ ಹಾನಿಗೆ ಗುರಿಯಾಗುತ್ತಾನೆ.

---

## ೧೦೬— ಪಾರಿವಾಳವೂ, ಕಾಗೆಯೂ.

ಒಂದು ಪಾರಿವಾಳವು ತನ್ನ ಮನೆಯೊಳಗಿಂದಲೇ ಒಂದು ಕಾಗೆಗೆ ಬಲು ಗರ್ವದಿಂದ:— "ಎಲೋ ನೋಡಿಲ್ಲಿ; ನನ್ನ ಮನೆಯು ಹೇಗೆ ಮರಿಗಳಿಂದ ತುಂಬಿಹೋಗಿದೆ" ಎಂದಂದಿತು. ಕಾಗೆಯು:— "ಹೀಗಿದ್ದರೆ ನಿನ್ನ ಸ್ಥಿತಿಯು ಬಲು ಶೋಚನೀಯವಾಗಿದೆ ನೋಡು; ಯಾಕಂದರೆ ದಾಸ್ಯದಲ್ಲಿದ್ದುಕೊಂಡು ಬಹಳ ಸಂತತಿಯನ್ನು ಪಡೆಯುವದು ಬಹು ದುರ್ದೈವವು ಎಂದು ಉತ್ತರಕೊಟ್ಟಿತು.

---

## ೧೦೭:— ಮುದಿಕೆಯೂ, ಆಕೆಯ ಇಬ್ಬರು ಹುಡುಗೆಯರೂ.

ಗುಜರಾಥದಲ್ಲಿ ಒಂದು ಮುದಿಕೆಯಿತ್ತು. ಆಕೆಯ ಇಬ್ಬರು ಹೆಣ್ಣುಮಕ್ಕಳಲ್ಲಿ ಒಬ್ಬಳು ಮರಣಹೊಂದಿದಳು. ಆಗ, ಹಣಕೊಟ್ಟು ಹಲವು ಹೆಂಗಸರನ್ನು ಅಳಲಿಕ್ಕೆ, ಆ ಮುದಿಕೆಯು ಕರೆತಂದಳು. ಆ ಹೆಂಗಸರು ಎದೆ ಎದೆ ಬಡಿದುಕೊಳ್ಳುತ್ತ ದೊಡ್ಡದನಿ ತೆಗೆದು ಆಕ್ರೋಶಮಾಡುತ್ತಿದ್ದರು. ಮನೆಯವರಿಗಿಂತ ಹೊರಗಿನವರೇ ಸತ್ತವರ ಸಲುವಾಗಿ ಹೀಗೆ ಅಳುತ್ತಿರುವದನ್ನು ಕಂಡು ಆ ಎರಡನೆ ಹುಡುಗೆಗೆ ಆಶ್ಚರ್ಯವಾಗಿ ಅವಳು ತನ್ನ ತಾಯಿಗೆ ಈ ವಿಷಯವನ್ನು ಕೇಳಿದಳು. ತಾಯಿಯು:— ಮಗಳೇ ನಮ್ಮದು ನಿಜವಾದ ದುಃಖವು; ಆದರೆ ಇವರಿಗೆ ಅಳಲೆಂದೇ ಹಣಕೊಟ್ಟಿರುವದರಿಂದ ಅವರು ತಮ್ಮ ಕೆಲಸವನ್ನು ಕೂಲಿಯವರಂತೆ ಮಾಡಿ ತೋರಿಸಬೇಕಲ್ಲವೇ" ಎಂದು ಮಾತನಾಡಿದಳು..

ಸರಾಂಶ:— ಬರಿ ಕೂಗಿಕೊಳ್ಳುತ್ತ ಎದೆಬಡಿದುಕೊಳ್ಳುವದು ದುಃಖಪ್ರದರ್ಶನವಲ್ಲ. ಆದರೆ ಆ ದುಃಖವು ಕಂಬನಿಗಳ ರೂಪದಿಂದ ಹೊರಹೊರಡಲಿಕ್ಕೇ ಬೇಕು. ಮತ್ತು ಅದು ಅವನ ದೇಹ, ಮನಸ್ಸಿನಮೇಲೆ ಪರಿಣಾಮವಾಗಲಿಕ್ಕೇ ಬೇಕು.

---

## ೧೦೮:—ಹಂಸವೂ, ಬಕಪಕ್ಷಿಯು.

ಸಾಯಲು ಸಮೀಪಿಸಿದ ಹಂಸವೊಂದು ಹಾಡಹತ್ತಿತ್ತು. ಅದನ್ನು ಕೇಳಿ ಬಂದಾನೊಂದು ಬಕಪಕ್ಷಿಯು ಅಲ್ಲಿಗೆ ಬಂದಿತು; ಆಗ ಅದು:— " ಏನಯ್ಯಾ, ನಿನ್ನ ಈ ಗಾಯನಕೇಳಿ ನನಗೆ ಬಲು ಆಶ್ಚರ್ಯವಾಗುತ್ತದೆ; ಮರಣವು ಬಂದಾಗ್ಯೆ ಹಾಡುತ್ತ ಕೂಡುವ ಪ್ರಾಣಿಯೆಂದರೆ ನೀನೊಬ್ಬನೇ ಸರಿ;" ಎಂದು ಹಂಸವನ್ನು ಮಾತಾಡಿಸಿತು. ಹಂಸವು ಬಕಕ್ಕೆ:— " ಗೆಳೆಯಾ! ಏನ್ಹೇಳಲಿ! ಸಾವೆಂದರೆ ನನಗೆ ಬಲು ಸಂತೋಷ! ಧನುಷ್ಯಬಾಣ ಮುಂತಾದ ಯಾವ ಆಯುಧಗಳ ಮತ್ತು ಹಸಿವೆಯ ಬಾಧೆಯೂ ತಟ್ಟದಂಥ ಪ್ರದೇಶಕ್ಕೆ ಸತ್ತನಂತರ ನಾನು ಹೋಗುತ್ತೇನೆ; ಇಂಥ ಆನಂದ ಸಮಯಕ್ಕೆ ಹಾಡುವದನ್ನು ಬಿಟ್ಟು ಅಳುತ್ತ ಕೂಡಲೋ? ಇದರಲ್ಲಿ ನಿನಗೆ ಆಶ್ಚರ್ಯವೆನಿಸಿದ್ದೇನು. " ಎಂದು ಉತ್ತರ ಕೊಟ್ಟಿತು.



ತಾತ್ಪರ್ಯ:— ತಪ್ಪಿಸಲು ಸಾಧ್ಯವಿಲ್ಲದರ ಬಗ್ಯೆ ದುಃಖಬಡುತ್ತ ಕೂಡುವದು ಮೂರ್ಖತನವೇ ಸರಿ.

---

## ೧೧೯:—ಗುಂಗಾಡಿಯೂ, ಸಿಂಹವೂ.

ಒಂದು ಗುಂಗಾಡಿಯು ಬಲು ಸೊಕ್ಕಿಗೆ ಬಂದಿತ್ತು. ಅದು ಒಂದಾನೊಂದು ಸಿಂಹಕ್ಕೆ ಎರಗಿ ಅದರ ಕಣ್ಣು, ಕಿವಿ, ಮೂಗುಗಳನ್ನೆಲ್ಲ ಕಚ್ಚಲಾರಂಭಿಸಿತು. ಇದರಿಂದ ಸಿಂಹವು ವೇದನೇಬಡುತ್ತ ನೆಲದ ಮೇಲೆ ಉರಳಾಡಹತ್ತಿತು. ಆಗ ಆ ಗುಂಗಾಡಿಯನ್ನು ಹಿಡಿದು ಹೊಡೆಯಲೆಂದು ಅದು ಬಹಳ ಪ್ರಯತ್ನಪಟ್ಟಿತು. ಆದರೆ ಎಲ್ಲವೂ ವ್ಯರ್ಥ. ಮತ್ತೆ ಮತ್ತೆ ಆ ಗುಂಗಾಡಿಯು ಸಿಂಹಕ್ಕೆ ಕಚ್ಚಹತ್ತಿತು. ಕಡೆಗೆ ನಿಶ್ಚೇಷ್ಟಿತವಾಗಿ ಸಿಂಹವು ನೆಲಕ್ಕೇ ಬಿದ್ದಿತು. ಇದನ್ನು ಕಂಡು, ಗುಂಗಾಡಿಯು, ತಾನು ಬಲವಾದ ಸಿಂಹವನ್ನೂ ಕೂಡ ಬಗ್ಗಿಸಿತೆಂಬ ಉಬ್ಬಿನಿಂದ ಅಲ್ಲಿಯೇ ಅತ್ತಿತ್ತ ಗುಂಯ್ಗುಡುತ್ತ ಹಾರಾಡುತ್ತಿತ್ತು. ಇಷ್ಟರಲ್ಲಿಯೇ ಅದು ಒಂದು ಜೇಡದ ಬಲೆಗೆ ಬಿದ್ದಿತು. ಹೊರಹೊರಡಬೇಕೆಂದು ಚಟಪಟ ಒದ್ದಾಡಿದರೂ, ಬಿಡುಗಡೆಯಾಗದೆ, ಮತ್ತೆ ಮತ್ತೆ ಸುತ್ತಿಕೊಂಡಂತಾಗಿ ಗುಂಗಾಡಿಯು ಕಡೆಗೆ ಜೇಡದಬಾಯಿಗೆ ಬಿದ್ದಿತು.

ಸಾರಾಂಶ:— ಹಿಗ್ಗು ತಗ್ಗುಗಳು ಎಲ್ಲರಿಗೂ ಇದ್ದವೇ. ಒಂದು ಸಣ್ಣಪ್ರಾಣಿಯಿಂದಲೂ ಎಷ್ಟೋಸಲ ಪೀಡೆಯು ತಟ್ಟುವ ಸಂಭವವಿರುತ್ತದೆ.

---

## ೧೧೦— ಸಿಂಹವೂ, ಆಡೂ.

ಒಂದು ಸಿಂಹವು ಎತ್ತರವಾದ ಬಂಡೆಯ ತುದಿಯಲ್ಲಿ ಮೇಯುತ್ತಿರುವ ಒಂದು ಆಡನ್ನು ನೋಡಿತು. ಆಗ ಅದು:— “ ಎಲೋ, ನೀನು ಇಷ್ಟು ಮೇಲೆನಿಂತು ಮೇಯುತ್ತ ನಿನ್ನ ಜೀವಕ್ಕೇಕೆ ಎರವಾಗುವಿ? ಕೆಳಗಿಲ್ಲಿ ನೋಡು! ಎಳೆಹಸರು ಹುಲ್ಲು ಎಷ್ಟು ಚನ್ನಾಗಿದೆ; ಇಲ್ಲಿಗೆ ಬಂದರೆ ನಿನ್ನ ಉಪಜೀವನವು ಸಹಜವಾಗಿ ಸಾಗಬಹುದು.” ಎಂದು ಆಡಿಗೆ ಮಾತನಾಡಿತು. ಇದನ್ನು ಕೇಳಿ ಆ ಆಡು ಸಿಂಹಕ್ಕೆ—“ ಸಿಂಗಣ್ಣಾ! ಅಹಹಾ! ಏನು ಪ್ರೇಮ ನನ್ನ ವಿಷಯವಾಗಿ ನಿನ್ನಲ್ಲಿ! ನನ್ನ ಉಪಜೀವನ ಸಾಗುವದೆಂದು ನನ್ನನ್ನು ಕೆಳಗೆ ಕರೆದು ನನ್ನಿಂದ ನಿನ್ನ ಉಪಜೀವನ್ನು ಸಾಗಿಸಬೇಕೆಂದಿರುವಿಯಾ?” ಎಂದು ನುಡಿಯಿತು.

ತಾತ್ಪರ್ಯ:— ವೈರಿಯು ಎಷ್ಟು ಒಳಿತು ನುಡಿದರೂ ಜಾಣರು ಅದನ್ನು ನಂಬಬಾರದು.

---

## ೧೧೧— ಸಿಂಹದ ಚರ್ಮವನ್ನು ಹೊದ್ದುಕೊಂಡ ಕತ್ತೆಯು.



ಒಂದು ಕತ್ತೆಗೆ ಸಿಂಹದ ಚರ್ಮವು ಸಿಕ್ಕಿತು. ಅದನ್ನು ಹೊದ್ದುಕೊಂಡು ಅದು ತಿರುಗಹತ್ತಿತು. ಇದನ್ನು ನೋಡಿ ನೆರೆಯ ಪ್ರಾಣಿಗಳೆಲ್ಲ ಸಿಂಹವು ಬಂತೆಂದು ಭಯಪಟ್ಟು ಓಡತೊಡಗಿದವು. ಆ ಕತ್ತೆಯ ಯಜಮಾನನು ಹತ್ತರದಲ್ಲಿಯೇ ಇದ್ದನು. ಸಿಂಹದ ಚರ್ಮದೊಳಗಿಂದ ಹೊರಬಿದ್ದ ಕತ್ತೆಯ ಉದ್ದನ್ನ ಕಿವಿಗಳನ್ನು ನೋಡಿ ತನ್ನದೇ ಕತ್ತೆಯಿದೆಂದರಿತು, ಒಂದು ಕೋಲಿನಿಂದ ಅದರ ಬೆನ್ನ ಮೇಲೆ ಬಡಿ ಬಡಿದು ಅದನ್ನು ಹಣ್ಣು ಹಣ್ಣು ಮಾಡಿಬಿಟ್ಟನು. ಇದರಿಂದ ತಾನು ಕತ್ತೆಯೇ ಇರುವೆನೆಂಬ ಅರಿವು ಅದಕ್ಕೆ ಬಂದಿತು.

ಸಾರಾಂಶ:— ಹುಚ್ಚನು ಜಾಣನ ಸೋಗನ್ನೆಷ್ಟು ಹಾಕಿದರೂ, ಕಡೆಗೆ ಅವನ ಹುಚ್ಚು ಹೊರಬಿದ್ದು ಆ ಬಗ್ಗೆ ಅವನಿಗೆ ಚನ್ನಾಗಿ ಪ್ರಾಯಶ್ಚಿತ್ತವು ಸಿಗುತ್ತದೆ.

——————

## ೧೧೨— ಹಾಳಿಯುಹದ್ದೂ, ಅದರ ಅತಿಥಿಗಳೂ.

ಒಂದು ಹಾಳಿಯುಹದ್ದು ತನ್ನ ಹುಟ್ಟಿದ ದಿನವೆಂದು ಎಲ್ಲ ಪಕ್ಷಿಗಳಿಗೆ ಊಟಕ್ಕೆ ಔತಣ ಕೊಟ್ಟಿತು. ಹೇಳಿದ ಹೊತ್ತಿಗೆ ಎಲ್ಲ ಪಕ್ಷಿಗಳೂ ನೆರೆದವು. ಅವೆಲ್ಲವನ್ನು ಮನೆಯಲ್ಲಿ ಕೂಡಿಸಿ ಬೀಗಹಾಕಿ, ಹದ್ದು, ಆ ತನ್ನ ಅತಿಥಿತಿಗಳಿಗೆ ಆದರಿಸುವ ಬದಲು ಅವನ್ನು ಒಂದೊಂದಾಗಿ ಮುರಿದು ಬಾಯಿಯಲ್ಲಿ ಹಾಕಿಕೊಂಡು ಬಿಟ್ಟಿತು.

ತಾತ್ಪರ್ಯ:— ತನ್ನ ಮಾನವನ್ನರಿಯದ, ಸದಾ ಬುಭುಕ್ಷಿತನಾಗಿರುವ ಮನುಷ್ಯನನ್ನು ಒಮ್ಮೆಲೇ ನಂಬುವದು ಮೂರ್ಖತನವು.

---

## ೧೧೩— ಬಕಪಕ್ಷಿಗಳೂ, ರಾಜಹಂಸಗಳೂ.

ಕೆಲವು ಬಕಪಕ್ಷಿಗಳೂ ರಾಜಹಂಸಗಳೂ ಒಂದು ಹೊಲದಲ್ಲಿ ತಿರುಗುತ್ತಿದ್ದವು. ಅವನ್ನು ನೋಡಿ ಕೆಲವರು ಬೇಟೆಯವರು, ಜಪ್ಪಿಸಿ ಮೆಲ್ಲ ಮೆಲ್ಲನೇ ಸಮೀಪಕ್ಕೆ ಬಂದು ಒಮ್ಮೆಲೆ ಅವೆಲ್ಲವನ್ನು ಹಿಡಿಯಬೇಕೆಂದು ಮಾಡಿದರು. ಆದರೆ ಬಕಪಕ್ಷಿಗಳು ಚಪಲವಿದ್ದುದರಿಂದ ಕೈಗೆಸಿಗದೇ ಹಾರಿ ಹೋದವು. ಹಂಸಗಳು ಸ್ವಲ್ಪ ಸ್ಥೂಲವಾಗಿದ್ದುದರಿಂದ ಹಾರಲಾಗದೆ, ಅವು ಆ ಬೇಟೆಗಾರರ ಬಲೆಗೆ ಬಿದ್ದವು.

ಸಾರಾಂಶ:— ಜಡತ್ವ ಅಥವಾ ಆಲಸ್ಯದಿಂದ ಅಪಾಯವಾಗುವದು ಹೆಚ್ಚು. ಆದ್ದರಿಂದ ಆ ಗುಣಗಳಿಗೆ ನಮ್ಮ ದೇಹದಲ್ಲಿ ಎಡೆಯನ್ನೆಂದೂ ಕೊಡಬಾರದು.

---

## ೧೧೪— ಇಲಿಯೂ, ಕಪ್ಪೆಯೂ

ಒಂದು ಇಲಿ, ಕಪ್ಪೆ ಇವೆರಡಕ್ಕೂ ಬಲು ಸ್ನೇಹವಿತ್ತು. ಕಪ್ಪೆಯು ಇಲಿಯ ಬಿಲಕ್ಕೆ ಮೇಲಿಂದಮೇಲೆ ಹೋಗಿ ಇಲಿಯಿಂದ ಆತಿಥ್ಯವನ್ನು ತೆಗೆದುಕೊಂಡು ಬರುತ್ತಿತ್ತು.



ಇಲಿಗೂ ತನ್ನ ಮನೆಗೆ ಬರಲು, ಒಮ್ಮೆ ಕಪ್ಪೆಯು ಬಹಳ ಕೇಳಿಕೊಂಡಿತು. ಆದರೆ ಹಾದಿಯಲ್ಲಿ ನೀರಿದ್ದುದರಿಂದ ತನಗೆ ಈಸು ಬರುವದಿಲ್ಲೆಂಬ ನೆವದಿಂದ ಇಲಿಯು ಕಪ್ಪೆಯ ಮನೆಗೆ ಹೋಗುವದನ್ನು ತಪ್ಪಿಸಿತು. ಮುಂದೆ ಒಮ್ಮೆ ಕಪ್ಪೆಯು ಬಹಳ ಒತ್ತಾಯ ಮಾಡಿದ್ದರಿಂದ ಇಲಿಯು ಅದರ ಮನೆಗೆ ಹೋಗಲು ಹೊರಟಿತು. ಇಲಿಯು ನೀರಲ್ಲಿ ಮುಳುಗಬಾರದೆಂದು, ಕಪ್ಪೆಯು ತನ್ನ ಹಿಂದಿನ ಕಾಲಿಗೆ ಅದರ ಕಾಲನ್ನು ಕಟ್ಟಿಕೊಂಡಿತು. ಹೀಗೆ ಅವೆರಡೂ ನೀರಮೇಲೆ ಸಾಗಿದವು. ಹೋಗಹೋಗುತ್ತ, ಇಲಿಯು ಬಿಲದಲ್ಲಿ ಕೂಡಿಟ್ಟದ್ದನ್ನೆಲ್ಲ ತಾನು ಅಪಹರಿಸಬೇಕೆಂದು ಬಗೆದು ಕಪ್ಪೆಯು ಒಮ್ಮೆಲೇ ನೀರಲ್ಲಿ ಮುಳುಗಿಬಿಟ್ಟಿತು. ಆಗ ಇಲಿಯು ಪ್ರಾಣಭಯಕ್ಕೆ ಒಂದೇಸವನೇ ಒದ್ದಾಡಹತ್ತಿತು. ಈ ಒದ್ದಾಟದ ಸಪ್ಪಳವನ್ನು ಆಕಾಶದಲ್ಲಿ ತಿರುಗುತ್ತಿರುವಂಥ ಒಂದು ಹದ್ದು ನೋಡಿದ್ದೇ ಒಮ್ಮೆಲೇ ಎರಗಿ, ಇಲಿಯನ್ನು

ಕಟ್ಟಿಕೊಂಡು ಆಕಾಶಕ್ಕೆ ಹಾರಿತು. ಇಲಿಯ ಕಾಲಿಗೆ ಕಪ್ಪೆಯ ಕಾಲೂ ಕಟ್ಟಲ್ಪಟ್ಟದ್ದರಿಂದ, ಅದೂ ಹದ್ದಿನ ಬಾಯಿಗೆ ಬಿದ್ದಿತು.

ಸಾರಾಂಶ:— ವಿಶ್ವಾಸಘಾತಕಿಯಾದವನಿಗೆ ಯೋಗ್ಯ ಶಿಕ್ಷೆಯು ಶಿಗುವದೆಂಬುದರಲ್ಲಿ ಸಂಶಯವಿಲ್ಲ.

———————

## ೧೧೫— ಧೀರ ನಾಯಿಯೂ

ಒಂದು ಊರೊಳಗಿಂದ ಒಂದು ನಾಯಿಯು ಹಾಯ್ದು ಹೋಗುತ್ತಿತ್ತು. ಆಗ ಅದನ್ನು ನೋಡಿ, ಆ ಊರಲ್ಲಿಯ ಹತ್ತೆಂಟು ನಾಯಿಗಳು ಅದರ ಬೆನ್ನು ಹತ್ತಿದವು; ಒಂದೇ ಸವನೇ ಬೊಗಳಹತ್ತಿದವು. ಅವನ್ನು ತಪ್ಪಿಸಲು ಓಡೋಡಿ ಆ ನಾಯಿಗೆ ಸಾಕು ಬೇಕಾಯಿತು. ಕಡೆಗೆ ಅದು ಪಾರಾಗುವ ಬೇರೆ ಉಪಾಯಗಾಣದೆ ತಾನೇ ಧೀರನಾಗಬೇಕೆಂದು ಬಗೆದು ಅವುಗಳ ಮೇಲೆ ತಿರುಗಿ ನಿಂತಿತು. ಆಗ ಎಲ್ಲ ನಾಯಿಗಳು ಬೆದರಿ ಪಲಾಯನ ಸೂತ್ರ ಹೇಳಿದವು.



ತಾತ್ಪರ್ಯ:— ಒಮ್ಮೊಮ್ಮೆ ಅಂಜುಬುರುಕತನವು, ಸಂಕಟಕ್ಕೆ ಕಾರಣವಾಗುತ್ತದೆ.

## ೧೧೩— ನಾಯಿಯೂ ಅದರ ಒಡೆಯನೂ.

ಒಬ್ಬ ಮನುಷ್ಯನ ನಾಯಿಯು ಎಲ್ಲಿಯೋ ತಪ್ಪಿಸಿಕೊಂಡು ಹೋಯಿತು. ಆಗ ಆ ಮನುಷ್ಯನು ತನ್ನ ನಾಯಿಯನ್ನು ತಂದವರಿಗೆ ಮೆಚ್ಚು ಕೊಡುವೆನೆಂದು ಪತ್ರಗ



ಳಲ್ಲಿ ಪ್ರಕಟಿಸಿದನು. ಆ ಪ್ರಕಾರಕ್ಕೆ ಆ ಮೆಚ್ಚು ಒಬ್ಬನಿಗೆ ದೊರಕಿತು. ಇವನ ನಾಯಿಯೂ ದೊರಕಿತು. ಆ ಮೇಲೆ ಆ ಮನುಷ್ಯನು ತನ್ನ ನಾಯಿಗೆ:— " ಎಲೆ! ನೀನು ಕೃತಘ್ನ ನಿರುವಿ! ನಾನು ನಿನ್ನನ್ನು ಬಲು ಚನ್ನಾಗಿ ಸಾಕಿದ್ದೆನು; ನಾನು; ನಿನ್ನನ್ನು ಬಡಿಯಲಿಲ್ಲ ಬಯ್ಯಲಿಲ್ಲ; ನಿನ್ನ ಮೇಲೆಕೋಪಿಸಲಿಲ್ಲ. ಹೀಗಿದ್ದು ನನ್ನನ್ನು ಬಿಟ್ಟು ಓಡಿ ಹೋಗುವದು ದುಷ್ಟತನವಲ್ಲವೇ? ಎಂದು ಕೇಳಿದನು. ನಾಯಿಯು ಅದಕ್ಕೆ ಪ್ರತಿಯಾಗಿ:— " ನೀನು ಏನನ್ನೂ ನನಗೆ ಮಾಡಲಿಲ್ಲ ನಿಜ; ಆದರೆ ನಿನ್ನ ಸೇವಕನು ನನಗೆ ಅನೇಕ ಸಾರೆ ಶಿಕ್ಷಿಸಿರುವನು; ನಿನ್ನ ಆಜ್ಞೆಯಿಂದ ಅವನು ಹಾಗೆ ಮಾಡಿದನೆಂದ ಮೇಲೆ ಅದನ್ನು ನೀನೇ ಮಾಡಿದಂತಾಯಿತಲ್ಲವೇ? " ಎಂದು ತನ್ನ ಒಡೆಯನಿಗೆ ನುಡಿಯಿತು.

ಸಾರಾಂಶ:— ಒಬ್ಬನು ಮತ್ತೊಬ್ಬನಿಂದ ಒಂದು ಕೆಲಸ ಮಾಡಿಸಿದರೂ, ಅದನ್ನು ಸ್ವತಃ ಅವನೇ ಮಾಡಿದನೆಂದು ತಿಳಿಯಬಹುದು.

## ೧೧೭— ಭರಮಪ್ಪನೂ ಮಂಗವೂ.

ಒಮ್ಮೆ, ಭರಮಪ್ಪನು, ಪಶುಪಕ್ಷಿಗಳ ಮರಿಗಳಲ್ಲಿ ಹೆಚ್ಚು ಚನ್ನಾಗಿರುವವಾವು ಎಂಬದನ್ನು ನೋಡಲು ವಿಚಾರ ಮಾಡಿದನು. ಆ ಕೂಡಲೇ ಎಲ್ಲ ಪಶುಪಕ್ಷಿಗಳಿಗೆ ತಮ್ಮ ತಮ್ಮ ಮರಿಗಳಿಂದ ಸಹಿತ ಓಲಗದಲ್ಲಿ ಕೂಡಲಿಕ್ಕೆ ಆಜ್ಞೆಯು ಹೋಯಿತು; ಈ ಆಜ್ಞೆಯನ್ನು ಎಲ್ಲ ಪಶುಪಕ್ಷಿಗಳೂ ಮನ್ನಿಸಿ, ತಮ್ಮ ತಮ್ಮ ಮರಿಗಳಿಂದ ಸಹಿತ ವಾಗಿ, ಭರಮಪ್ಪನ ಸಭೆಯಲ್ಲಿ ಕೂಡಿದವು. ಆಗ ಒಂದು ಮಂಗವು ತನ್ನ ಮರಿ ಯನ್ನು ಕರೆದುಕೊಂಡು “ ದೇವನೇ, ನನ್ನ ಮರಿನೋಡು; ಎಲ್ಲಕ್ಕೂ ಹೆಚ್ಚು ಸುಂದರ ವಾಗಿದೆ; ” ಇಂಥ ಮರಿಯು ಎಲ್ಲಿಯೂ ಸಿಗಲಿಕ್ಕಿಲ್ಲ; ಎಂದೆನ್ನುತ್ತ ಮುಂದೆ ಬಂದು ಕುಳಿತಿತು.

ತಾತ್ಪರ್ಯ:— ಕಾಗೆಗೆ ತನ್ನ ಮಗ ಕೋಗಿಲೆ. ತಮ್ಮ ತಮ್ಮ ಕೂಸುಗಳೇ ತಮಗೆ ಸುಂದರ.

---

## ೧೧೮— ಗರುಡವೂ ಗೂಗೆಯೂ.

ಎಲ್ಲ ಪಕ್ಷಿಗಳಲ್ಲಿ ಹೆಚ್ಚು ಸುಂದರ ಮರಿಗಳೇತರವೆಂಬದನ್ನು ನೋಡಲು, ಗರು ಡನು ಒಮ್ಮೆ ಎಲ್ಲ ಪಕ್ಷಿಗಳಿಗೂ ತಮ್ಮ ತಮ್ಮ ಮರಿಗಳನ್ನು ಕರೆದುಕೊಂಡು ತನ್ನ ಸಭೆಗೆ ಸೇರಬೇಕೆಂದು ಆಜ್ಞೆಮಾಡಿದನು. ಅದರಂತೆ ಪ್ರತಿಯೊಂದು ತಮ್ಮ ಮರಿಯೊ ಡನೆ ಸಭೆಗೆ ಸೇರಿದವು. ಮತ್ತು ಪ್ರತಿಯೊಂದು ಪಕ್ಷಿಯೂ ತನ್ನ ತನ್ನ ಮರಿಯ ಸೌಂದ ರ್ಯದ ಮೇಲ್ಮೆಯನ್ನು ಹೊಗಳಹತ್ತಿದವು. ಕಡೆಗೆ ಒಂದು ಗೂಗೆಯು ಮುಂದೆ ಬಂದು:— “ ಕೇವಲ ಸೌಂದರ್ಯದ ದೃಷ್ಟಿಯಿಂದೇನೇ ಮರಿಗಳನ್ನು ಆರಿಸುವದಾದರೆ ನನ್ನ ಮರಿಗಳಷ್ಟು ಅಂದವಾದ ಮರಿಗಳೇ ಭೂಲೋಕದಲ್ಲಿ ಇಲ್ಲ ” ಎಂದು ನುಡಿಯಿತು. ಈ ಮಾತು ಕೇಳಿ ಪಕ್ಷಿಗಳೆಲ್ಲ ನಕ್ಕೇ ನಕ್ಕವು. ಮತ್ತು ಆ ಗೂಗೆಯನ್ನು ಅಲ್ಲಿಂದ ಹೊಡೆದೋಡಿಸಿದವು.

---

## ೧೧೯— ಏಡಿಯೂ ಅದರ ಮರಿಗಳೂ.

ಒಂದುದಿನ ಒಂದು ಏಡಿಯು ತನ್ನ ಮಗುವಿಗೆ:— “ ಕೂಸೂ, ಹೀಗೇಕೆ ಸೊಟ್ಟಾ ಗಿ ನೀನು ನಡೆಯುತ್ತೀ? ಬೇರೆ ಪ್ರಾಣಿಗಳು ನಡೆದಂತೆ ನೀನೇಕೆ ಸರಲವಾಗಿ ನಡೆಯುವ ದಿಲ್ಲ; ” ಎಂದು ಕೇಳಿತು. ಇದಕ್ಕೆ ಆ ಮರಿಯು:— “ ಅಪ್ಪಾ, ಹಿರಿಯಕ್ಕನ ಚಾಳಿ ಮನೆಯ ಮಂದಿಗೆಲ್ಲ; ತಂದೆಯಂತೆ ಮಗ; ಅಂದಮೇಲೆ ನೀನು ನಡೆದಂತೆ ನಾನು ನಡಿಯಬೇಡವೇ? ಸರಲವಾಗಿ ನಡಿಯುವದು ಹೇಗೆಂಬದನ್ನು ನೀನು ತೋರಿಸಿದರೆ ಮಾತ್ರ ನೋಡಿಕೊಂಡು ಅದರಂತೆ ನಡೆಯಲು ಯತ್ನಿಸುವೆನು. ” ಎಂದು ಉತ್ತರ ಕೊಟ್ಟಿತು.

ಸಾರಾಂಶ:— ತನಗೆ ಬಾರದು ಅನ್ಯರಿಗೇಕೆ ಬರುವದಿಲ್ಲವೆಂದು ಅವರಿಗೆ ಕುಂದಿಡುವದು ಮೂರ್ಖತನವೇ ಸರಿ.

---

## ೧೨೦— ಕತ್ತೆಯೂ ಸಿಂಹವೂ.

ಕತ್ತೆಯನ್ನು ಸಂಗಡ ಕರೆದುಕೊಂಡು ಬೇಟೆಗೆ ಹೋಗಬೇಕೆಂದು ಒಮ್ಮೆ ಸಿಂಹಕ್ಕೆ ವಿಚಾರಬಂತು. ಆಗ ಅದು ಕತ್ತೆಗೆ:— “ ಎಲೋ! ನೀನು ಅಡವಿಗೆ ಹೋಗಿ ಒಂದೇ ಸವನೇ ಕೂಗುತ್ತಿರು; ನಿನ್ನ ಕೂಗು ಕೇಳಿ ಪಲಾಯನವಾಗುವ ಮೃಗಗಳನ್ನು ನಾನು ಬೇಟೆಯಾಡುವೆನು, ” ಎಂದು ಹೇಳಿತು. ಇದಕ್ಕೆ ಸಮ್ಮತಿಸಿ ಕತ್ತೆಯು ಅಡವಿಗೆ ಹೋಗಿ ಕೆಟ್ಟ ಕೆಟ್ಟ ದನಿಯಿಂದ ಕೂಗಲಾರಂಭಿಸಿತು. ಇದನ್ನು ಕೇಳಿ ಅನೇಕ ಮೃಗಗಳು ಅತ್ತಿತ್ತ ಓಡಾಡಹತ್ತಿದವು. ಆಗ ಸಿಂಹವು ಅವೆಲ್ಲವುಗಳನ್ನು ಬಾಯಿ ಚಪ್ಪರಿಸಿತು. ಕಡೆಗೆ ಬೇಸತ್ತು ಬೇಟೆಯನ್ನು ನಿಲ್ಲಿಸಿದವು. ಆದರೆ ಕತ್ತೆಯು ತಾನು ಹೇಗೆ ತನ್ನ ಕಾರ್ಯವನ್ನು ಸಾಧಿಸಿದೆನೆಂದು ಸಿಂಹನನ್ನು ಕೇಳಿತು. ಆಗ ಸಿಂಹವು:— “ ನೀನು ಬಲು ಚನ್ನಾಗಿ ನಿನ್ನ ಕಾರ್ಯವನ್ನು ನೆರವೇರಿಸಿದಿ; ನೀನು ಕತ್ತೆಯಿರುವಿಯೆಂದು ಗೊತ್ತಿರದಿದ್ದರೆ ನನಗೂ ಬಹು ಭಯವುಂಟಾಗುತ್ತಿತ್ತು. ” ಎಂದು ನುಡಿಯಿತು.



ತಾತ್ಪರ್ಯ:-- ಸ್ವಲ್ಪೇ ಕಾರ್ಯಕ್ಕಾಗಿ ಅಲ್ಲದ ಜಂಬ ಬಡಿಯುವದು ಮೂರ್ಖತನವು.

---

## ೧೨೧— ಸೂರ್ಯನೂ ವಾಯುವೂ.

ಒಮ್ಮೆ ಸೂರ್ಯ ಮತ್ತು ವಾಯು ಇವರ ನಡುವೆ ತಮ್ಮ ತಮ್ಮ ಪರಾಕ್ರಮದ ವಿಷಯದಲ್ಲಿ ಮೇಲಾಟ ನಡೆಯಿತು. ಆಗ ಸಮೀಪದಲ್ಲಿಯೇ ಒಬ್ಬ ಹಾದಿಕಾರನು ಕುಳಿತಿದ್ದನು. ಅವನಿಗೆ ಅವನ ಮೈ ಮೇಲಿನ ಕಂಬಳಿಯನ್ನು ತೆಗೆದಿಡಲಿಕ್ಕೆ ಹಚ್ಚಲು ಯಾರು ಸಮರ್ಥರಾಗುವರೋ ಅವರೇ ನಿಜವಾದ ಪರಾಕ್ರಮಿಗಳೆಂದು ಅವರವರಲ್ಲಿ ಮಾತಾಯಿತು. ಮೊದಲಿಗೆ ವಾಯುವು ಬಲವಾಗಿ ಬೀಸಹತ್ತಿ, ಅವನ ಮೈ ಮೇಲಿನ ಕಂಬಳಿಯನ್ನು ಹಾರಿಸಿ ಒಗೆಯಲು ಪ್ರಯತ್ನ ಮಾಡಿದನು. ಆದರೆ ಚಳಿಯಿಂದ ಗಡಗಡನೆ ನಡುಗಹತ್ತಿದಂತೆ ಆ ಹಾದಿಕಾರನು ಮತ್ತಿಷ್ಟು ಬಿಗಿಯಾಗಿ ಕಂಬಳಿಯನ್ನು ಹೊದ್ದುಕೊಳ್ಳಹತ್ತಿದನು. ಹೀಗಾಗಲು ಕಡೆಗೆ ವಾಯುವು ಬೇಸತ್ತು ಒಂದೆಡೆಗೆ ಸುಮ್ಮನೇ ಕುಳಿತು ಬಿಟ್ಟನು. ಆ ಮೇಲೆ ಸೂರ್ಯನು ತನ್ನ ಸರತಿಗೆ ಮೊದಲು ಮಾಡಿದನು. ಆರಂಭಕ್ಕೆ ಅವನು ಆಕಾಶದಲ್ಲಿದ್ದ ಮೋಡಗಳನ್ನೆಲ್ಲ ಚದರಿಸಿ ಆ ನಂತರ ತನ್ನ ಕಿರಣಗಳ ಪ್ರಖರತೆಯನ್ನು ಎಲ್ಲೆಡೆಯಲ್ಲಿ ಚಲ್ಲಹತ್ತಿದನು. ಈ ಕಿರಣಗಳ ಪ್ರಖರತೆಯನ್ನು ಆ ಹಾದಿಕಾರನು ಸಹಿಸದೆ ತನ್ನ ಮೈಮೇಲಿನ ಕಂಬಳಿಯನ್ನು ತೆಗೆದೊಗೆದು, ಸಮೀಪದಲ್ಲಿಯ ಒಂದು ಗಿಡದ ನೆರಳಿನಲ್ಲಿ ಹೋಗಿ ಕುಳಿತುಕೊಂಡನು.

ಸಾರಾಂಶ:-- ಶಕ್ತಿಗಿಂತ ಯುಕ್ತಿಯೇ ಮೇಲು. ಕೇವಲ ಬಲದಿಂದ ಕಾರ್ಯಗಳು ಸಿದ್ಧಿಸುವವೆಂದು ಹೇಳಲಾಗದು.

---

## ೧೨೨-- ಹುಳವೂ ನರಿಯೂ.

ಒಂದು ಹುಳವು, ತಿಪ್ಪೆಯೊಳಗಿಂದ ತನ್ನ ತಲೆಯನ್ನು ಮೇಲಕ್ಕೆತ್ತಿ ಉಚ್ಚಸ್ವರದಿಂದ “ ಬನ್ನಿರಯ್ಯಾ! ಬನ್ನಿರಿ! ಯಾರಿಗಾದರೂ ಶರೀರದಲ್ಲಿ ಜಾಡ್ಯವಾಗಿದ್ದರೆ ಬನ್ನಿರಿ; ನಾನು ನಿಮ್ಮ ಬೇನೆಯು ಎಂತಹದಿದ್ದರೂ ರಾಮಬಾಣದಂತಹ ಔಷಧವನ್ನು ಕೊಟ್ಟು ವಾಸಿಮಾಡುತ್ತೇನೆ; ” ಎಂದು ಕೂಗಿಕೊಳ್ಳಹತ್ತಿತ್ತು. ಇದನ್ನು ಕೇಳಿ ಒಂದು ನರಿಯು ಅಲ್ಲಿಗೆ ಬಂದು:— “ ಎಲೋ! ನಿನ್ನ ಮೈಯಲ್ಲಿಯ ಹೊಲಸನ್ನು ಕಳೆದುಕೊಳ್ಳಲಿಕ್ಕೆ ನಿನಗೆ ಬರುವದಿಲ್ಲ; ಅಂದ ಮೇಲೆ ಬೇರೆಯವರ ಬೇನೆಯನ್ನು ಗುಣಮಾಡುವದು ಕಂಡಿದ್ದೇ ಇದೆ; ” ಎಂದು ಗಹಗಹಿಸಿ ನಕ್ಕುಬಿಟ್ಟಿತು.

ಒಟ್ಟಾರೆ:— ತನ್ನಲ್ಲಿಯ ದೋಷಗಳನ್ನು ದೂರಮಾಡಿಕೊಳ್ಳಲಿಕ್ಕಾಗದವನು, ಅನ್ಯರ ದೋಷಗಳನ್ನು ದೂರ ಮಾಡುವೆನೆಂದು ಜಂಭ ಕೊಚ್ಚುವದು ಹುಚ್ಚುತನವು.

---

## ೧೨೪— ಸಿಂಹವೂ ಆನೆಯೂ.



ಒಮ್ಮೆ ಒಂದು ಸಿಂಹವು ಮನಸ್ಸಿನಲ್ಲಿ:— “ ಧಿಕ್ಕಾರವಿರಲಿ ನನ್ನ ಜನ್ಮಕ್ಕೆ! ಸರ್ವ ಪ್ರಾಣಿಗಳಲ್ಲಿ ಅತಿಸಮರ್ಥನೆಂದು ಹೆಸರುಹೊಂದಿ ಫಲವೇನು! ನನ್ನಂಥ ಪರಾಕ್ರಮಿಗೆ ಯಃಕಶ್ಚಿತ ಕೋಳಿಯ ಕೂಗು ಬೆದರಿಸುವದೆಂದರೆ ನಗೆಗೇಡಲ್ಲವೇ! ಇದಕ್ಕೂ ದುಃಖದಾಯಕವಾದ ಸಂಗತಿಯು ಇನ್ನಾವುದಿರುವದು? ಹೀಗಾಗಿ ಬದುಕುವದಕ್ಕಿಂತ ಸಾಯುವದು ಶ್ರೇಯಸ್ಕರವು! ” ಎಂದೆಷ್ಟೋ ಬಗೆಯಾಗಿ ಒಂದೇಸವನೇ ಕುದಿಯುತ್ತ ಒಂದೆಡೆಯಲ್ಲಿ ಬಿದ್ದುಕೊಂಡಿತ್ತು. ಅಷ್ಟರಲ್ಲಿ ಅಲ್ಲಿಗೆ ಒಂದು ಆನೆಯು ಕಿವಿಯಗಲಾಡಿಸುತ್ತ ಬಂದಿತು. ಅದರ ಮೋರೆಯನ್ನು ನೋಡಿದರೆ, ಆವುದೋ ದುಃಖವು ಅದನ್ನು ಹಿಂಡಿ ಹಿಪ್ಪಿಯಾಗಿ ಮಾಡಿದೆಯೆಂದು ಹೇಳಬರುವಂತಿತ್ತು. ಆಗ ಸಿಂಹವು ಅದಕ್ಕೆ:— “ ಅಣ್ಣಾ! ನಿನಗೆ ಏನು ದುಃಖವಾಗುತ್ತದೆ? ನಿನ್ನಂಥ ಬಲಿಷ್ಠ ಪ್ರಾಣಿಯನ್ನು ಬಳಲಿಸುವ ಪ್ರಾಣಿಯು ಅದಾವುದು ಈ ಜಗದಲ್ಲಿದೆ; ” ಎಂದು ಕೇಳಿತು. ಆಗ ಆನೆಯು:— “ ಗೆಳೆಯಾ, ಏನು ಹೇಳಲಿ, ಒಂದೇಸವನೇ ಗುಂಯ್ಗುಟ್ಟುತ್ತಿರುವ

ಸೊಳ್ಳೆ (ಗುಂಗಾಡಿ) ಯೆಂಬ ಪ್ರಾಣಿಯನ್ನು ನೀನು ಬಲ್ಲಿಯಷ್ಟೇ. ಆ ಕ್ಷುದ್ರ ಜಂತುವು ನನ್ನ ಕಿವಿಯಲ್ಲಿ ಸೇರಿ ಕಚ್ಚಲಾರಂಭಿಸಿತೆಂದರೆ ಅವರ್ಣನೀಯವಾದ ಕರ್ಣವೇದನೆಯು ನನಗಾಗುವದು" ; ಎಂದು ಉತ್ತರ ಕೊಟ್ಟಿತು. ಇದನ್ನು ಕೇಳಿ ಎಲ್ಲ ಪ್ರಾಣಿಗಳಿಗೂ ಒಂದಿಲ್ಲೊಂದು ದುಃಖವು ಬೆನ್ನು ಹತ್ತಿಯೇ ಇರುವದೆಂದು ಬಗೆದು ಸಿಂಹವು ತಾನು ಸಮಾಧಾನವನ್ನು ಹೊಂದಿತು.

ಸಾರಾಂಶ:— ಈ ಜಗದಲ್ಲಿ ಪೂರ್ಣ ಸುಖಿಯಾದವನು ಆವನು?

## ೧೨೪— ಒಕ್ಕಲಿಗನೂ ದೈವವೂ.

ಒಬ್ಬ ಒಕ್ಕಲಿಗನಿಗೆ ರಂಟೆಯನ್ನು ಹೊಡೆಯುವಕಾಲಕ್ಕೆ ಹೊಲದಲ್ಲಿ, ಒಂದು ಮೋಹರುಗಳಿಂದ ತುಂಬಿದ ದೊಡ್ಡ ತಪ್ಪೇಲಿಯು ಸಿಕ್ಕಿತು. ಅದನ್ನು ನೋಡಿ ಅವನಿಗೆ ಅತ್ಯಾನಂದವಾಯಿತು. ಆಗ ಅವನು ಭೂಮಿಗೆ ನೆಲಮುಟ್ಟಿ ತಲೆವಾಗಿ ಹಣವನ್ನು ಕೊಟ್ಟ ಬಗ್ಗೆ ಅದರ ಉಪಕಾರವನ್ನು ಬಹಳ ಸ್ಮರಿಸಿದನು. ಅವನ ಈರೀತಿಯ ಸ್ವಭಾವವನ್ನು ನೋಡಿ ದೈವವು ಅವನಿಗೆ:— " ಏನಯ್ಯಾ, ದ್ರವ್ಯವಿತ್ತದ್ದಕ್ಕೆ ಈಗ ನೀನು ಈ ಭೂಮಿಯ ಉಪಕಾರವನ್ನು ನೆನೆಯುತ್ತಿರುವಿ; ನನ್ನನ್ನು ಮಾತ್ರ ನೀನು ಮರೆತು ಬಿಟ್ಟಿರುವಿ; ಹೀಗೆ. ನಿನಗೆ ಹಣಸಿಗುವ ಬದಲು, ನಿನ್ನಲ್ಲಿಯ ಹಣವೇ ಕಳವಿನಿಂದ ಹೋಗಿದ್ದರೆ ಆಗ ಮಾತ್ರ " ಏನು ನನ್ನ ದುರ್ದೈವ " ವೆಂದು ನನ್ನ ದೂಷಿಸುತ್ತಿದ್ದಿ, ಎಂದು ನುಡಿಯಿತು.

———

## ೧೨೫— ದೈವವೂ, ಹುಡುಗನೂ.

ಒಬ್ಬ ಸಣ್ಣ ಹುಡುಗನು ಒಂದು ಹೊಲದಲ್ಲಿ ಬಹಳ ಹೊತ್ತು ಆಡಿಆಡಿ ದಣಿದನು. ಆಗ ಅವನು ಹತ್ತರದ ಒಂದು ಬಾವಿಯ ಕಡೆಗೆ ಹೋದವನೇ ಅದರ ಕಟ್ಟೆಯ ತುಟ್ಟತುದಿಗೆ ಮಲಗಿಕೊಂಡನು. ಇದನ್ನು ನೋಡಿ ದೈವವು ಅವನನ್ನು ಮೆಲ್ಲನೆ ಅಗಳಾಡಿಸಿ ಎಚ್ಚರಗೊಳಿಸಿ, ಆ ಹುಡುಗನಿಗೆ:— " ತಮ್ಮಾ , ನಿನ್ನ ಜೀವವನ್ನು ನಾನು ಉಳಿಸಿರುವೆನು; ನಿದ್ರೆಯಲ್ಲಿ ಉರುಳಿ ನೀನು ಬಾವಿಯಲ್ಲಿ ಬಿದ್ದು ಮರಣ ಹೊಂದಿದ್ದರೆ ಜನರು ನನಗೇ ದೋಷವನ್ನು ಕೊಡುತ್ತಿದ್ದರು; ಅಂದ ಮೇಲೆ ಇದರಲ್ಲಿ ಇದ್ದ ದೋಷವು ನನ್ನದೋ ನಿನ್ನದೋ ನೀನೇ ಹೇಳು", ಎಂದು ನುಡಿಯಿತು.

ಒಮ್ಮೆಲೇ ಕಾಲು ಕೆದರಹತ್ತಿ ಕಣ್ಣುಗಳಲ್ಲೆಲ್ಲ ಮಣ್ಣು ತುಂಬುವಂತೆ ಧೂಳವನ್ನೆಬ್ಬಿಸಿ ಬಿಟ್ಟಿತು. ಆದ್ದರಿಂದ ಆ ಒಕ್ಕಲಿಗನ ಕಣ್ಣೇ ಕಾಣಿಸಿದಾದವು.

ಸಾರಾಂಶ:— ತುಂಟ ಸ್ವಭಾವವನ್ನು ತೆಗೆದು ಹಾಕುವದು ಒಮ್ಮೊಮ್ಮೆ ಸಾಧ್ಯವಾಗುವದೇ ಇಲ್ಲ.

---

## ೧೨೯— ಕುರಿಮರಿಯೂ ತೋಳಪೂ,



ಒಂದು ಕುರಿಮರಿಗೆ ಬಿಸಿಲಿನ ಬಳಲಿಕೆಯಿಂದ ಬಲು ಬಾಯಾರಿತು. ಆಗ ಅದು ಒಂದು ಝರಿಗೆ ನೀರು ಕುಡಿಯಲಿಕ್ಕೆ ಹೋಯಿತು. ಅಲ್ಲಿಯೇ ಮೇಲ್ಮಗ್ಗಲಿಗೆ ಒಂದು ತೋಳವು ನೀರು ಕುಡಿಯುತ್ತಿತ್ತು. ಅದನ್ನು ನೋಡಿ ಮರಿಯು ಬೆದರಿ, ಮತ್ತಿಷ್ಟು ಕೆಳಗೆ ಹೋಗಿ ನೀರು ಕುಡಿಯಹತ್ತಿತು. ಕುರಿಮರಿಯನ್ನು ಕಂಡು, ಏನೊಂದು ನೆವದಿಂದ ಅದನ್ನು ನುಂಗಿ ನೀರು ಹಿಡಿಯಬೇಕೆಂದು ತೋಳವು ಅದಕ್ಕೆ:— "ಎಲೇ! ನೀರನ್ನು ಕಲಕು ಮಾಡುವಿಯಲ್ಲ! ನನ್ನ ನೀರಡಿಕೆಯು ನೀಗುವದು ಹೇಗೆ? ಹೀಗೆ ನನ್ನ ಅಪಮಾನವನ್ನು ಏಕೆ ಮಾಡಿದಿ? ಹು! ಯಾಕೆ? ಮಾತಾಡಲೊಲ್ಲಿ? ನೋಡು! ಈಗಲೇ ನಿನ್ನನ್ನು ತಿಂದು ತೇಗುವೆನು;" ಎಂದು ಗಟ್ಟಿಯಾಗಿ ಗದ್ದರಿಸಿತು. ಆಗ ಆ ಮರಿಯು ಅಂದದ್ದು— "ಅಣ್ಣಾ! ಇದನ್ನೇನನ್ನುವಿ! ನಿನ್ನ ಕಡೆಯಿಂದಲೇ ನೀರು ಹರಿಯುತ್ತಿರಲು ನಾನು ಕಲಕು ಮಾಡಿದ ನೀರು ನಿನ್ನ ಕಡೆಗೆ ಬರುವದು ಹೇಗೆ?" ಮತ್ತೆ ತೋಳವು:—

"ಅದಿರಲಿ! ನೀನು ಬಹಳ ಠಕ್ಕನಿರುವಿ; ಈಗಾರು ತಿಂಗಳುಗಳಿಂದ ನನ್ನನ್ನು ನೀನು ಬಯ್ಯುತ್ತಿರುವಿಯೆಂದು ಕೇಳಿದ್ದೇನೆ;" ಎಂದು ನುಡಿಯಿತು. ಆಗ ಕುರಿಮರಿಯು:— "ಛೇ! ಛೇ! ನಾನು ಹುಟ್ಟೇ ಮೂರು ಮಾಸಗಳಾಗಿರಲು ಆರು ತಿಂಗಳುಗಳಿಂದ ನಿನ್ನನ್ನು ನಾನು ಬಯ್ಯುವದು ನಿನಗೆ ನಿಜತೋರುವದೋ?" ಎಂದು ಕನಿಕರ ಸ್ವರದಿಂದ ನುಡಿಯಿತು. ಈ ಸಾರೆ ತೋಳದ ಬಾಯಿ ಕಟ್ಟಿತು. ಆಗ ಅದು, ಒಮ್ಮೆಲೇ ಬಲು ರೇಗಿದಂತೆ ಸೋಗುಹಾಕಿ, ಆರ್ಭಟೆಯಿಂದ ಕಣ್ಣು ತಿರುಗಿಸುತ್ತ, ಕೈಕಾಲುಗಳನ್ನಪ್ಪಳಿಸುತ್ತ, ಹಲ್ಲು ತಿನ್ನುತ್ತ ಕುರಿಮರಿಗೆ:— "ಮೂರ್ಖಾ! ನೀನೇ ನನಗೆ ಬಯ್ದಿರದಿದ್ದರೂ ನಿಮ್ಮಪ್ಪನು ಬಯ್ದಿದ್ದಾನು; ಎಲ್ಲವೂ ಒಂದೇ!" ಹೀಗಂದದ್ದೇ ಆ ಮರಿಯನ್ನು ತೋಳವು ಮುರಿದು ಬಿಟ್ಟಿತು.

ತಾತ್ಪರ್ಯ:— ಘಾತಕನಾದ ಬಲಶಾಲಿಯಮುಂದೆ ನಮ್ಮ ಸತ್ಯವು ನಡೆಯುವದಿಲ್ಲ. ಕಡೆಗೆ ಆ ಬಲಶಾಲಿಯೇ ಜಯಶಾಲಿಯಾಗುತ್ತಾನೆ.

———————

## ೧೪೦:— ಮೊಲವೂ, ಗುಬ್ಬಿಯೂ.

ಒಂದು ಗರುಡಪಕ್ಷಿಯು ಒಂದು ಮೊಲದ ಮೇಲೆ ಹೊಂಚು ಹಾಕಿಕೊಂಡು ಕುಳಿತಿತ್ತು. ಅಲ್ಲಿಯೇ ಗಿಡದಲ್ಲಿ ಒಂದು ಗುಬ್ಬಿಯು ಕುಳಿತಿತ್ತು. ಅದು ಮೊಲಕ್ಕೆ:— "ಛೀ! ಹುಚ್ಚಾ! ಹೀಗೆ ಅಂಜುತ್ತ ಕುಳಿತಿಯೆಂದರೆ ನಿನ್ನ ಪ್ರಾಣವನ್ನು ವ್ಯರ್ಥವಾಗಿ ಕಳೆದುಕೊಳ್ಳುವಿ; ಎದ್ದೇಳು, ಯತ್ನ ಮಾಡಿದರೆ ನಿನ್ನ ಚಪಲತನವು ನಿನ್ನನ್ನು ಈ ಗರುಡನ ದವಡೆಯೊಳಗಿಂದ ಬಿಡಿಸಬಹುದು." ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಒಂದು ಗಿಡಗವು ಭರ್ರನೇ ಹಾರಿ ಬಂದು ಆ ಗುಬ್ಬಿಯನ್ನು ಕಚ್ಚಿಕೊಂಡು ಮೇಲಕ್ಕೆ ಹಾರಿತು. ಬಹು ರೀತಿಯಿಂದ ಬಳಲಿದರೂ ಗುಬ್ಬಿಯನ್ನು ಆ ಗಿಡಗವು ಬಿಡಲಿಲ್ಲ. ಇದನ್ನು ನೋಡಿ, ಸಾವಿಗೆ ಸಿದ್ಧವಾಗಿ ಕುಳಿತಿರುವ ಮೊಲವು ಗುಬ್ಬಿಗೆ:— "ನಿನಗೆ ಭಯವಿಲ್ಲೆಂದು ತಿಳಿದು ನನಗೆ ಬುದ್ಧಿವಾದವನ್ನು ಹೇಳಲಿಕ್ಕೆ ಬಂದಿದ್ದೆ; ಈಗ ನೀನೇ ನಿನ್ನ ಜೀವಕ್ಕೆ ಎರವಾದೆ. ಈಗ ನಿನ್ನ ಜೀವವನ್ನು, ನೋಡುವಾ! ಉಳಿಸಿಕೊಳ್ಳು." ಎಂದು ನುಡಿಯಿತು.

ಸಾರಾಂಶ:— ತಾನು ಸಂಕಟಕ್ಕೆ ಶಿಲುಕುವವರೆಗೆ ಮನುಷ್ಯನು ಪರರಿಗೆ ಶಾಸ್ತ್ರಾರ್ಥವನ್ನು ಹೇಳಹೋಗುವದು ಸಹಜವು. ಆದರೆ ತಾನೇ ಸಂಕಟಕ್ಕೆ ಶಿಲುಕಿದಾಗ ಆ ಶಾಸ್ತ್ರಾರ್ಥಗಳೆಲ್ಲ ಓಡಿಹೋಗುವವು. ಕತ್ತಲೆಯಲ್ಲಿ ಕೈಯಾಡಿಸುವವನಂತೆ ಆಗ ಅವನು ಕಕ್ಕಾವಿಕ್ಕಿಯಾಗುತ್ತಾನೆ.

———————

## ೧೩೧— ಜೇನುನೊಣಗಳೂ ಅವುಗಳ ಒಡೆಯನೂ.

ಒಬ್ಬ ಕಳ್ಳನು ಒಂದು ತೋಟದಲ್ಲಿ ಹೊಕ್ಕು, ಅಲ್ಲಿದ್ದ ಕೆಲವು ಜೇನು ಹುಟ್ಟುಗಳನ್ನು ಕದ್ದೊಯ್ದನು. ತೋಟದೊಡೆಯನು ಸ್ವಲ್ಪ ವೇಳೆಯಲ್ಲಿ ತೋಟಕ್ಕೆ ಬಂದು ನೋಡುತ್ತಾನೆ; ಎಲ್ಲ ಹುಟ್ಟುಗಳೂ ಇಲ್ಲದ್ದು ಅವನಿಗೆ ಕಂಡುಬಂತು. ಅಲ್ಲಿಯೇ ಆ ಬಗ್ಗೆ ವಿಚಾರಿಸುತ್ತ ಅವನು ನಿಂತಿರಲು, ಹೊರಗೆ ಹೋದ ಜೇನು ನೊಣಗಳೂ ತಿರುಗಿ ಬಂದವು. ಆಗ ತಮ್ಮ ಹುಟ್ಟುಗಳು ಅಲ್ಲಿ ಅವುಗಳಿಗೆ ಕಾಣಲಿಲ್ಲ; ಸಮೀಪದಲ್ಲಿ ನಿಂತವನೇ ಅವನ್ನು ಹೊತ್ತೊಯ್ದಿರಬಹುದೆಂದು ಬಗೆದು ಹಿಂದು ಮುಂದು ನೋಡದೆ, ಆ ತೋಟಿಗನ ಮೇಲೆ ತೋರಿಬಿದ್ದವು. ಆಗ ಕಡಿತದಿಂದ ಚಡಪಡಿಸುತ್ತ ಆ ತೋಟಿಗನು:— “ ಎಲೈ! ಕೃತಘ್ನ ಜೀವಿಗಳಿರಾ ! ನಿಮ್ಮ ಹುಟ್ಟುಗಳನ್ನು ಒಯ್ದವನನ್ನು ನೀವು ಬಿಟ್ಟು ಬಿಟ್ಟಿರಿ; ಆದರೆ ಮುಂದೆ ನಿಮ್ಮ ವ್ಯವಸ್ಥೆಯನ್ನು ಎಂತು ಮಾಡುವದೆಂದು ಯೋಚನೆಯಲ್ಲಿ ಬಿದ್ದಿರುವ



ನನ್ನನ್ನು ಕಚ್ಚಿ ಬಿಟ್ಟಿರಿ; ಈ ನಿಮ್ಮ ಜಾಣತನಕ್ಕೆ ಏನನ್ನಬೇಕು; " ಎಂದು ನೆರಳುತ್ತ ನುಡಿದನು.

ತಾತ್ಪರ್ಯವೇನೆಂದರೆ:— ಒಮ್ಮೊಮ್ಮೆ ತಮ್ಮ ಮಿತ್ರರನ್ನು ಶತ್ರುಗಳೆಂಬ ತಪ್ಪು ತಿಳುವಳಿಕೆಯಿಂದ ಮನುಷ್ಯರು ತೊಂದರೆ ಪಡಿಸುವದು ಕಂಡುಬರುತ್ತದೆ. ಆದ್ದ ರಿಂದ ನಾವು ಇಂಥ ಸಮಯವು ಬಂದಾಗ ಚನ್ನಾಗಿ ಸಮಾಲೋಚಿಸಿ ಕಾರ್ಯಕ್ಕೆ ಮುಂದುವರಿಯಬೇಕು.

———————

## ೧೪೨— ಒಕ್ಕಲಿಗನೂ ಕಾಡಹಂದಿಯೂ.

ಒಬ್ಬ ಒಕ್ಕಲಿಗನು ಜಾಲವನ್ನು ಪಸರಿಸಿ ಅದರಲ್ಲಿ ಒಂದು ಕಾಡಹಂದಿಯನ್ನು ಹಿಡಿದನು. ಆದರೆ ಅದರ ಒಂದು ಕಿವಿಯನ್ನು ಮಾತ್ರ ಕೊಯ್ದು ಅದನ್ನು ಅವನು ಬಿಟ್ಟು ಬಿಟ್ಟನು. ಕೆಲಹೊತ್ತಿನಲ್ಲಿ ಅದೇ ಹಂದಿಯೇ ಮತ್ತೆ ಬಲೆಗೆ ಬಿತ್ತು. ಆಗ ಆ ಒಕ್ಕಲಿಗನು ಅದರ ಮತ್ತೊಂದು ಕಿವಿಯನ್ನು ಕಿತ್ತಿ ಮತ್ತೆ ಅದನ್ನು ಬಿಟ್ಟು ಬಿಟ್ಟನು. ಆದರೂ ಆ ಹಂದಿಯೇ ಮತ್ತೊಮ್ಮೆ ಆ ಒಕ್ಕಲಿಗನ ಬಲೆಗೆ ಶಿಲುಕಿತು. ಈ ಸಾರೆ ಒಕ್ಕಲಿಗನು ಆ ಹಂದಿಯನ್ನು ಕೊಂದುಹಾಕಿ, ಅದರ ತಲೆಯನ್ನೇ ಒಡೆದು ನೋಡಿ ದನು. ಆಗ ಅವನಿಗೆ ಅಲ್ಲಿ ಮಿದುಳೇ ಕಣ್ಣಿಗೆ ಬೀಳಲಿಲ್ಲ. ಇದನ್ನು ತಿಳಿದು ಅವನು ತನ್ನ ಗೆಳೆಯರಿಗೆ:— " ಅಯ್ಯಾ! ಇದು ನೋಡಿ, ಈ ಹಂದಿಯ ತಲೆಯಲ್ಲಿ ಮಿದುಳೇ ಇಲ್ಲ ! ಆದ್ದರಿಂದಲೇ ಇದು ಮತ್ತೆಮತ್ತೆ ಬಲೆಯಲ್ಲಿ ಬಂದು ಬೀಳುತ್ತಿತ್ತು; ಮತ್ತೊಂ ದು ಬುದ್ಧಿಯುಳ್ಳ ಪ್ರಾಣಿಯು ನನ್ನ ಮೊದಲನೇ ಶಿಕ್ಷೆಗೇ ತನ್ನ ತಪ್ಪನ್ನು ತಿದ್ದುಕೊಳ್ಳು ತ್ತಿತ್ತು", ಎಂದು ಮಾತಾಡಿದನು.

ಒಟ್ಟೆಂದರೆ:— ಉಪದೇಶಮಾಡಿದರೂ ಬೋರ್ಗಲ್ಲಮೇಲೆ ಮಳೆಗರೆದಂತೆ ಪರಿಣ ಮಿಸುವಂಥ, ಅಥವಾ ಶಿಕ್ಷೆಯನ್ನು ಕೊಟ್ಟರೂ ಅದರ ನೆನಪೇ ಇಲ್ಲದಿರುವಂಥ ಮಹಾ ಮೂರ್ಖನನ್ನು ಹಾದಿಗೆ ತರಲು ಪ್ರಯತ್ನ ಮಾಡುವದೆಂದರೆ ಇದ್ದಲಿಯನ್ನು ಬಿಳಿ ಮಾಡು ಹೊರಟಂತೇ ಸರಿ.

———————

## ೧೩೩— ನರಿಯೂ ಶಹಾಮೃಗವೂ.



ಒಂದು ನರಿಯು ಶಹಾಮೃಗವನ್ನು ಒಮ್ಮೆ ತನ್ನ ಮನೆಗೆ ಊಟಕ್ಕೆ ಕರೆಯಿತು. ಆಗ್ಯೆ ಅದಕ್ಕೆ ಚೇಷ್ಟೆಮಾಡಬೇಕೆಂದು ನರಿಯು ಒಂದು ಸುಂದರವಾದ ಪಾಯಸದಿಂದ ತುಂಬಿದ ಪರಾತನ್ನು ಅದರ ಮುಂದೆ ಇಟ್ಟಿತು. ಆ ಮೇಲೆ ತಾಟಿನ ಎರಡೂ ಮಗ್ಗ ಲಿಗೆ ನರಿ ಶಹಾಮೃಗಗಳು ಪಾಯಸವನ್ನು ತಿನ್ನಲಾರಂಭಿಸಿದವು. ಶಹಾಮೃಗದ ಚುಂಚವು ಉದ್ದವಿರುವದರಿಂದ ಅದಕ್ಕೆ ಚನ್ನಾಗಿ ಪಾಯಸವನ್ನು ಮೇಲೆ ತೆಗೆದುಕೊ ಳ್ಳಲು ಬರಲಿಲ್ಲ. ಇಷ್ಟರಲ್ಲಿ ನರಿಯು ಎಲ್ಲ ಪಾಯಸವನ್ನು ತಿಂದು ಪರಾತನ್ನು ನೆಕ್ಕಹತ್ತಿತು. ಪಾಪ ! ಶಹಾಮೃಗವು ಉಪವಾಸದಿಂದ ವನದಲ್ಲಿ ಹೊರಟು ಹೋಯಿತು. ಮುಂದೊಮ್ಮೆ ಶಹಾಮೃಗವು ಹಿಂದಿನ ಸೇಡು ತೀರಿಸಿಕೊಳ್ಳಬೇಕೆಂದು ಬಗೆದು ಆ ನರಿಗೆ ತನ್ನಲ್ಲಿಗೆ ಔತಣ ಕೊಟ್ಟಿತು. ನರಿಯು ಬಂದಕೂಡಲೇ ಒಂದು ಹೂಜೆಯಲ್ಲಿ ಸೀಕರಣಿಯನ್ನು ತುಂಬಿ ಶಹಾಮೃಗವು ಅದರ ಮುಂದಿಟ್ಟಿತು. ಆ ಹೂಜೆ ಯ ಬಾಯಿಯು ಸಣ್ಣದಿದ್ದು ಹೊಟ್ಟೆಯು ದೊಡ್ಡದಿತ್ತು. ಆದ್ದರಿಂದ ನರಿಗೆ ಅದ

ರಲ್ಲಿ ಬಾಯಿಹಾಕಲಿಕ್ಕೆ ಬರಲಿಲ್ಲ. ಆದರೆ ಶಹಾಮೃಗವು ಹೂಜೆಯಲ್ಲಿ ತನ್ನ ಚುಂಚುವನ್ನು ಹಾಕಿದ್ದೇ ಎಲ್ಲ ಸೀಕರಣೆಯನ್ನು ಸುರಕೊಂಡು ಬಿಟ್ಟಿತು. ಆಗ ಸುರಕೊಳ್ಳುವಾಗ ಆ ಮೃಗದ ಬಾಯಿಯಿಂದ ನಡು ನಡುವೆ ಸೀಕರಣೆಯ ಹನಿಗಳು ಕೆಳಗೆ ಬೀಳಹತ್ತಿದವು. ಅವನ್ನು ನೆಕ್ಕುತ್ತ ನರಿಯು ಕಾಲಕಳೆಯಿತು. ಆದರೆ ಮನದಲ್ಲಿ ಮಾತ್ರ ಬಹು ಸಂತಾಪಗೊಂಡಿತು. ಹೋಗುವಕಾಲಕ್ಕೆ ಅದು ಶಹಾಮೃಗಕ್ಕೆ:— " ಗೆಳೆಯಾ! ನೀನು ಮಾಡಿದ್ದು ಚನ್ನಾಯಿತು; ನಿನ್ನನ್ನು ಮೋಸಗೊಳಿಸಿದ್ದಕ್ಕೆ ನನಗೆ ನೀನು ತಕ್ಕ ಪ್ರಾಯಶ್ಚಿತ್ತವನ್ನು ಮಾಡಿದಿ; ಇದರಲ್ಲಿ ನಾನು ನೊಂದುಕೊಳ್ಳಲು ಕಾರಣವಿಲ್ಲ, ಎಂದೆನ್ನುತ್ತ ಹೊರಟುಹೋಯಿತು.

ಸಾರಾಂಶ:— ಪರರನ್ನು ನೋಡಿ ಅಪಹಾಸ್ಯಮಾಡುವದು ಸಜ್ಜನರ ಲಕ್ಷಣವಲ್ಲ. ಹಾಗೆ ಮಾಡುವವನು ಮಾತ್ರ ತನಗೆ ಪರರು ಹಾಸ್ಯಮಾಡಿದರೆ ಸಿಟ್ಟಿಗೇಳಲು ಕಾರಣವಿಲ್ಲ.

---

## ೧೩೪— ಇಲಿಯೂ ಎತ್ತೂ.

ಒಂದು ಇಲಿಯು ಒಂದು ಎತ್ತಿನ ಕಾಲಿಗೆ ಕಡಿಯಿತು. ಆ ಮೇಲೆ ಓಡಿಹೋಗಿ ತನ್ನ ಬಿಲದಲ್ಲಿ ಅಡಗಿಕೊಂಡು ಕುಳಿತಿತ್ತು. ಇದರಿಂದ ಎತ್ತು ಬಲು ಹುಚ್ಚೆದ್ದಿತು. ಕೋಡುಗಳನ್ನು ಮೇಲಕ್ಕೆತ್ತಿ, ಡುರಕಿಯನ್ನು ಹಾಕುತ್ತ ತನ್ನನ್ನು ಕಚ್ಚಿದವರಾರೆಂದು ಸುತ್ತು ಮುತ್ತು ನೋಡಹತ್ತಿತು. ಆದರೆ ಅದಕ್ಕೆ ವೈರಿಯು ಸಿಗಬೇಕ್ಹೇಗೆ ? ಆಗಂತೂ ಅದು ಮತ್ತಿಷ್ಟು ಕೆರಳಿತು. ಬಿಲದಲ್ಲಿ ಬಾಯಿಯಲ್ಲಿಯೇ ಕುಳಿತು, ಇಲಿಯು ಇದನ್ನು ನೋಡಿ ನಗಹತ್ತಿತು. ಮತ್ತು ಎತ್ತಿಗೆ:— " ಏ! ನಿನ್ನ ಈ ಸೊಕ್ಕು ಅರ್ಥವಿಲ್ಲದ್ದು! ನಿನ್ನ ಕೋಡುಗಳೂ, ಕಾಲ ಕೆದರಾಟವೂ ನನಗೇನು ಮಾಡಬಲ್ಲವು; ನನ್ನಂಥ ಕ್ಷುಲ್ಲಕ ಪ್ರಾಣಿಯನ್ನು ಮಣಿಸುವದು ನಿನ್ನಿಂದಾಗಲಿಲ್ಲವೆಂದಮೇಲೆ ನಿನ್ನ ಶಕ್ತಿಯು ಉಪಯೋಗವೇನು? " ಎಂದು ಮನಸಿಗೆ ನಡುವಂತೆ ಮಾತಾಡಿತು.

ತಾತ್ಪರ್ಯ:— ವೈರಿಯಿಲ್ಲದವರಾರೂ ಈ ಜಗದಲ್ಲಿಲ್ಲ. ಮತ್ತು ಶತ್ರುವು ಸಣ್ಣವನೆಂದು ಅವನನ್ನು ಹೀಯಾಳಿಸಬಾರದು. ಅವನಿಂದಲೂ ಒಮ್ಮೊಮ್ಮೆ ಪ್ರತಿಕಾರ ಮಾಡಲಾಗದ ತೊಂದರೆಯು ಮನುಷ್ಯನಿಗೆ ತಟ್ಟುವದುಂಟು.

---

## ೧೩೫— ಕತ್ತೆಯ ಮರಿಯೂ ಕಾಡಹಂದಿಯೂ.



ಒಂದು ಕತ್ತೆಯ ಮರಿಗೆ ಅಕಸ್ಮಾತ್ತಾಗಿ ಒಂದು ಕಾಡಹಂದಿಯು ಅಡವಿಯಲ್ಲಿ ಭೆಟ್ಟಿಯಾಯಿತು. ಆಗ ಅದರ ಕೂಡ ನಗೆಯಾಡಬೇಕೆಂದು ಕತ್ತೆಯ ಮರಿಯು:— " ಶರಣು ! ಅಣ್ಣಾ ! ಶರಣು ! ಎಂದು ಆ ಹಂದಿಗೆ ನಗುತ್ತ ನುಡಿಯಿತು. ಕತ್ತೆಯ ಈ ತರದ ಚೇಷ್ಟೆಯನ್ನು ನೋಡಿ ಹಂದಿಗೆ ಅದನ್ನು ಹರಿದುಬಿಡುವಷ್ಟು ಕೋಪಬಂದಿತು. ಆದರೆ ಸ್ವಲ್ಪ ವಿಚಾರಮಾಡಿ, ಶಾಂತವಾಗಿ, ಹಂದಿಯು ಕತ್ತೆಗೆ:— " ಏ ! ಕೀಳಪಶುವೇ ! ಮುನ್ನೋಡಿ ಹೋಗು ! ನಿನ್ನ ಜೀವ ತೆಗೆದುಕೊಳ್ಳಲಿಕ್ಕೆ ನನಗೇನು ತಡವಾಗುವಂತಿಲ್ಲ ! ಆದರೆ ಕತ್ತೆಯ ರಕ್ತದಿಂದ ಬಾಯಿ ಕೆಡಿಸಿಕೊಳ್ಳುವದು ನನಗೆ ಬೇಕಾಗಿಲ್ಲ ! ಆದುದರಿಂದಲೇ ನೀನು ಉಳಿದುಕೊಂಡಿ ! ನಡೆ ! ಹಾದೀ ಹಿಡಿ ! " ಎಂದು ಗದ್ದರಿಸಿತು.

ಸಾರಾಂಶ:— ಬುದ್ಧಿಗೇಡಿಗಳು ತಾವು ಜಾಣರೆಂದು ತಿಳಿದುಕೊಂಡು ದೊಡ್ಡ ಮನುಷ್ಯರಿಗೆ ನಗೆಯಾಡಹೋಗುತ್ತಾರೆ. ಆದರೆ ಆಗ, ತಮ್ಮ ಜೀವಕ್ಕೆ ಎರವಾಗುವ ವೇಳೆಯು ಒಮ್ಮೊಮ್ಮೆ ಅವರಿಗೆ ಬರುವದುಂಟು. ಒಂದುವೇಳೆ ಅದರಲ್ಲಿಂದ ಪಾರಾದರೆ ಅವರು ಕುಡಿಕೆ ಹೊನ್ನು ದೊರಕಿಸಿದಂತೆಯೇ ಸರಿ.

---

## ೧೩೬— ಹೆಣ್ಣು ಕೋತಿಯೂ ಅದರ ಮರಿಗಳೂ.

ಒಂದು ಹೆಣ್ಣು ಕೋತಿಗೆ ಎರಡು ಮರಿಗಳಿದ್ದವು. ಅವುಗಳಲ್ಲಿ ಒಂದರ ಮೇಲೆ ಅದರ ಬಲು ಜೀವಾಳ. ಒಂದಿನ ಕೆಲವು ನಾಯಿಗಳು ಅದರ ಬೆನ್ನು ಹತ್ತಿದವು. ಆ ತನ್ನ ಮರಿಯನ್ನು ಉಳಿಸಿಕೊಳ್ಳಬೇಕೆಂದು ಅದನ್ನು ಹೊಟ್ಟೆಗೆ ಹಚ್ಚಿಕೊಂಡು

ಕೋತಿಯು ಕಾಲ್ದೆಗೆಯಿತು. ಓಡುವಾಗ ಅವಸರದಲ್ಲಿ ಆ ಜೀವಾಳದ ಮರಿಯು ಒಂದು ಕಲ್ಲಿಗೆ ಗಟ್ಟಿಯಾಗಿ ತಾಗಿತು; ಜೀವಬಿಟ್ಟಿತು. ಎರಡನೇ ಮರಿಯು ತಾಯಿಯ ಬೆನ್ನಮೇಲೆ ಇದ್ದದ್ದರಿಂದ, ಅದು ಬದುಕಿಕೊಂಡಿತು.

ಒಟ್ಟಾರೆಂದರೆ:— ಯಾವದು ಕೆಡಬಾರದೆಂದು ನಾವು ಎಚ್ಚರಪಡುವೆವೋ ಅದೇ ಒಮ್ಮೊಮ್ಮೆ ಕೆಟ್ಟುಹೋಗುತ್ತದೆ. ಮತ್ತು ಏತರ ವಿಷಯಕ್ಕೆ ಎಳ್ಳಷ್ಟಾದರೂ ನಾವು ಎಚ್ಚರ ಪಡುವದಿಲ್ಲವೋ, ಅದು ಒಮ್ಮೊಮ್ಮೆ ತನ್ನಷ್ಟಕ್ಕೆ ತಾನೇ ಹೇಗೆ ಉಳಿಯಕೊಂಡಿರುತ್ತದೆ. ಇದಕ್ಕೆಲ್ಲ ದೈವವೇ ಕಾರಣ.

---

## ೧೩೭— ಟಗರೂ ಎತ್ತೂ.

ಒಂದು ಟಗರು ಬಹು ತುಂಟವಾಗಿತ್ತು. ಕಂಡ ಕಂಡವರಿಗೆ ಅದು ಹಾಯಲು ಹೋಗುತ್ತಿತ್ತು. ಒಮ್ಮೆ ಅದು ರಂಟೆಗೆ ಹೂಡಿರುವ ಒಂದು ಎತ್ತನ್ನು ಕಂಡು:— "ಅಹಹ! ನೀನು ಎಷ್ಟು ಸಪ್ಪೆಯಾಗಿರುವೆ! ಏನು ದುರ್ದೈವ ನಿನ್ನದು! ನಿನ್ನ ಒಡೆಯನ ದೆಶೆಯಿಂದ ನೀನು ಭಾರವನ್ನು ಹೆಗಲ ಮೇಲೆ ಹೊತ್ತು, ಹಗಲೆಲ್ಲ ರಂಟೆಯನ್ನು ಹೊಡೆಯುತ್ತಿರಲು ನಿನಗೆ ನಾಚಿಕೆ ಬರುವದಿಲ್ಲವೇ? ಜನರ ದಾಸ್ಯತ್ವದಲ್ಲಿ ಕೊಳೆಯಲೆಂದೆ ನಿನ್ನ ಜನ್ಮವಾಗಿರಲಿಕ್ಕೆ ಬೇಕು; ಹಾಗಿಲ್ಲದಿದ್ದರೆ ಇಂಥ ನೀಚತನದ ಕೆಲಸದಲ್ಲಿ ನೀನು ಎಂದೂ ಬೀಳುತ್ತಿದ್ದಿಲ್ಲ; ನಾನೆಷ್ಟು ಚನ್ನಾಗಿರುವೆ ನೋಡು! ಮನಬಂದಲ್ಲಿ ಅಲೆದಾಡುವೆನು; ಒಮ್ಮೆ ಗಿಡದ ದಟ್ಟಾದ ನೆರಳಲ್ಲಿ ನಿದ್ರಿಸುತ್ತೇನೆ; ಒಮ್ಮೆ ಬಿಸಲಲ್ಲಿ ಮೈ ಕಾಸುತ್ತ ಬಿದ್ದು ಕೊಂಡಿರುತ್ತೇನೆ; ನೀರಡಿಕೆಯಾಗಲು ಝರಿಯಲ್ಲಿ ಜುಳುಜುಳು ಹರಿಯುತ್ತಿರುವ ನೀರನ್ನು ಕುಡಿಯುತ್ತೇನೆ;" ಹೀಗೆ ಇನ್ನೇಷ್ಟೋ ಬಗೆಯಾಗಿ ಹೊಗಳಿತು. ಇದೆಲ್ಲವನ್ನೂ ಎತ್ತು ಸುಮ್ಮನೇ ಕೇಳುತಿತ್ತು. ಅದಕ್ಕೆ ಉತ್ತರ ನೀಯಲು ಎತ್ತು ಮನಸ್ಸೇ ಮಾಡಲಿಲ್ಲ. ಇಷ್ಟರಲ್ಲಿ ಸಂಜೆಯಾಯಿತು. ಹೊಲದಲ್ಲಿಯ ಹೋರೆಯು ತೀರಿತು. ಎತ್ತು ಮನೆಗೆ ಹೋಗಲವಾಯಿತು ಆಗ , ಹಿಂದೆ ಮನಬಂದಂತೆ ಹೊಗಳಿದ ಟಗರನ್ನು ಕೆಲವರು ಬಲಿಕೊಡಲಿಕ್ಕೆ ತೆಗೆದುಕೊಂಡು ಹೋಗುತ್ತಿರುವದನ್ನು ಕಂಡಿತು. ಜನರು ಆ ಟಗರಿನ ಕೊರಳಲ್ಲಿ ಹೂಮಾಲೆಯನ್ನು ಹಾಕಿ, ತಲೆಗೆ ತೈಲವನ್ನು ಹಾಕಿ, ಮುಖಕ್ಕೆ ಸೆಂದೂರವನ್ನು ಹಚ್ಚಿದ್ದರು. ಇಂಥ ಶೋಚನಿಯ ಸ್ಥಿತಿಯಲ್ಲಿರುವ ಆ ಟಗರನ್ನು ಎತ್ತು ನೋಡಿ ಕನಿಕರ ಪಟ್ಟಿತು. ಇನ್ನೂ ಅದಕ್ಕೆ ಅದರ ಸಂಜೆಯ ಸಂಭಾಷಣೆಯು ಮರೆತಿದ್ದಿಲ್ಲ. ಆದ್ದರಿಂದ ಎತ್ತು ಟಗರಿನ ಹತ್ತರ ಹೋಗಿದ್ದೇ ಅದರ ಕಿವಿಯಲ್ಲಿ:—

ನಿನ್ನದೋ, ನನ್ನದೋ, ಚನ್ನಾದ ಸ್ಥಿತಿಯು! " ಎಂದು ಕೇಳಿತು.

ತಾತ್ಪರ್ಯ:— ಅನ್ಯರು ವಿಪತ್ತಿನಲ್ಲಿದ್ದದ್ದು ಕಂಡು ಉಪಹಾಸ ಮಾಡುವ ಮನುಷ್ಯನು ತಾನೇ ಅಕಸ್ಮಾತ್ತಾಗಿ ಸಂಕಟಕ್ಕೆ ಸಿಲುಕಿದರೆ, ಆಗವನಿಗಾಗುವ ನಗೆಗೇಡುತನವು ದೇವರೇ ಬಲ್ಲ. ಅವನಿಗೆ ಮೇಲು ಮೋರೆ ಮಾಡಲೂ ಅಸಹ್ಯವಾಗುತ್ತದೆ.

---

## ೧೩೮— ದೇವರಲ್ಲಿ ಅರಸನನ್ನು ಬೇಡುವ ಕಪ್ಪೆಗಳು.

ಒಂದು ದೊಡ್ಡ ಕೆರೆಯಿತ್ತು. ಅದರಲ್ಲಿ ಅನೇಕ ಕಪ್ಪೆಗಳಿದ್ದವು. ಅವೆಲ್ಲ ಒಮ್ಮೆ ಕೂಡಿ ವಿಚಾರಿಸಿದ್ದೇನಂದರೆ:—" ಮನಬಂದತ್ತ ನಾವು ತಿರುಗುತ್ತೇವೆ; ಮನಕ್ಕೆ ತಿಳಿದಂತೆ ನಡೆಯುತ್ತೇವೆ; ಇದು ಚನ್ನಾದದ್ದಲ್ಲ; ನಮ್ಮನ್ನಾಳುವ ಒಬ್ಬ ಧಣಿಯು ಬೇಕು; ಅವನಂಜಿಕೆಯಿಂದ ನಾವೆಲ್ಲರೂ ಒಕ್ಕಲಾಗಿರುವೆವು". ಹೀಗೆಂದುಕೊಂಡು ಅವೆಲ್ಲ, ತಮಗೊಬ್ಬ ಅರಸನನ್ನು ಕೊಡು ಎಂದು ದೇವರಲ್ಲಿ ಬೇಡಿಕೊಂಡವು. ಈ ಬೇಡಿಕೆಯನ್ನು ಕೇಳಿ ದೇವರಿಗೆ ನಗೆ ಬಂತು; " ಇಕ್ಕೊಳ್ಳಿ, ನಿಮ್ಮ ರಾಜನನ್ನು " ಎಂದವನೇ ದೇವರು ಒಂದು ಕಟ್ಟಿಗೆಯನ್ನು ಮೇಲಿಂದ ಒಗೆದನು. ಅದು ನೀರಲ್ಲಿ ಬೀಳುತ್ತಲೇ ದೊಡ್ಡ ಸಪ್ಪಳವಾಗಿ ನೀರೆಲ್ಲ ಅಲ್ಲೋಲ ಕಲ್ಲೋಲವಾಯಿತು. ಇದರಿಂದ ಕಪ್ಪೆಗಳು ಬೆದರಿ



ದವು. ಕಟ್ಟಿಗೆಯಿಂದ ದೂರ ಸರಿದು ಹೋದವು. ಸ್ವಲ್ಪ ವೇಳೆಯಲ್ಲಿ ಕೆರೆಯ ನೀರು ಶಾಂತವಾಯಿತು. ಆಗ ಕಟ್ಟಿಗೆಯೂ ಅಗಳಾಡದಂತಾಯಿತು. ಹೀಗಾಗಲು ಆ ಕಪ್ಪೆಗಳು ಕಟ್ಟಿಗೆಯನ್ನು ಸಮೀಪಿಸಲು ಧೈರ್ಯಗೊಂಡವು. ಒಮ್ಮೆಲೆ ಅವು ಆ ಕಟ್ಟಿಗೆಯ ಮೇಲೇರಿ ಕುಳಿತವು. ಆ ಮೇಲೆ ಕಪ್ಪೆಗಳು ವಿಚಾರಮಾಡಿದ್ದೇನಂದರೆ:-- "ಛೀ ! ಈ ಅರಸನೇನು ಚನ್ನಾಗಿಲ್ಲ; ಇನ್ನೊಬ್ಬನನ್ನು ದೇವರೆಡೆಯಲ್ಲಿ ಬೇಡುವಾ;" ಹೀಗೆಂದುಕೊಂಡು ಕಪ್ಪೆಗಳು ದೇವರನ್ನು ಬೇರೊಬ್ಬ ರಾಜನನ್ನು ತಮಗೆ ದಯಪಾಲಿಸೆಂದು ಬೇಡಿಕೊಂಡವು. ಆಗ ದೇವರು ಅವುಗಳ ಕಡೆಗೆ ಒಂದು ಬಕಪಕ್ಷಿಯನ್ನು ಕಳುಹಿಕೊಟ್ಟನು. ಅದು ಬಂದದ್ದೇ ಕೈಗೆ ಸಿಕ್ಕ ಕಪ್ಪೆಗಳನ್ನು ಬಾಯಚಪ್ಪರಿಸಹತ್ತಿತು. ಇದನ್ನು ಕಂಡು ಮಿಕ್ಕ ಕಪ್ಪೆಗಳು ಹೆದರಿದವು. ಆಗವು ತಿರುಗಿ ದೇವರಲ್ಲಿ "ಉತ್ತಮ ಅರಸನನ್ನು ಕೊಡು, ಇಲ್ಲದಿದ್ದರೆ ಮುನ್ನಿನಂತಿರುವೆವು;" ಎಂದು ಬೇಡಿಕೊಂಡವು. ಇದನ್ನು ಕೇಳಿ ಈಶ್ವರನು "ನಿಮ್ಮ ಈ ತೆರನಾದ ದೂರನ್ನು ನಾನು ಕೇಳೆನು, ಮೊದಲಿನ ಅರಸನು ನಿಮಗೆ ಸೇರಲಿಲ್ಲ; ಅಂದಮೇಲೆ ನಿಮ್ಮ ಕರ್ಮವನ್ನು ನೀವು ಅನುಭವಿಸಿರಿ." ಎಂದು ಬಿಗಿಯಾಗಿ ಹೇಳಿಬಿಟ್ಟನು.

ಸಾರಾಂಶ:— ನಾವು ದೇವರಿಟ್ಟಂತೆ ಇರಬೇಕು. ಅಲ್ಲದೆ ಅದನ್ನು ಜರಿದು ಬೇರೆ ಬಗೆಯಾಗಿರಲು ಬಯಸಿದರೆ, ಕಷ್ಟವು ಕಟ್ಟಿಟ್ಟದ್ದೇ. ಮತ್ತು ಬೇಡಿಕೊಳ್ಳುವ ಸಮಯ ಬಂದಾಗಲೂ ನಾವು ನೋಡಿ ಬೇಡಬೇಕು.

---

## ೧೪೯— ನಾಯಿಯೂ ಸಿಂಹವೂ.

ಒಮ್ಮೆ ಒಂದು ನಾಯಿಯು ಸಿಂಹಕ್ಕೆ:— "ಎಲೋ! ನಿನ್ನ ಜೀವನವು ಎಷ್ಟು ದುಃಖಮಯವಾಗಿದೆ! ಹಗಲೆಲ್ಲ ಹಸಿವಿನಿಂದ ಪೀಡಿತನಾಗಿ ಅಡವಿಯೆಲ್ಲ ನೀನು ತಿರುಗಾಡಬೇಕು; ತಿನ್ನಲು ಏನೂ ಸಿಕ್ಕದಾಗಲು ಶವದಂತೆ ಬಿದ್ದುಕೊಂಡಿರಬೇಕು; ನಿಜವಾಗಿಯೂ ಇದು ಬಲು ಕನಿಕರದ ಸ್ಥಿತಿಯು; ಅದೇ ನನ್ನನ್ನು ನೋಡು; ಎಷ್ಟು ಧಷ್ಟಪುಷ್ಟನಾಗಿರುವೆನು;" ಎಂದು ಆಢ್ಯತೆಯಿಂದ ನುಡಿಯಿತು. ಇದಕ್ಕೆ ಸಿಂಹವು:— "ಗೆಳೆಯಾ! ನೀನನ್ನುವದು ನಿಜ; ನಿನಗೆ ವೇಳೆ ವೇಳೆಗೆ ಕೂಳು ನೀರುಗಳು ಸಿಗುತ್ತವೆ; ಸರಿ; ಆದರೆ ಈ ಜಡವಾದ ಸರಪಳಿಯನ್ನು ಕೊರಳಲ್ಲಿ ಸಿಲುಕಿಸಿಕೊಂಡಿರುವದೇನು ನಿನ್ನನ್ನು ಬಿಟ್ಟಿದ್ದಲ್ಲ; ಆದರೆ ನನ್ನದು ಹಾಗಲ್ಲ; ವೇಳೆಗೆ ಕೂಳು ಸಿಗಲಿ, ಸಿಗದಿರಲಿ, ನಾನು ಸ್ವತಂತ್ರನೇ; ಇದರಲ್ಲಿಯೇ ನನಗೆ ಆನಂದ; ದಾಸನಾಗಿ ಸೊಗಸು ಸುರಿಯುವದಕ್ಕಿಂತ ಈಶನಾಗಿ ಹಸಿವಿನಿಂದ ಹುರಪಳಿಸುವದೇ ನನಗೆ ಮೇಲೆನಿಸುತ್ತದೆ;" ಎಂದು ಪ್ರತಿ ಉತ್ತರ ಕೊಟ್ಟಿತು.

## ೧೪೦— ತೋಳವೂ ಬಕವೂ.

ಒಂದು ತೋಳವು ಒಂದು ಟಗರನ್ನು ಮುರಿದು ತಿಂದಿತು. ಆದರೆ ತಿನ್ನುವಾಗ ಅದರ ಕುತ್ತಿಗೆಗೆ ಆ ಟಗರಿನ ಎಲವು ಸಿಕ್ಕಿಕೊಂಡಿತು. ಆಗಾದ ಅದರ ದುಃಖವನ್ನು ಏನು ಹೇಳಬೇಕು! ಒಂದೇಸವನೇ ನರಳುತ್ತ ಒದರುತ್ತ ಅಡವಿಯಲ್ಲಿ ಅಡ್ಡಾಡಹತ್ತಿತು. ಬೇರೆ ಪ್ರಾಣಿಯು ದಾರಿಯಲ್ಲಿ ಕಂಡರೆ, ಕನಿಕರದ ದನಿಯಲ್ಲಿ ತನ್ನ ದುಃಖ ಪರಿಹರಿಸಲು ಬೇಡಿಕೊಳ್ಳಹತ್ತಿತು. ತನ್ನ ದುಃಖವು ದೂರಾದರೆ ಬೇಡಿದಷ್ಟು ಹಣವನ್ನು ಕೊಡುವೆನೆಂದು ಆಲ್ಪರಿಯಹತ್ತಿತು. ಆಗೊಮ್ಮೆ ಅದಕ್ಕೆ ಒಂದು ಬಕವು ಭೆಟ್ಟಿಯಾಯಿತು. ಹಣದಾಶೆಯಿಂದ ಬಕವು ತನ್ನ ಉದ್ದ ಚಂಚುವನ್ನು ತೋಳದ ಬಾಯಿಯಲ್ಲಿ ಹಾಕಿ ಅಲ್ಲಿ ಸಿಕ್ಕಿರುವ ಎಲುವನ್ನು ತೆಗೆದು ಹಾಕಿತು. ಆ ಮೇಲೆ ತನಗೆ ಕೊಡಲಿರುವ ಹಣವನ್ನು ಕೇಳಿತು. ಇದನ್ನು ಕೇಳಿ ತೋಳವು ಕಣ್ಣು ತೆರೆದು:– "ಎಲೋ ಮೂರ್ಖಾ! ಈ ತ್ರಿಭುವನದಲ್ಲಿಯೂ ನಿನ್ನಂಥ ಹುಚ್ಚನಿರಲಿಕ್ಕಿಲ್ಲ; ಯಾಕಂದರೆ, ಎಲವು ತೆಗೆಯಲು ನನ್ನ ಬಾಯಲ್ಲಿ ನೀನು ನಿನ್ನ ಚಂಚುವನ್ನು ಸೇರಿಸಿದಾಗ ನಾನು ಆ



ದನ್ನು ಕಚ್ಚಲಿಲ್ಲ. ಇದೇ ನಿನ್ನ ಮೇಲಿನ ನನ್ನ ಉಪಕಾರವು; ಸಾಕಾಗಲಿಲ್ಲವೇ ಇಷ್ಟಕ್ಕೆ ?" ಎಂದು ನುಡಿದದ್ದೇ ಕಾಲಿಗೆ ಬುದ್ಧಿಯನ್ನು ಹೇಳಿತು.

ಸಾರಾಂಶವೇನಂದರೆ:— ಉಪಕಾರಿಗಳಿಗೆ ಅಪಕಾರ ಮಾಡುವದು ನೀಚರ ನೈಜ ಗುಣವು. ಇಂಥವರ ಕೈಯಲ್ಲಿ ಸಿಕ್ಕು ದುಃಖವಾಗದೆ ಜೀವದಿಂದುಳಿದರೆ ಗುಡ್ಡದಷ್ಟು ಮಡ್ಡು ದೊರಕಿಸಿದಂತೆಯೇ ಸರಿ.

## ೧೪೧— ನರಿಯೂ ಏದವೂ.

ಒಂದು ನರಿಯು ಈಜಿ ನದಿಯಾಚೆಗೆ ಹೋಗುವಾಗ ಸೆಳವಿಗೆ ಸಿಲುಕಿ ಬಿಡ ಮೇಲಾಗಿ ತೇಲುತ್ತ ತೇಲುತ್ತ ಒಂದು ಕೆಸರಿನ ಸ್ಥಳಕ್ಕೆ ಹೋಗಿ ಮುಟ್ಟಿತು. ಈಜಿನ ಶ್ರಮವನ್ನು ನಿವಾರಿಸಿಕೊಳ್ಳಲು ಅದು ಕೊಂಚ ಅಲ್ಲಿಯೇ ಕುಳಿತಿತು. ಆಗ ಒಂದು ಮೀನಗಳ ತಂಡವು ಬಂದು ಅದರ ಮೇಲೆ ಮೈಕಚ್ಚುತ್ತ ಚಲ್ಲಾಟವಾಡಹತ್ತಿದವು. ಅಲ್ಲಿ ಹತ್ತರವೇ ಒಂದು ಏದವು ಕುಳಿತಿತ್ತು. ಮೀನಗಳ ಈ ನಡತೆಯನ್ನು ನೋಡಿ, ಏದವು ನರಿಗೆ:— "ಅಣ್ಣಾ! ಈ ಮೀನಗಳನ್ನು ಓಡಿಸಲೋ ?" ಎಂದು ಕೇಳಿತು. ನರಿಯು:— "ಬೇಡಪ್ಪ; ಅವು ಕುಳಿತಲ್ಲಿಯೇ ಇರಲಿ! ಈವರೆಗೆ ಅವು ರಕ್ತ ಕುಡಿದು ತೃಪ್ತಿ ಪೊಂದಿವೆ; ಈ ಮೇಲೆ ಅವು ನನ್ನನ್ನು ತೊಂದರೆಪಡಿಸಲಾರವು; ಆದರೆ ಈ ತಂಡವು ಹೋಗಿ ಬೇರೊಂದು ಮತ್ತೆ ಬಂದರೆ, ಅದು ನನ್ನನ್ನು ಕಚ್ಚಿ ಕಚ್ಚಿ ಜೀವವನ್ನೇ ಹೀರಿ ಬಿಟ್ಟಾವು;" ಎಂದು ನುಡಿಯಿತು.

ತಾತ್ಪರ್ಯ:— ದೊಡ್ಡ ದುಃಖವನ್ನು ದೂರ ಮಾಡಲು ಸಣ್ಣ ಸಂಕಟವನ್ನು ಸಹನ ಮಾಡಿಕೊಳ್ಳುವದು ಜಾಣತನವು.

## ೧೪೨— ಪೆಟ್ಟಿಗೆಯೊಳಗಿನ ಇಲಿಯು.

ಒಂದು ಇಲಿಯು ಹುಟ್ಟಿದಂದಿನಿಂದ ಒಂದು ಪೆಟ್ಟಿಗೆಯಲ್ಲಿಯೇ ಇರುತ್ತಿತ್ತು. ಆ ಪೆಟ್ಟಿಗೆಯನ್ನುಳಿದು ಹೊರಗಿನ ಜಗವೇ ಅದಕ್ಕೆ ಗೊತ್ತಿರಲಿಲ್ಲ. ಒಡತಿಯು ಕೊಡುತ್ತಿರುವ ಊಟವನ್ನು ಉಂಡು ಸುಖವಾಗಿ ಅಲ್ಲಿಯೇ ತನ್ನ ಕಾಲ ಕಳೆಯುತ್ತಿತ್ತು. ಒಂದಾನೊಂದು ದಿನ ಅಕಸ್ಮಾತ್ತಾಗಿ ಅದು ಪೆಟ್ಟಿಗೆಯ ಹೊರಗೆ ಬಿದ್ದಿತು. ಕೂಡಲೇ ಅದಕ್ಕೆ, ಅಲ್ಲಿ ಇಟ್ಟಿರುವ ಉತ್ತಮವಾದ ತಿಂಡಿಯು ( ತಿನಸು ) ಕಣ್ಣಿಗೆ ಬಿತ್ತು. ಅವರಲ್ಲಿಯ ಸ್ವಲ್ಪ ಭಾಗವನ್ನು ಅದು ರುಚಿ ನೋಡಿತು. ಕೂಡಲೇ ಅದು ತನ್ನೊಳಗೆ:— "ಇಷ್ಟು ದಿನ, ಸುಖದ ಸಾರವೆಲ್ಲ ಈ ಪೆಟ್ಟಿಗೆಯಲ್ಲಷ್ಟೇ ಇದೆಯೆಂದು ನಾನು

ತಿಳಿದಿದ್ದೆನು; ಹೊರಗಿನ ಜಗದ ಮಿರುಗನ್ನೇ ನಾನರಿತಿರಲಿಲ್ಲ; ನಾನೆಷ್ಟು ಮೂರ್ಖನು;" ಎಂದುಕೊಂಡಿತು.

ಸಾರಾಂಶ:— "ಕೂಪ ಮಂಡೂಕ ವೃತ್ತಿಯು" ಅಂದರೆ ತಾನಿರುವ ಸ್ಥಲದಿಂದ ಕದಲದೇ, ಅದನ್ನುಳಿದು ಸೌಖ್ಯದ ಸೀಮೆಯೇ ಇಲ್ಲೆಂದು ತಿಳಿದಿರುವದು, ಬಲು ಮೂರ್ಖತನವು.

———————

## ೧೪೩— ನೀರಿನಲ್ಲಿ ನೆರಳು ನೋಡಿದ ಸಾರಂಗವು.

ಒಂದು ಸಾರಂಗವು ನದಿಯಲ್ಲಿ ನೀರು ಕುಡಿಯುತ್ತಿತ್ತು. ಆಗ ಅದರ ಪ್ರತಿಬಿಂಬವು ಅದಕ್ಕೆ ಕಾಣಿಸಿತು. ಆಗ ಅದಕ್ಕೆ ತನ್ನ ಸೌಂದರ್ಯದ ವಿಷಯದಲ್ಲಿ ಬಲು ಸಮಾಧಾನವೆನಿಸಿತು. ಮತ್ತೊಮ್ಮೆ ಕಾಲಿನಿಂದ ತಲೆಯವರೆಗೆ ತಿರುತಿರುಗಿ ನೋಡಿ:— "ನನ್ನ ತಲೆಯ ಮೇಲಿನ ಕೋಡಿನ ಜೋಡು ನೋಡಲಿಕ್ಕೆ ಎಷ್ಟು ಸುಂದರವಾಗಿವೆ! ಅವುಗಳಿಂದ ನನ್ನ ಮುಖಕ್ಕೆ ಬಹು ಸೊಬಗುಂಟಾಗಿದೆ! ನನ್ನ ಕಣ್ಣು ಕಮಲದಂತಿವೆ! ಮೈ ಮಿರುಗು ಹೂವಿನ ಹಾಗಿದೆ! ಈ ಎಲ್ಲವುಗಳಂತೆ ನನ್ನ ಕಾಲುಗಳೂ ಸುಂದರವಾಗಿದ್ದರೆ ಎಷ್ಟು ಅಂದವಾಗುತ್ತಿತ್ತು! ಇವನ್ನು ನೋಡಿದರೆ ನನಗೆ ನಾಚಿಕೆಯಾಗುತ್ತದೆ! ಹೀಗೆ ಬಡವಾಗಿರುವ ಕಾಲುಗಳಿಗಿಂತ ಅವಿಲ್ಲದಿರುವದೇ ಮೇಲು!" ಹೀಗೆ ತನ್ನ ಕಾಲಿನ ನಿಂದೆಯಲ್ಲಿ ಅದು ತೊಡಗಿರುವಷ್ಟರಲ್ಲಿ, ಅಲ್ಲಿಗೊಂದು ಸಿಂಹವು ಬಂದಿತು. ಸಾರಂಗದ ಮೇಲೆ ಹಾರಬೇಕೆಂದು



ಹೊಂಚು ಹಾಕಿ ಕುಳಿತಿತು. ಸಿಂಹದ ಸುಳುವು ತಿಳಿದೊಡನೆಯೇ, ಸಾರಂಗವು ಓಡತೊಡಗಿತು. ಸಿಂಹವೂ ಅದರ ಬೆನ್ನಟ್ಟಿತು. ಅದನ್ನು ತಪ್ಪಿಸಲೆಂದು ಸಾರಂಗವು ಅಡ್ಡ ಹಾದೀ ಹಿಡಿಯಿತು. ಆದರೆ ಅದರ ಅಂಕಡೊಂಕಾದ ಕೋಡುಗಳು ಕಂಟಿಯೊಂದರಲ್ಲಿ ತೊಡಕಿಬಿಟ್ಟವು. ಆಗ ಅದರ ವೇಗವು ಕುಂಠಿತವಾಯಿತು. ಹಿಂದೆಯೇ ಬಂದಿರುವ ಸಿಂಹವು ಟಣ್ಣನೇ ಸಾರಂಗದ ಮೇಲೆ ಹಾರಿತು. ಆಗ ಸಾರಂಗವು ತನ್ನೊಳಗೆ:— "ಹಾಯ! ಹಾಯ! ನಾನು ಹಳಿಯುತ್ತಿರುವ ಕಾಲುಗಳು ನನ್ನನ್ನು ಸಂಕಟಕ್ಕೆ ಸಿಲುಕಿಸದೆ ನನ್ನನ್ನು ಇಲ್ಲಿಯವರೆಗ ತಂದವು! ಆದರೆ ನಾನು ಹೊಗಳಿದ ಕೋಡುಗಳೇ ಈಗ ನನ್ನ ಜೀವಕ್ಕೆ ಮುಳುವಾದವು!" ಎಂದು ಮರುಗುತ್ತ ಮರಣಹೊಂದಿತು.

ತಾತ್ಪರ್ಯ:— ನಾವು ಸೌಂದರ್ಯದ ಮೋಹಕ್ಕೆ ಬಲಿಬೀಳದೆ ಉಪಯೋಗದ ಕಡೆಗೇ ಹೆಚ್ಚು ಲಕ್ಷ ಕೊಡಬೇಕು.

---

## ೧೪೪:— ಪ್ರವಚನಕಾರನೂ ಶ್ರೋತೃಗಳೂ.

ಹಿಂದಕ್ಕೆ ಗ್ರೀಸ ದೇಶದಲ್ಲಿ "ಡಿಮೋಡ್ಸ" ಎಂಬ ಹೆಸರಿನ ಹೆಸರಾದ ಪ್ರವಚನಕಾರನು ಆಗಿಹೋದನು. ಒಮ್ಮೆ ಅವನು ಒಂದು ಸಭೆಯಲ್ಲಿ ಮಾತನಾಡುತ್ತಿರುವಾಗ ಎಲ್ಲ ಶ್ರೋತೃಗಳೂ ಅವನ ವ್ಯಾಖ್ಯಾನದ ಕಡೆಗೆ ಲಕ್ಷ ಕೊಡದಾದರು. ಅವರ ಲಕ್ಷವನ್ನು ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ಅವನು ಮಾಡಿದ ಯತ್ನಗಳೆಲ್ಲ ನಿಷ್ಫಲವಾದವು. ಹತ್ತರದಲ್ಲಿಯೇ ಕೆಲವು ಹುಡುಗರು ಆಡುತ್ತಿರುವದರ ಕಡೆಗೆ ಅವರೆಲ್ಲರ ದೃಷ್ಟಿಯಿತ್ತು. ಆಗ ಡಿಮೋಡ್ಸನು ಒಂದು ಕತೆಯನ್ನು ಹೇಳಹತ್ತಿದನು. ಅವನು:— "ಒಮ್ಮೆ, ಬೃಹಸ್ಪತಿಯು, ಒಂದು ಮೀನವು ಮತ್ತು ಒಂದು ಗುಬ್ಬಿಯು ಹೀಗೆ ಮೂವರು ಪ್ರವಾಸಕ್ಕೆಂದು ಹೊರಟರು;" ಈ ಶಬ್ದಗಳು ಕಿವಿಯಲ್ಲಿ ಬೀಳುತ್ತಲೇ ಎಲ್ಲ ಶ್ರೋತೃಗಳ ಲಕ್ಷವು, ಒಮ್ಮೆಲೇ ಡಿಮೋಡ್ಸನ ಕಡೆಗೆ ತಿರುಗಿತು. ಮತ್ತು ಅವರು ಉತ್ಸಾಹಪೂರ್ವಕವಾಗಿ ಆ ಕತೆಯನ್ನು ಕೇಳಹತ್ತಿದರು. ಡಿಮೋಡ್ಸನು:— "ಹಾದೀ ಹೋಗಹೋಗುತ್ತ ಆ ಮೂವರು ಒಂದು ನದಿಯ ಬಳಿಗೆ ಬಂದರು; ಮೀನವು ಈಜಿ ಆ ದಂಡೆಗೆ ಹೋಯಿತು; ಗುಬ್ಬಿಯು ನದಿಯ ಪಾರಾಯಿತು;" ಇಷ್ಟಕ್ಕೇ ಕತೆಯನ್ನು ನಿಲ್ಲಿಸಿ ಅವನು ಮೊದಲಿನ ವಿಷಯದ ಕಡೆಗೆ ಹೊರಳಿದನು. ಇದನ್ನು ಕೇಳುತ್ತಲೇ ಆ ಜನಸಮುದಾಯದಲ್ಲಿ ಒಮ್ಮೆಲೇ ದೊಡ್ಡ ಗಲಭೆಯೇ ಎದ್ದಿತು. ಅವನಿಂನು ಮೇಲಕ್ಕೇಳುತ್ತ:— "ಏನು ಸ್ವಾಮಿ! ಮೀನ ಗುಬ್ಬಿಗಳು ನದಿಯನ್ನು ದಾಟಿದವು; ಆದರೆ ಬೃಹಸ್ಪತಿಯ ಅವಸ್ಥೆಯೇನಾಯಿತು? ಅವನು ನದಿಯನ್ನು ಹೇಗೆ ದಾಟಿದನು?" ಎಂದೆ

ಷ್ಟೋಬಗೆಯಾಗಿ ಕತೆಯ ಮಾತನ್ನೇ ಕೇಳಹತ್ತಿದರು. ಇದಕ್ಕೆ ಡಿಮೋಡ್ಸನು:– “ ಬೃಹಸ್ಪತಿಯು ನದಿಯನ್ನು ಇನ್ನೂ ದಾಟಿ ಹೋಗೇಇಲ್ಲ. ಹಾಗೇ ತೀರದ ಮೇಲೆ ಕುಳಿತಿರುವನು; ಜನಗಳು ಹುಚ್ಚುಚ್ಚು ಹರಟೆಗಳನ್ನು ಕೇಳುವದನ್ನು ಬಿಟ್ಟು ಹೆಚ್ಚಿನ ವಿಷಯಗಳ ಕಡೆಗೆ ಚನ್ನಾಗಿ ಲಕ್ಷ ಕೊಡದ ಹೊರತು ಅವನು ನದಿಯಾಚೆಗೆ ಹೋಗುವದಿಲ್ಲಂತೆ; ” ಎಂದು ಹೇಳಿದನು.

ಸಾರಾಂಶವೇನಂದರೆ:— ಸಾಮಾನ್ಯ ಜನಗಳು ಮಹತ್ವದ ಮಾತುಗಳನ್ನು ಕೇಳುವದರ ಬದಲು ಮನೋರಂಜಕ ಕತೆಗಳನ್ನು ಕೇಳುವಲ್ಲಿ ಹೆಚ್ಚು ತತ್ಪರರಾಗುತ್ತಾರೆ.

---

## ೧೪೫:— ನರಿಯೂ ಕಾಗೆಯೂ.

ಕಾಗೆಯೊಂದು ಬಾಯಲ್ಲಿ ಮಾಂಸದ ಕರಣಿಯನ್ನು ಕಚ್ಚಿಕೊಂಡು ಮೇಲೆ ಹಾರಿತು; ಒಂದು ಮರವೇರಿ ಕುಳಿತ್ರಿತು. ಇದನ್ನು ನೋಡಿ ಒಂದು ನರಿಯು, ಆ ಮರದ ಅಡಿಯನ್ನು ಸಾರಿ, ಕಾಗೆಯ ಬಾಯಲ್ಲಿಯ ಮಾಂಸವನ್ನು ಎತ್ತಿಹಾಕಬೇಕೆಂದು ಯೋಚಿಸಿತು. ಆಗ ಕಾಗೆಯ ವರ್ಣನೆಗೆ ಆರಂಭವಾಯಿತು. ನರಿಯು:— “ ಅಹಹ! ಎಲೋ ಪಕ್ಷಿಯೇ! ನೀನು ಬಲು ಚಲುವಾಗಿರುವೆ! ನಿನ್ನಂಥವರು ಅನ್ಯರಾರಿಲ್ಲ! ನಿನ್ನ ರೆಕ್ಕೆಗಳ ಸೊಬಗೇನು! ಮೃದುಲತನವೇನು! ಕೊರಳ ಶೋಭೆಯೆಷ್ಟು ! ನಿನ್ನನ್ನು ನೋಡಿದಷ್ಟು ಮನವು ಮತ್ತೆ ಮತ್ತೆ ನೋಡಲೆಳಿಸುತ್ತದೆ ! ಈ ಶರೀರಸೊಬಗಿನಿಂದ ನಿನ್ನ ಸ್ವರವು ಕೋಮಲವಿರಲು ಸಾಕು! ನಾನನ್ನುವಂತೆ ಸ್ವರ



ವೂ ಸ್ವಾದುವಾಗಿದ್ದರೆ ನಿನ್ನನ್ನು ಹೋಲುವವರು ಅನ್ಯರು ಇಲ್ಲವೇ ಇಲ್ಲ". ಈ ಹೊಗಳಿಕೆಗೆ ಹಿಗ್ಗಿ ಕಾಗೆಯು, ತನ್ನ ಸ್ವರದ ವಿಷಯಕ್ಕಿರುವ ನರಿಯ ಸಂಶಯವನ್ನು ದೂರ ಮಾಡಬೇಕೆಂದು, ಬಾಯಿ ತೆರೆಯಿತು. ಕೂಡಲೇ ಮಾಂಸದಕರಣಿಯು ಕೆಳಗೆ ಬಿದ್ದಿತು. ಆಗ ನರಿಯು ಮಾಂಸದ ಕರಣಿಯನ್ನು ತೆಗೆದುಕೊಂಡು ಕಾಗೆಯ ಮೂರ್ಖತನಕ್ಕೆ ಮನದಣಿ ನಗುತ್ತ ತನ್ನ ಗವಿಯ ಹಾದೀ ಹಿಡಿಯಿತು.

ಸಾರಾಂಶ:— ಹುರುಳಿಲ್ಲದ ಹೊಗಳಿಕೆಗೆ ಮರುಳಾಗಿ ವಂಚಕನ ವಶವಾದರೆ, ಮೇಲಿನಂತೆ ಮನುಷ್ಯನು ಮೋಸ ಹೊಂದುವದರಲ್ಲಿ ಸಂಶಯವಿಲ್ಲ.

———————

## ೧೪೬:— ಭರಮಪ್ಪನೂ ಒಕ್ಕಲಿಗನೂ.

ಹೊಲದಲ್ಲಿ ಸೊಪ್ಪೆಯನ್ನು ಕೊಯ್ಯುವಾಗ, ಅದರ ತುದಿಯು ಮೊನೆಯಾಗಿರುತ್ತದೆ. ಆದ್ದರಿಂದ ಅನೇಕ ವೇಳೆ ಕೊಯ್ಯುವವರು ಕಷ್ಟಹೊಂದುತ್ತಾರೆ. ಕೊಯ್ತದ ನೋವಿನಿಂದ ನರಳುತ್ತಾರೆ, ಹೀಗೆ ಕೊಯ್ಯುವವರಿಗೆ ಆಗಬಾರದೆಂದು, ಒಬ್ಬ ಒಕ್ಕಲಿಗನು ಒಂದು ದಿನ ಭರಮಪ್ಪನಲ್ಲಿ ಬೇಡಿಕೊಂಡನು; ಸೊಪ್ಪೆಯ ಕೊನೆಯನ್ನು ಮಿದುವಾಗಿ ಮಾಡೆಂದನು., ಈ ಪ್ರಾರ್ಥನೆಯನ್ನು ಮನ್ನಿಸಿ, ಭರಮಪ್ಪದೇವರು ಹೊಲದಲ್ಲಿಯ ಜೋಳದ ದಂಟಿನ ಹರತವನ್ನು ಕಳೆದು ಬಿಟ್ಟನು. ಆಗೇನು! ಪಕ್ಷಿಗಳ ಕಲಕಲಾಟವು ಬೆಳೆಯಿತು; ಹೊಲಕ್ಕೆ ಹೊಲವೇ ಹಾಳಾಯಿತು; ಸೊಪ್ಪೆಯು ಮೊನೆಯಾಗಿರುವಿಕೆಯು ಇದ್ದಾಗ, ಪಕ್ಷಿಗಳು ಹೆದರಿ ಹೊಲದಲ್ಲಿ ಹಾಯಲು ಹಿಂದು ಮುಂದು ನೋಡುತ್ತಿದ್ದವು. ಈಗ ಅವನ್ನು ಕೇಳುವರಾರು! ಈ ಸ್ಥಿತಿಯನ್ನು ಕಂಡು ಒಕ್ಕಲಿಗನು:— " ನನ್ನ ನಾಲ್ಕು ಜನರ ನೋವು ನೋಡಿ, ನೊಂದು, ನಾನು ಮಾಡಿದ ಈ ಪ್ರಯತ್ನವು ನನ್ನನ್ನೇ ಮುರಿಯಿತು. " ಎಂದು ಕಳವಳಗೊಂಡನು

ಒಟ್ಟಾರೆ ಹೇಳುವದೇನಂದರೆ:— ಈಶ್ವರನು ನಿರ್ಮಿಸಿದ ವಸ್ತುಗಳಲ್ಲಿ ಹೆಚ್ಚು ಕಡಿಮೆ ಮಾಡುವದಕ್ಕೆ ಮನಸ್ಸು ಮಾಡದೆ, ಆ ಪದಾರ್ಥಗಳು ಇದ್ದಂತೆಯೇ ತನ್ನ ಉಪಯೋಗಕ್ಕೆ ಬರುವಂತೆ ಮಾಡಿಕೊಳ್ಳಲು ಯತ್ನಿಸುವದೇ ಮನುಷ್ಯಗೆ ಶ್ರೇಯಸ್ಕರವು.

———————

## ೧೪೭:— ಹೆಣ್ಣು ಗರುಡವೂ ಹೆಣ್ಣು ನರಿಯೂ.

ಒಂದು ಹೆಣ್ಣು ಗರುಡವು ತನ್ನ ಮರಿಗಳಿಗೆ ಏನಾದರೂ ತಿನಿಸು ಹುಡುಕುತ್ತಿತ್ತು. ಆಗ ಅದರ ದೃಷ್ಟಿಗೆ ಒಂದು ನರಿಮರಿಯು ಬಿದ್ದಿತು. ಅದನ್ನು ಪಂಜರದಿಂದ ಹಿಡಿದದ್ದೇ ಅದು ಎತ್ತಿಕೊಂಡು ಹೋಗುವ ಹವಣಿಕೆಯಲ್ಲಿದ್ದಿತು. ಇದನ್ನು ದೂರಿಂದಲೇ ನೋಡಿದ ಹೆಣ್ಣು ನರಿಯು ಧಾವಿಸಿ ಬಂದು ಹೆಣ್ಣು ಗರುಡಕ್ಕೆ ಕನಿಕರದ ಸ್ವರದಲ್ಲಿ ಅಂದಪ್ಪು– “ಅವ್ವಾ! ಇದೊಂದೇ ಮರಿಯು ನನಗೆ! ಇದನ್ನು ಒಯ್ದು ನನ್ನ ಒಡಲಲ್ಲಿ ಕಿಚ್ಚನ್ನು ಸುರಿಯಬೇಡ! ನನಗೆ ಮರಿಯ ಭಿಕ್ಷೆಯನ್ನಿತ್ತರೆ, ನನ್ನ ಮೇಲೆ ಅನಂತ ಉಪಕಾರವಾಗುತ್ತದೆ!” ಎಂದು ನುಡಿಯಿತು. ಆದರೆ ಇದೆಲ್ಲ ವ್ಯರ್ಥವಾಯಿತು. “ನಾನು ಎತ್ತರದ ಮರದ ಮೇಲಿರುವೆನು, ನನಗೆ ಈ ನರಿಯಿಂದೇನಾಗಬೇಕು!” ಎಂದು ಯೋಚಿಸಿದ್ದೇ. ಆ ಹೆಣ್ಣು ಗರುಡವು ಆ ನರಿಮರಿಯನ್ನು ಒಯ್ದು ತನ್ನ ಮರಿಗಳಿಗೆ ಹರಿದು ಹಂಚಿಬಿಟ್ಟಿತು. ತನ್ನ ದಯೆಯ ಯಾಚನೆಯು ವ್ಯರ್ಥವಾಗಿದ್ದು ನೋಡಿ ಹೆಣ್ಣು ನರಿಯು ಸಿಟ್ಟಿನಿಂದ ಕಂಗಾಲಾಯಿತು. ಏನೊಂದುಪಾಯದಿಂದ ಗರುಡಪಕ್ಷಿಯ ಸೇಡು ತೀರಿಸಿಕೊಳ್ಳಬೇಕೆಂದು ಅದು ವಿಚಾರ ಮಾಡಿತು. ಹೀಗೆಂದು ಅತ್ತಿತ್ತ ನೋಡುತ್ತಿರುವಾಗ ಆ ನರಿಗೆ ಒಂದೆಡೆಯಲ್ಲಿ ಉರಿಯು



ಕಣ್ಣಿಗೆ ಬಿತ್ತು. ಅದು ಅಲ್ಲಿಗೆ ಹೋಗಿ ಒಂದು ಕಿಡಿಯನ್ನು ತೆಗೆದುಕೊಂಡು ಹೆಣ್ಣು ಗರುಡವಿದ್ದ ಗಿಡದ ಬುಡಕ್ಕೆ ಬಂದು, ಒಣ ಎಲೆಗಳನ್ನು ಕೂಡಿಹಾಕಿ, ಅದಕ್ಕೆ ಬೆಂಕಿ ಹಚ್ಚಿತು. ಮರವು ಒಣಗಿದ್ದದರಿಂದ ಅದಕ್ಕೂ ಬೆಂಕಿಯು ಹತ್ತಿ ಧಗಧಗಿಸಹತ್ತಿತು. ಆಗ ಆ ಮರದಲ್ಲಿದ್ದ, ಪುಚ್ಚ ಬಲಿಯದೇ ಹಾರಲಿಕ್ಕೆ ಬಾರದ ಗರುಡನ ಮರಿಗಳು ಉರಿಯ ಜಳ ತಾಕಿ ಪಟಪಟ ಸತ್ತುಬಿದ್ದವು. ಹತ್ತರವೇ ಕುಳಿತಿರುವ ನರಿಯು ಆನಂದದಿಂದ ಅವನ್ನು ನುಂಗಿ ನೀರುಹಿಡಿಯಿತು.

ಸಾರಾಂಶ:— ದ್ರವ್ಯದ ಅಥವಾ ಶಕ್ತಿಯ ಮದದಿಂದ ಯಾರನ್ನೂ ಲೆಕ್ಕಿಸದೆ ಅನ್ಯರ ಹಿಂಸೆಯನ್ನು ಮನುಷ್ಯನು ಮಾಡಬಾರದು. ಯಾವನೊಬ್ಬನು ಎಷ್ಟು ಸಾಧುವಾಗಿದ್ದರೂ, ಯಾವ ವೇಳೆಗೆ ಯಾವ ರೀತಿಯಿಂದ ಸೇಡು ತೀರಿಸಿಕೊಳ್ಳುವನೆಂಬದರ ನಿಯಮವಿಲ್ಲ.

———————

## ೧೪೪— ಜಾಲಗಾರನೂ ಗುಬ್ಬಿಯೂ.

ಒಬ್ಬ ಜಾಲಗಾರನು ಒಂದು ಗುಬ್ಬಿಯು ಮೀನ ಹಿಡಿಯುತ್ತಿರುವದನ್ನು ನೋಡಿದನು. " ಮೀನ ಹಿಡಿದು ಹೊಟ್ಟೇ ಹೊರಕೊಳ್ಳುವ ಅಧಿಕಾರವು ಜಾಲಗಾರನೊಬ್ಬನಿಗಿಲ್ಲದೆ, ಬೇರೆಯವರಿಗಿಲ್ಲ; ಹೀಗಿರಲು ಆ ಅಧಿಕಾರವು ಅನ್ಯರ ಕೈಯಲ್ಲಿ ಹೋಗುವದು ಲಾಂಛನಾಸ್ಪದವು;" ಹೀಗೆಂದವನೇ ಆ ಜಾಲಗಾರನು ಗುಬ್ಬಿಯನ್ನು ಹಿಡಿಯುವ ಬಲೆಯೊಂದನ್ನು ಹೆಣೆಯಲು ಹತ್ತಿದನು. ಆದರೆ ಆ ಬಲೆಯ ಉಪಯೋಗವಾಗದೇ, ಬಲೆಯನ್ನು ಹರಿದು ಗುಬ್ಬಿಯು ಹಾರಿಹೋಯಿತು. ಆಗ ಜಾಲಗಾರನು ತನ್ನಲ್ಲಿ ತಾನು:— " ನಾನು ಗುಬ್ಬಿ ಹಿಡಿಯುವವನಲ್ಲ! ಮೀನ ಹಿಡಿಯುವವನು! ಹೀಗಿದ್ದು ನಾನು ಅಲ್ಲದ ಕೆಲಸದ ಹವ್ಯಾಸಕ್ಕೆ ಬಿದ್ದೆನು! " ಎಂದು ಪಶ್ಚಾತ್ತಾಪಬಟ್ಟನು. ಆ ಮೇಲೆ ಮುಂದೆಂದೂ, ತನ್ನ ಕೆಲಸವನ್ನುಳಿದು ಬೇರೆ ಕೆಲಸಕ್ಕೆ ಕೈಹಾಕದೆ, ಮೀನ ಹಿಡಿಯುವದನ್ನೇ ನಡೆಸಹತ್ತಿದನು.

ತಾತ್ಪರ್ಯ:— ತನ್ನ ಕೈಮೀರಿದ ಕೆಲಸಕ್ಕೆ ಜಾಣನಾದವನು ಎಂದೂ ಕೈಹಾಕಬಾರದು.

———————

## ೧೪೯— ನವಿಲುಗರಿಗಳನ್ನು ಹಚ್ಚಿಕೊಂಡ ಹಾಳೀಹದ್ದು.



ಒಮ್ಮೆ ಒಂದು ಹಾಳೀಹದ್ದು, ತನ್ನ ಕುಲವು ಕೀಳವೆಂದು ಯೋಚಿಸಿತು. ತಾನು ಉಚ್ಚ ಕುಲದಲ್ಲಿ ಜನಿಸಿದ್ದೆಂದೆನಿಸಿಕೊಳ್ಳಲಪೇಕ್ಷೆಸಿತು. ಆಗದು ಕೆಲವು ನವಿಲುಗರಿಗಳನ್ನು ಆರಿಸಿತಂದು, ತನ್ನ ಪುಚ್ಛದಲ್ಲಿ ಸೇರಿಸಿಕೊಂಡಿತು. ಆ ಮೇಲೆ, ಅದು ನವಿಲುಗಳ, ಒಂದು ಹಿಂಡಿನಲ್ಲಿ ಹೊಕ್ಕಿತು. ಆದರೆ ನವಿಲುಗಳು ಇದೊಂದು ಹಾಳಿಯ ಹದ್ದೆಂದು ತಿಳಿದು, ಅದರ ಸುತ್ತಲೂ ಸೇರಿ, ಚಂಚುವಿನಿಂದ ಅದಕ್ಕೆ ಚುಚ್ಚಿ ಚುಚ್ಚಿ, ಅದನ್ನು ಹೊರದೂಡಿಬಿಟ್ಟವು. ಆಗ ಸಂಕಟಪಡುತ್ತ ಹದ್ದು ತನ್ನ ಕುಲದವುಗಳಲ್ಲಿ ಸೇರಲು ಪ್ರಯತ್ನಿಸಿತು. ಆದರೆ ಅವೂ ಕೂಡ ಈ ಹದ್ದನ್ನು, ಇದರ ಸೋಗುಗಾರ್ತೆತನವನ್ನು ತಿಳಿದು, ಒಳಗೆ ಕರೆದುಕೊಳ್ಳಲೇ ಇಲ್ಲ. ಅಲ್ಲದೇ ಒಂದು ಹದ್ದು ಮುಂದೆ ಬಂದು:— " ಹುಚ್ಚಾ ! ಜನಿಸಿದ ಜಾತಿಯನ್ನು ಬಿಟ್ಟು ಬೇರೆ ಬಣದಲ್ಲಿ ಬೆರೆಯಲು ಹೋಗುವದು ಈಶ್ವರೇಚ್ಛೆಯ ವಿರುದ್ಧವು; ಹಾಗೆ ಮಾಡಿದ್ದರ ಫಲವನ್ನೀಗ ನೀನು ಉಣ್ಣುವಿ; " ಎಂದು ಬುದ್ಧೀ ಹೇಳಿತು.

ಸಾರಾಂಶ:-- " ದೇವರು ನಮ್ಮನ್ನಿಟ್ಟಲ್ಲಿ ನಾವು ಇರಬೇಕು. ತನ್ನವರನ್ನು ಹೀನರೆಂದು ಹಳಿದು ಬೇರೆಯವರಲ್ಲಿ ಬೆರೆಯ ಹೋದರೆ, ಬೇರೆಯವರಂತೂ ನಮ್ಮನ್ನು ತಮ್ಮಲ್ಲಿ ಬರಮಾಡಿಕೊಳ್ಳುವದೇ ಇಲ್ಲ. ಅಲ್ಲದೆ ನಮ್ಮವರೂ ನಮ್ಮನ್ನು ಹೊರ ದೂಡುವರು. ಹೀಗಾಗಿ ನಾವು ಸಂಕಟಕ್ಕೆ ಸಿಲುಕುವೆವು.

———

## ೧೫೦-- ಒಕ್ಕಲಿಗನೂ ಗಿಡಗವೂ.

ಒಂದು ಗಿಡಗವು ಒಂದು ಪಾರಿವಾಳದ ಬೆನ್ನು ಹತ್ತಿತ್ತು. ಆದರೆ ಅಕಸ್ಮಾತ್ತಾಗಿ ಅದು ಒಬ್ಬ ಒಕ್ಕಲಿಗನ ಬಲೆಯಲ್ಲಿ ಬಿದ್ದಿತು. ಆಗ ಗಿಡಗವು ಒಕ್ಕಲಿಗನಿಗೆ:-- " ಅಪ್ಪಾ! ನಿನ್ನನ್ನು ನಾನೇನು ನೋಯಿಸಲಿಲ್ಲ! ಇದನ್ನರಿತು ನನ್ನನ್ನು ನೀನು ಬಿಟ್ಟು ಬಿಡು! " ಎಂದು ದಯೆಯ ದನಿಯಲ್ಲಿ ಬೇಡಿಕೊಂಡಿತು. ಆಗ ಒಕ್ಕಲಿಗನು ಪ್ರತಿ ಯಾಗಿ:— " ಎಲೋ! ಆ ಪಾರಿವಾಳವು ನಿನಗೇನು ಮಾಡಿತ್ತು! ಯಾವ ನ್ಯಾಯವು ನಿನ್ನನ್ನು ಪಾರಿವಾಳವನ್ನು ಹಿಡಿಯುವಲ್ಲಿ ತೊಡಗಿಸಿತ್ತೋ, ಅದೇ ನ್ಯಾಯವು ನನ್ನನ್ನು ನಿನ್ನನ್ನು ಹಿಡಿಯುವಲ್ಲಿ ತೊಡಗಿಸಿತು; " ಎಂದು ಆ ಗಿಡಗಕ್ಕೆ ಉತ್ತರಕೊಟ್ಟನು.

ತಾತ್ಪರ್ಯ:— ಮನುಷ್ಯನು ಮಾತಾಡುವಾಗ್ಗೆ ಎಚ್ಚರದಿಂದಾಡಬೇಕು. ಸ್ವಲ್ಪ ತಪ್ಪಿದರೆ ತಾನಾಡಿದ್ದು ತನ್ನ ಮೇಲೇ ಒಮ್ಮೊಮ್ಮೆ ತಿರುಗುತ್ತಿರುತ್ತದೆ.

———

## ೧೫೧— ಒಕ್ಕಲಿಗನೂ ಹೊಳೆಯೂ.

ಒಬ್ಬ ಒಕ್ಕಲಿಗನಿಗೆ ಒಂದು ಹೊಳೆಯನ್ನು ದಾಟಬೇಕಿತ್ತು. ನೀರು ಆಳವಿರ ದಿರುವಲ್ಲಿ ಇಳಿಯಬೇಕೆಂದು ಹೊಳೆಯ ಮೇಲೆ ಕೆಳಗೆ ಅವನು ಅಲೆದಾಡ ಹತ್ತಿದನು. ಕೆಲಹೊತ್ತಿನ ಮೇಲೆ ಆ ಒಕ್ಕಲಿಗನು— " ಶಾಂತವಾಗಿ ಸಾಗಿರುವಲ್ಲಿ ನೀರು ಆಳವಿರು ವದೆಂದೂ, ಸಪ್ಪಳವಾಗುತ್ತಿರುವಲ್ಲಿ ನೀರು ಸ್ವಲ್ಪೇ ಇರುವವೆಂದೂ " ಉದ್ಗಾರ ತೆಗೆದನು.

ಸಾರಾಂಶ:— ಮಾತುಗುಳಿಯಲ್ಲಿ ಮೋಸವಿರುವದಿಲ್ಲ. ಮೌನವಾಗಿರುವವನು ಮಾತ್ರ ಯಾವಕಾಲಕ್ಕೆ ಯಾರನ್ನು ನುಂಗಿ ನೀರು ಹಿಡಿಯುವನೆಂಬ ನಿಯಮವಿರುವ ದಿಲ್ಲ.

———

## ೧೫೨— ನರಿಯೂ ಕುರಿಯೂ.

ಒಂದು ನರಿಯು ಒಂದು ಬಾವಿಗೆ ನೀರು ಕುಡಿಯಲು ಹೋಗಿ ಕಾಲುಜಾರಿ ಅದರಲ್ಲಿ ಬಿದ್ದಿತು. ಮೇಲೆ ಬರಲು ಮಾಡಿದ ಆದರ ಯತ್ನಗಳೆಲ್ಲ ನಿಷ್ಫಲವಾದವು. ಇಷ್ಟರಲ್ಲಿ ಒಂದು ಕುರಿಯು ಅಲ್ಲಿಗೆ ಬಂತು. ಕೆಳಗೆ ಬಾವಿಯಲ್ಲಿ ನೋಡಿ ನರಿಗೆ:— "ಹೇಗಯ್ಯಾ! ನೀರು ಚನ್ನಾಗಿವೆಯೇ ?" ಎಂದು ಕೇಳಿತು. ಇದಕ್ಕೆ ಆ ನರಿಯು:— "ಅಹಹ! ಏನು ಹೇಳಲಿ! ಅಮೃತವಾಗಿವೆ ನೀರು! ಕುಡಿಕುಡಿದಂತೆ ಮತ್ತೆ ಕುಡಿಯುವಂತೆ ಬಯಕೆಯಾಗುತ್ತದೆ ! ಇಲ್ಲಿಂದ ಕದಲಬಾರದೆಂದೇ ನನಗೆ ಅನಿಸಹತ್ತಿದೆ! " ಎಂದು ಆನಂದದ ಆವಿರ್ಭಾವ ತೋರಿಸಿ ನುಡಿಯಿತು. ಇದನ್ನು ಕೇಳಿ ಕುರಿಯೂ ಒಳಕ್ಕೆ ದುಮುಕಿತು. ಆಗ ನರಿಯು ಉದ್ವಾದ ಅದರ ಕೋಡುಗಳ ಮೇಲೆ ಕಾಲಿಟ್ಟು ಮೇಲಕ್ಕೆ ಹಾರಿ ಬಂದು ಬಿಟ್ಟಿತು.



ಕುರಿಯು ಮಾತ್ರ ನೀರು ಗುಟುಕರಿಸುತ್ತ ಅಲ್ಲಿಯೇ ಪ್ರಾಣಬಿಟ್ಟಿತು.

ಸಾರಾಂಶ:— ಎಲ್ಲರೂ ಮಾಡುವದು ತಮ್ಮ ಹೊಟ್ಟೆಗಾಗಿ. ಅನ್ಯರ ಹಿತಕ್ಕೆ ಹೆಣಗುವವರು ಅಪರೂಪ. ಇಷ್ಟೇ ಅಲ್ಲ; ತಮ್ಮ ಹಿತವಾಗುತ್ತಿದ್ದಲ್ಲಿ ಅನ್ಯರ ನಾಶವಾಗುತ್ತಿ

ದ್ದರೂ, ಮನುಷ್ಯರು ಅದಕ್ಕೆ ಹೇಸುವದಿಲ್ಲ. ಇದು ಸರ್ವ ಸಾಮಾನ್ಯ ನಿಯಮವು. ಆದ್ದರಿಂದ ಪರರ ಸವಿ ನುಡಿಗಳಿಗೆ ಮರುಳಾಗಿ ಒಮ್ಮೆಲೇ ಅವರಲ್ಲಿ ನಂಬಿಕೆಯನ್ನಿಡುವದು ಜಾಣರ ಲಕ್ಷಣವಲ್ಲ.

---

## ೧೫೪— ಗುಬ್ಬಿಯೂ ಪಾರಿವಾಳವೂ.

ಒಮ್ಮೆ ಗುಬ್ಬಿಪಾರಿವಾಳಗಳು ಮಾತಾಡುತ್ತ ಕುಳಿತಿದ್ದವು. ಆಗ ಗುಬ್ಬಿಯು ಪಾರಿವಾಳಕ್ಕೆ:— "ಏನೇ! ನಿನ್ನ ಮರಿಗಳ ಕಳವು ಮೇಲೆ ಮೇಲೆ ಆಗುತ್ತಿದ್ದರೂ, ಇದ್ದಲ್ಲಿಯೇ ನೀನು ಗೂಡು ಕಟ್ಟುವಿಯಲ್ಲ! ಏನು ಹುಚ್ಚುತನವಿದು!" ಎಂದಂದಿತು. ಇದಕ್ಕೆ ಪಾರಿವಾಳವು ಮರುಳಿ:— "ಗುಬ್ಬಮ್ಮಾ! ಏನು ಹೇಳಲಿ! ನನ್ನ ಸ್ವಭಾವವೇ ಹಾಗಿದೆ! ನಾನೇನು ಮಾಡಲಿ! ಪರರಿಗೆ ನನ್ನಿಂದ ಪೀಡೆಯಾಗಬಾರದೆಂದೂ, ಪರರು ನನ್ನನ್ನು ಪೀಡಿಸಬಾರದೆಂದೂ ನನ್ನ ಬಯಕೆಯು!" ಎಂದು ಗುಬ್ಬಿಗೆ ನುಡಿಯಿತು.

ಒಟ್ಟಾರೆಂದರೆ ನಂಬಿಗೆಯಿಂದ ನಂಬಿಗೆಯು ಹೆಚ್ಚುತ್ತದೆಂಬುದು ನಿಜವು. ಆದರೆ ಇಂಥಲ್ಲಿ ಇತ್ತಂಡದವರೂ ನಂಬಿಗೆಯವರಿರಬೇಕು.

---

## ೧೫೫— ಗಿಳಿಯೂ ಗಿಡಗವೂ.

ಒಂದು ಗಿಡಗವು ಒಂದು ಗಿಳಿಗೆ:— "ಎಲೆ! ನಿನ್ನ ಚಂಚುವು ಹೀಗೆ ಬಲವಾಗಿಯೂ ನೀನು ಫಲಗಳ ಮೇಲೆಯೇ ನಿನ್ನ ಜೀವವನ್ನು ಸಾಗಿಸುವದು ನನಗೆ ಸರಿ ತೋರುವದಿಲ್ಲ; ನನ್ನಂತೆ ನೀನೂ ಮಾಂಸ ತಿನ್ನುವದು ಒಳಿತು;" ಎಂದು ಉಪದೇಶ ಹೇಳಿತು. ಗಿಳಿಯು ಸಿಟ್ಟಿಗೆದ್ದು ಇದಕ್ಕೆ ಪ್ರತಿ ಚಕಾರ ಶಬ್ದವಾಡಲಿಲ್ಲ ಮುಂದೆ ಆ ಗಿಳಿಯು ಒಂದು ಪಾರಿವಾಳದ ಮನೆಯಮುಂದೆ ಹಾರಿಹೋಗುತ್ತಿರುವಾಗ ಆ ಗಿಡಗವನ್ನು ತೂಗಹಾಕಿದ್ದನ್ನು ನೋಡಿತು. ಕಂಡು ಕನಿಕರಪಟ್ಟು ಗಿಳಿಯು:— "ಎಲೋ! ಪಾರಿವಾಳಗಳನ್ನು ತಿಂದು ಮೆರೆಯುವದನ್ನು ಬಿಟ್ಟು, ನನ್ನಂತೆ ನೀನೂ ಫಲಹುಗಳನ್ನು ತಿನ್ನುತ್ತಿದ್ದರೆ, ನಿನಗೆ ಈ ತರಹದ ಸ್ಥಿತಿಯು ಬರುತ್ತಿದ್ದಿಲ್ಲ," ಎಂದು ನುಡಿಯಿತು.

ಸಾರಾಂಶ:— ತಮ್ಮ ಹೆಚ್ಚಳದ ಕಾಲಕ್ಕೆ ಪರರಿಗೆ ಹಾಸ್ಯಮಾಡುವವರು, ತಮಗೇ ಸಂಕಟ ಬಂದಾಗ ತಾವು ಅನ್ಯರ ನಗೆಗೀಡಾಗುತ್ತಾರೆ. ಆದ್ದರಿಂದ ಮನುಷ್ಯನು ತನ್ನ ಮೇಲ್ಮೆಯಕಾಲದಲ್ಲಿ ಮನ ಬಂದಂತೆ ಮೆರೆಯಬಾರದು.

---

## ೧೫೫— ನವಿಲೂ ಬಕವೂ.



ಒಂದು ನವಿಲು ಒಂದು ಬಕವನ್ನು ಕಂಡಿತು. ಆಗದು ತನ್ನ ಸುಂದರ ಪಕ್ಕಗಳನ್ನು ಪಸರಿಸಿ, ಆ ಬಕಕ್ಕೆ ತನ್ನ ಬಂಗಾರದ ಬಣ್ಣದ ಗರಿಗಳ ಮಿರುಗನ್ನು ತೋರಹತ್ತಿತು. ಅದರ ಸೊಕ್ಕನ್ನು ಇಳಿಸಬೇಕೆಂದು ಆ ಬಕವು ನವಿಲಿಗೆ:— “ಎಲೋ! ಸೊಬಗುಳ್ಳ ಪಕ್ಕಗಳಿರುವದೇ ದೊಡ್ಡಿತೆಯೆಂದಿದ್ದರೆ, ನಾನು ನಿನಗೆ ಸುಂದರನೆನ್ನುತ್ತಿದ್ದೆನು; ಆದರೆ ಮಕ್ಕಳಂತೆ ನೆಲದ ಮೇಲೆ ನಡಿಯುತ್ತ ಆಡುವದಕ್ಕಿಂತ ಆಕಾಶದಲ್ಲಿ ಹಾರುವ ಸಾಮರ್ಥ್ಯವಿರುವದೇ ನನಗೆ ದೊಡ್ಡಿತೆಯೆನಿಸುತ್ತದೆ;” ಎಂದು ಚುಚ್ಚಿ ನುಡಿಯಿತು.

ತಾತ್ಪರ್ಯಃ— ತನ್ನಲ್ಲೊಂದು ಗುಣವಿದ್ದರೆ, ಅನ್ಯರಲ್ಲಿ ಮತ್ತೊಂದಿರುತ್ತದೆ. ತನ್ನಲ್ಲಿಯ ಗುಣವು ಅನ್ಯರಲ್ಲಿಲ್ಲೆಂದು ಅವರನ್ನು ಮನುಷ್ಯನು ಹೀಯಾಳಿಸಿದರೆ, ಆ ಅನ್ಯರಲ್ಲಿಯ ಗುಣಗಳು ಇವನಲ್ಲಿಲ್ಲೆಂದು ಅನ್ಯರು ಇವನನ್ನು ಕೀಳೆಣಿಸಬಹುದು. ಆದ್ದರಿಂದ ಒಬ್ಬರನ್ನು ನೋಡಿ ಒಬ್ಬರು ನಗಬಾರದು. ಯಾಕಂದರೆ ಎಲ್ಲ ಗುಣಗಳ ಸನ್ನಿಕರ್ಷವು ಒಬ್ಬನಲ್ಲೇ ಇರುವದು ಅಪರೂಪ.

## ೧೫೬— ಎತ್ತೂ ಕಟ್ಟಿಗೆಯೂ.

ಕೆಲವು ಎತ್ತುಗಳು ಒಂದು ದೊಡ್ಡ ಮನೆಯ ಕಟ್ಟಿಗೆಗಳನ್ನು ಅಡವಿಯೊಳಗಿಂದ ಎಳೆದೊಯ್ಯುತ್ತಿದ್ದವು. ಎತ್ತುಗಳ ಕೃತಘ್ನತನಕ್ಕೆ ಆ ಕಟ್ಟಿಗೆಗಳಿಗೆ ಬಲು ಕೋಪ ಬಂದಿತು. ಆಗವು:— "ಎಲೈ, ನಾನು ಗಿಡವಾಗಿದ್ದಾಗ, ನನ್ನ ಬುಡದಲ್ಲಿ ನೀವು ಮಲಗಿ ಮೋದವನ್ನು ಪಡೆದಿರಿ! ನನ್ನ ಎಲೆಗಳನ್ನು ನಾನು, ನಿಮ್ಮ ಹೊಟ್ಟೆಗ್ಹಾಕಿದ್ದೆನು! ಇವೆಲ್ಲ ಮರೆತು ನನ್ನನ್ನು ಈ ಕಲ್ಲು ಮುಳ್ಳುಗಳ ನೆಲದಲ್ಲಿ ಎಳೆದೊಯ್ಯುವಿರಿ! ಈ ನಿಮ್ಮ ನಡತೆಗೇನನ್ನಬೇಕು; !" ಎಂದು ನುಡಿದವು. ಆಗ ಎತ್ತುಗಳು ಪ್ರತಿಯಾಗಿ:— "ನಾವೇನು ನಲುಮೆಯಿಂದ ಈ ಕಾರ್ಯವನ್ನು ಮಾಡತೊಡಗಿಲ್ಲ; ಬಲುಮೆಯಿಂದ ನಮ್ಮಿಂದ ಈ ಕಾರ್ಯವು ಮಾಡಿಸಿಕೊಳ್ಳಲ್ಪಡುತ್ತಿದೆ; ಇದನ್ನು ಲಕ್ಷ್ಯಕ್ಕೆ ತಂದರೆ ನಮಗೆಂದೂ ನೀವು ದೋಷಕೊಡಲಾರಿರಿ;" ಎಂದು ಉತ್ತರಕೊಟ್ಟವು.

ಸಾರಾಂಶ:— ಒಬ್ಬನ ಇಚ್ಛೆಯ ವಿರುದ್ಧವಾಗಿ, ಅನ್ಯನಿಂದ ಬಲಾತ್ಕಾರದಿಂದ ಏನೊಂದು ಕೆಲಸವು ಮಾಡಿಸಿಕೊಳ್ಳಲ್ಪಡುತ್ತಿದ್ದರೆ, ಇದರಲ್ಲಿ ಅವನಿಗೆ ದೋಷವೀಯುವದು ಸರಿಯಲ್ಲ.

---

## ೧೫೭— ಸೊಟ್ಟಾದ ಗಿಡವು.

ಮನೆ ಕಟ್ಟಲು ಉಪಯೋಗವಾಗುವ ಗಿಡಗಳನ್ನು ಒಂದು ಅಡವಿಯಲ್ಲಿ ಹಚ್ಚಿದ್ದರು. ಅವೆಲ್ಲವುಗಳೂ ನೇರವಾಗಿಯೂ ಸರಲವಾಗಿಯೂ ಬೆಳೆದಿದ್ದವು. ಒಂದು ಮಾತ್ರ ಅಂಕಡೊಂಕಾಗಿತ್ತು. ಇದನ್ನು ನೋಡಿ ಉಳಿದವುಗಳಿಗೆ ನಗೆ ಬಹಳ. ಗಿಡಗಳ ಒಡೆಯನು ಒಮ್ಮೆ ಮನೆಕಟ್ಟಲು ನಿಶ್ಚಯಿಸಿ, ತನ್ನಾಳುಗಳಿಗೆ ಆ ನೇರವಾಗಿರುವ ಸರಲ ಗಿಡಗಳನ್ನು ಕಡಿಯಲು ಅಪ್ಪಣೆಕೊಟ್ಟನು. ಆಳುಗಳು ಒಡೆಯನ ಅಪ್ಪಣೆಯಂತೆ ಮಾಡಿದರು.

ಸಾರಾಂಶ:— ಹಾನಿಯನ್ನುಂಟುಮಾಡುವ ಗುಣವು ಒಂದು ವೇಳೆ ನಮ್ಮಲ್ಲಿಲ್ಲದಿದ್ದರೆ, ಅದಕ್ಕೆ ನಾವು ಚಿಂತೆಮಾಡಲು ಕಾರಣವಿಲ್ಲ.

---

## ೧೫೮— ನರಿಯೂ ದ್ರಾಕ್ಷಿಗಳೂ.

ಒಂದು ನರಿಯು ಬಲು ಹಸಿದಿತ್ತು. ಆಗ ಸಮೀಪದಲ್ಲಿಯೇ ಒಂದು ದ್ರಾಕ್ಷೆಯ ಬಳ್ಳಿಯು ಅದಕ್ಕೆ ಕಾಣಿಸಿತು. ಬಳ್ಳಿಯನ್ನು ಎತ್ತರವಾದ ಹಂದರದಮೇಲೆ ಹಬ್ಬಿಸಿದ್ದರಿಂದ ನರಿಗೆ ಅದು ನಿಲುಕಲೊಲ್ಲದು. ಹಾರಿ ಹಾರಿ ಬೇಸತ್ತು ಕಡೆಗೆ ಅದು ದೂರ ಸಾರಿ ಆ ಬಳ್ಳಿಯ ಕಡೆಗೆ ನೋಡುತ್ತ:— "ಬೇಕಿದ್ದವರು ತೆಗೆದುಕೊಳ್ಳಲಿ; ಈ ದ್ರಾಕ್ಷೆಗಳು ಹುಳಿಯಾಗಿವೆ; ಇಂಥ ಕಸುಕು ಕಾಯಿಗಳನ್ನಾರು ತಿನ್ನಬೇಕು!" ಎಂದೆನ್ನುತ್ತ ಪಲಾಯನ ಸೂತ್ರವನ್ನು ಪಠಿಸಿತು.



ಸಾರಾಂಶ:— ಯಾವದೊಂದು ಸುಂದರ ವಸ್ತುವು ತಮ್ಮ ಕೈಸಾರದಿದ್ದರೆ, ತಮ್ಮ ಅಶಕ್ತತೆಯನ್ನು ಮುಚ್ಚಿಕೊಳ್ಳಲು, ಎಷ್ಟೋ ಜನರು ಆ ವಸ್ತುವಿಗೇ ದೋಷವನ್ನು ಹಚ್ಚುತ್ತಾರೆ.

———

## ೧೫೯— ಗಾಲಿಯ ಮೇಲಿನ ನೊಣವು.

ಒಂದು ನೊಣವು ಒಂದು ಓಡುತ್ತಿರುವ ರಥದ ಗಾಲಿಯ ಮೇಲೆ ಕುಳಿತಿತ್ತು. ಆಗದು:— " ಭಲ! ನಾನು ಎಷ್ಟು ಧೂಳಿಯನ್ನು ಹಾರಿಸುತ್ತಿರುವೆನು! " ಎಂದೆಂದು ಕೊಂಡಿತು. ಮುಂದೆ ಕುದುರೆಯ ಬೆನ್ನಮೇಲಿನ ವ್ರಣದ ಮೇಲೆ ಹೋಗಿ ಕುಳಿತಾಗ ಮತ್ತೆ ಅದು:— " ಭಾಪು! ಕುದುರೆಗೆ ಓಡಲು ನನ್ನಂತೆ ಮತ್ತಾರು ಹಚ್ಚುವವರು! " ಎಂದು ಜಂಭಕೊಚ್ಚಿತು.

ತಾತ್ಪರ್ಯ:— ಪರರು ಮಾಡಿದ ಕೆಲಸದ ಶ್ರೇಯಸ್ಸನ್ನು ತಮ್ಮ ಕಡೆಗೆ ತೆಗೆದು ಕೊಂಡು ಹೆಂಟು ಬಡಿಯುತ್ತಿರುವ ಮೂರ್ಖರು ಅನೇಕರಿರುವದುಂಟು.

---

## ೧೬೦ — ವಾವು ಮತ್ತು ಹಾವು.

ವಾವೆಯೆಂಬದೊಂದು ಮೀನವು ಅದು ಹಾವಿನಂತಿರುತ್ತದೆ. ಒಮ್ಮೆ ಆ ಮೀನವು ಒಂದು ಹಾವಿಗೆ:— " ಎಲೋ! ನಿನ್ನ ನನ್ನ ರೂಪವು ಒಂದೇ ಬಗೆಯಾಗಿರುವದರ ಮೇಲಿಂದ ನಾನು ನಿನ್ನ ನೆಂಟನಾಗಿರಲು ಸಾಕು. ಅಂಥದಮೇಲೆ ಜನರು ನನ್ನನ್ನು ಹಿಡಿದೊಯ್ದು ನಿನ್ನನ್ನು ಬಿಡಲು ಕಾರಣವೇನು? " ಎಂದು ಪ್ರಶ್ನಮಾಡಿತು. ಇದಕ್ಕೆ ಹಾವು:— " ಗೆಳೆಯಾ! ಜನರು ನನ್ನ ಗೋಜಿಗಂತೂ ಬರುವದೇ ಇಲ್ಲ, ಆದರೂ ನಾನೇ ನೆನಪುಳಿಯುವಂಥ ಶಿಕ್ಷೆಯನ್ನವರಿಗೆ ಕೊಡುತ್ತೇನೆ, " ಎಂದು ಉತ್ತರ ಕೊಟ್ಟಿತು.

ಸಾರಾಂಶ:— ತೊಂದರೆಪಡಿಸುವವನಿಗೆ ಬಗ್ಗಿ ನಡೆಯುವದೆಂದರೆ, ಅವನಿಗೆ ಮತ್ತೆ ಹೆಚ್ಚು ತೊಂದರೆಪಡಿಸಲು ಉತ್ತೇಜನವಿತ್ತಂತೇ ಸರಿ.

---

## ೧೬೧— ಗಂಡುಬೆಕ್ಕೂ ನರಿಯೂ.

ಒಂದು ಅಡವಿಯಲ್ಲಿ ಒಂದು ಗಂಡು ಬೆಕ್ಕೂ ಒಂದು ನರಿಯೂ ರಾಜಕಾರಸ್ಥಾನದ ಮಾತಾಡುತ್ತ ಕುಳಿತಿದ್ದವು. ನರಿಯು:— “ಬೆಕ್ಕಪ್ಪಾ! ಈಗ ಏನೊಂದು ಸಂಕಟವು ಸಮೀಪಿಸಿದರೆ ಸಾವಿರ ಹಂಚಿಕೆ ಹಾಕಿ ನಾನು ಪಾರಾಗುವೆನು; ನಿನ್ನಗತಿಯೇನೆಂದು ನನಗೆ ಯೋಚನೆ;” ಎಂದು ಬೆಕ್ಕಿಗೆ ನುಡಿಯಿತು. ಬೆಕ್ಕು:— “ಗೆಳೆಯಾ! ನನಗೆ ಬಲ್ಲ ಹಂಚಿಕೆಯೊಂದೇ ಒಂದು; ಅದು ತಪ್ಪಿದರೆ ನನ್ನ ಅವತಾರ ಮುಗಿಯಿತೇ” ಎಂದು ನರಿಗೆ ಮರಳಿ ಮಾತಾಡಿತು. ಆಗ ನರಿಯು:— “ಆದ್ದರಿಂದಲೇ ನಿನ್ನ ಬಗ್ಗೆ ನನಗೆ ಚಿಂತೆ ಬಹಳನೋಡು! ಪಾಪ! ನಿನಗೆ ಒಂದೆರಡು ಹಂಚಿಕೆಗಳನ್ನು ಹೇಳಿಕೊಡುತ್ತಿದ್ದೆ! ಆದರೆ ಈ ದಿನದ ಮಟ್ಟಿಗೆ ಪರರ ಗೋಜಿಗೆ ನಾನು ಹೋಗುವಂತಿಲ್ಲ;



ನಾನು ಪಾರಾದರೆ ತೀರಿತೆಂಬುವ ಪ್ರಸಂಗವೇಯಿದೆ! ಶರಣು! ಹೋಗಿ ಬರುವೆನು!” ಎಂದದ್ದೇ ಪಲಾಯನವಾಯಿತು. ಇಷ್ಟರಲ್ಲಿಯೇ ಬೇಟೆಯ ನಾಯಿಗಳು ಬೊಗಳುತ್ತ ಧಾವಿಸಿ ಬಂದವು. ಬೆಕ್ಕಿಗೆ ಮರವನ್ನು ಏರಲು ಬರುತ್ತಿದ್ದಾದ್ದರಿಂದ ಅದರ ಮೇಲಿನ ಸಂಕಟವು ದೂರಾಯಿತು. ಆದರೆ ಸಾವಿರ ಹಂಚಿಕೆಗಳಲ್ಲಿ ಒಂದೂ ನರಿಗೆ ಉಪಯೋ

ಗವಾಗಲಿಲ್ಲ. ಗಾಬರಿಯಿಂದ ನರಿಯು ನಾಲ್ಕೈದು ಹಾರಿಕೆಗಳನ್ನು ಹಾರುವಷ್ಟರಲ್ಲಿಯೇ ನಾಯಿಗಳು ಬಂದು ಅದರ ನರಡೀಯನ್ನೇ ಹಿಡಿದವು.

ತಾತ್ಪರ್ಯ:— ಬೇರೆಯವರಿಗಿಂತ ತಾನು ಬಲು ಜಾಣನೆಂದು ಬಡಾಯಿ ಮಾಡುವವನ ಜಾಣತನವು ಪ್ರಸಂಗದಲ್ಲಿ ಜಾರಿ ಹೋಗಬಹುದು. ಆದರೆ ತಾನು ಕಡಿಮೆ ಜಾಣನೆನ್ನುವನ ಜಾಣತನವೇ ಹೊತ್ತಿಗೆ ಬೀಳಬಹುದು. ಹೀಗಾಗುವದು ಅನೇಕ ಸಲ ಕಂಡುಬರುತ್ತದೆ. ಅಲ್ಲದೆ ಒಂದು ಪೂರ್ಣ ವಿದ್ಯೆಯ ಬಲವು ಅನೇಕ ಅಪೂರ್ಣ ವಿದ್ಯೆಗಳ ಬಲಕ್ಕಿಂತ ಮೇಲು.

---

೧೬೨.— ಅಡಿಗೆಯವನೂ ಮೀನವೂ.

ಒಬ್ಬ ಮುಸಲ್ಮಾನ ಅಡಿಗೆಯವನು ಒಮ್ಮೆ ಒಂದು ಸಜೀವ ಮೀನವನ್ನು ಎಣ್ಣೆಯಲ್ಲಿ ಕರಿಯುತ್ತಿದ್ದನು. ಆ ಉಷ್ಣತೆಯಿಂದ ಮೀನಕ್ಕೆ ಬಲು ಸಂಕಟವಾಗಹತ್ತಿತು. ಅದರಿಂದ ಪಾರಾಗಲು ಮೀನವು ಒಲೆಯಲ್ಲಿ ಹಾರಿತು. ಆಗಂತೂ ಮೊದಲಿನದೇ ಬೇಕೆನ್ನುವಂತೆ ಅದಕ್ಕಾಗಿಹೋಯಿತು.

ಸಾರಾಂಶ:— ಒಮ್ಮೊಮ್ಮೆ ಒಂದು ಔಷಧವು ದೇಹಕ್ಕೆ ಬಲು ಅಪಾಯಕಾರಕವಾಗಿರುತ್ತದೆ; ಆಗ ಅದರ ಸೇವನೆಗಿಂತ ಬೇನೆಯ ಬಳಲಿಕೆಯೇ ಚನ್ನಾದದ್ದೆನಿಸುತ್ತದೆ.

---

೧೬೩:— ಪಶುಪಕ್ಷಿ ಮತ್ತು ಮೀನಗಳು.

ಒಮ್ಮೆ, ಪಶುಪಕ್ಷಿಗಳೊಳಗೆ ಕಾಳಗವಾಗುವದಿತ್ತು. ಆಗ ಮೀನಗಳು ಪಕ್ಷಿಗಳ ವಿರುದ್ಧವಾಗಿ ಪಶುಗಳಿಗೆ ಸಹಾಯವಾಗಬೇಕೆಂದು ಪಶುಮೀನಗಳೊಳಗೆ ಒಪ್ಪಂದವಾಯಿತು. ಮುಂದೆ ಬೇಗನೇ ಪಶುಪಕ್ಷಿಗಳ ಕಾಳಗಕ್ಕೆ ಮೊದಲಾಯಿತು. ಆಗ ಮೀನಗಳು ಭೂಮಿಯ ಮೇಲೆ ಬಡಿದಾಡಲು ತಾವು ಸಮರ್ಥರಿಲ್ಲೆಂಬ ತಮ್ಮ ಆಶಯವನ್ನು ಪಶುಗಳಿಗೆ ಹೇಳಿಕಳಿಸಿಬಿಟ್ಟವು.

ಸಾರಾಂಶ:— ನಮಗೆ ಪರರಿಂದ ಸಹಾಯವಾಗಬೇಕೆಂದು, ನಾವು ಅವರ ಗೆಳೆತನವನ್ನು ಮಾಡುವದಾದರೆ, ಮೊದಲು, ಅವರು ನಮಗೆ ಸಹಾಯ ಮಾಡಲು ಸಮರ್ಥರಿರುವರೋ ಇಲ್ಲೆಂಬದನ್ನು ತಿಳಿದು ನೋಡಬೇಕು. ಇಲ್ಲವಾದರೆ ಆಯತ್ತ ಕಾಲದಲ್ಲಿ ಆ ಗೆಳೆಯನು ಪ್ರಸಂಗವನ್ನು ನೋಡಿ ಭಯಚಕಿತನಾಗಿ ಬಿಟ್ಟರೆ, ಆಗಾಗುವ ನಮ್ಮ ಮುಂದಿನ ದುರ್ದಶೆಗೆ ಪಾರವೇ ಇಲ್ಲ.

## ೧೬೪— ಸಿಂಹವೂ ಇಲಿಯೂ.



ಬೇಸಿಗೆಯ ಕಾಲದಲ್ಲಿ ಒಂದು ಸಿಂಹವು, ಒಂದು ಮಾವಿನ ಮರದ ನೆರಳಲ್ಲಿ ನಿದ್ರಿಸುತ್ತಿತ್ತು. ಆಗ ಅಲ್ಲಿರುವ ಇಲಿಗಳು ಅದಕ್ಕೆ ಬಹು ತೊಂದರೆ ಪಡಿಸಿದವು. ತೊಂದರೆಗೆ ಕೋಪಗೊಂಡು ಸಿಂಹವು, ಒಂದು ಇಲಿಯನ್ನು ಪಂಜರದಲ್ಲಿ ಹಿಡಿದು, ಇನ್ನು ಅದನ್ನು ಹಿಸಿದುಹಾಕುವ ಹವಣಿಕೆಯಲ್ಲಿತ್ತು. ಅಷ್ಟರಲ್ಲಿ ಆ ಇಲಿಯು ಸಿಂಹಕ್ಕೆ:— “ ಮಹಾರಾಯಾ! ನೀನು ದೊಡ್ಡವ! ಪಶುಗಳೆಲ್ಲರ ಪಾಲಕ! ನಾನೊಂದು ಕ್ಷುದ್ರ ಕೀಟಕವು! ನನ್ನಂಥವನನ್ನು ಕೊಂದು ನಿನ್ನ ಮೈ ಮೈಲಿಗೆ ಮಾಡಿಕೊಳ್ಳಬೇಡ! ನನಗೆ ಜೀವದಾನ ಕೊಡುವದೇ ನಿನ್ನ ದೊಡ್ಡಿತೆಗೆ ಭೂಷಣವು! ” ಎಂದು ಅಂಗಲಾಚಿ ಬೇಡಿಕೊಂಡಿತು. ಇದನ್ನು ಕೇಳಿ ಸಿಂಹಕ್ಕೆ ಅಂತಃಕರಣ ಕರಗಿತು. ಆಗದು ಇಲಿಯನ್ನು ಬಿಟ್ಟುಬಿಟ್ಟಿತು. ಮುಂದೊಮ್ಮೆ ಆ ಸಿಂಹವು ಅರಣ್ಯದಲ್ಲಿ ಅಲೆದಾಡುತ್ತಿರುವಾಗ ಅದು ಒಬ್ಬ ಬೇಟೆಗಾರನ ಬಲೆಯಲ್ಲಿ ಸಿಕ್ಕಿಕೊಂಡಿತು. ಆಗ

ಸಿಂಹವು ತನ್ನ ಶಕ್ತಿಯನ್ನು ಮೀರಿ ತ್ರಿಕ್ಕಾಟಮಾಡಿ, ಬಲೆಯಲ್ಲಿಂದ ಬಿಡಿಸಿಕೊಳ್ಳಲೆತ್ತಿಸಿತು. ಆದರೆ ಎಲ್ಲವೂ ವ್ಯರ್ಥವಾಯಿತು. ಆಗದು ನಿರಾಶವಾಗಿ ಬಲವಾಗಿ ಬಡಕೊಳ್ಳಹತ್ತಿತು. ಅದರ ಕೂಗನ್ನು ಕೇಳಿ, ಮೇಲಿನ ಇಲಿಯು ಅಲ್ಲಿಗೆ ಬಂದು, ಬೆದರಬೇಡವೆಂದು ಸಿಂಹಕ್ಕೆ ಸಮಾಧಾನವನ್ನು ಹೇಳಿ, ತನ್ನ ಹಲ್ಲುಗಳಿಂದ ಬೇಟೆಗಾರನ ಬಲೆಯನ್ನು ಕಡಿದುಹಾಕಿ ಅದನ್ನು ಬಿಡಿಸಿತು.

ಸ್ವಲ್ಪದರಲ್ಲಿ ಹೇಳುವದೆಂದರೆ:— ಸಣ್ಣವನೆಂದು ಒಬ್ಬನನ್ನು ನಾವು ಅಲ್ಲಗಳೆಯಬಾರದು. ಆ ಸಣ್ಣವನೇ ಪ್ರಸಂಗದಲ್ಲಿ ನಮ್ಮ ಸಹಾಯಕ್ಕೊದಗಬಹುದು. ಆದ್ದರಿಂದ ಅಗ್ಗಳಿಕೆಯ ಕಾಲದಲ್ಲಿ ನಾವು ಸಣ್ಣವರೆನ್ನದೆ ಅನೇಕರಿಗೆ ನೆರವಾಗಿರಬೇಕು. ಈ ಸಣ್ಣವರೇ ನಮ್ಮ ಮುಗ್ಗಳಿಕೆಯ ವೇಳೆಯಲ್ಲಿ ಮುಂದೆ ಬಂದು ನಮಗೆ ಸಹಾಯವಾಗುವರು.

---

## ೧೬೫— ವಕೀಲನೂ ಸರದಾರನೂ.

ಒಬ್ಬ ರಾಜನು ತನ್ನ ವಕೀಲನನ್ನು ಬೇರೊಬ್ಬ ರಾಜನ ಸಭೆಗೆ ಕಳುಹಿಸಿಕೊಟ್ಟನು. ಆ ವಕೀಲನು ಬೇರೊಬ್ಬ ರಾಜನ ರಾಜಧಾನಿಗೆ ತಲುಪಿದ ಮೇಲೆ, ರಾಜನವರು ಅವನನ್ನು ಊದುತ್ತ ಬಾರಿಸುತ್ತ ಸಡಗರದಿಂದ ಬೀದಿಯಲ್ಲಿ ಕರೆದೊಯ್ಯುತ್ತಿದ್ದರು. ಆದರೆ ಈ ಆಡಂಬರವು ಜಿಪುಣನಾದ ಆ ವಕೀಲನಿಗೆ ಸರಿಬೀಳಲಿಲ್ಲ. ಒಮ್ಮೆಲೇ ಅವನು ನೆರೆದವರಿಗೆ:— “ ಅಯ್ಯಾ ನಮ್ಮಮ್ಮನು ತೀರಿಕೊಂಡ ಸೂತಕದಲ್ಲಿ ನಾನಿರುವೆನು: ದಯವಿಟ್ಟು ಈ ಸಡಗರವನ್ನು ಇಷ್ಟಕ್ಕೇ ನಿಲ್ಲಿಸಿರಿ; ” ಎಂದು ವಿನಯದಿಂದ ಹೇಳಿದನು. ಆಗ ಜನರೆಲ್ಲ ವಾದ್ಯಗಳನ್ನು ಊದುವದನ್ನು ನಿಲ್ಲಿಸಿಬಿಟ್ಟರು. ಈ ಸುದ್ದಿಯು ಆ ಊರ ಸರದಾರನೊಬ್ಬನು ಅರಿತು, ಆ ವಕೀಲನ ಬಳಿಗೆ ಬಂದು:— “ ಏನು ಸ್ವಾಮಿ! ವಕೀಲರೇ! ತಮ್ಮಮ್ಮ ಹೋಗಿ ಈ ದಿನಕ್ಕೆಷ್ಟು ದಿವಸಗಳಾದವು? ಈ ವಾರ್ತೆಯಿಂದ ನನಗೆ ಬಲು ದುಃಖವೆನಿಸಿತು; ” ಎಂದು ಹಳಹಳಿಸಿದನು. ಆಗ ವಕೀಲನು “ ಆ ಮಾತಿಗೀಗ ನಾಲ್ವತ್ತು ವರ್ಷಗಳಾದವೆಂದು ಹೇಳಿದನು. ”

ತಾತ್ಪರ್ಯ:— ಹಣವನ್ನು ಉಳಿಸಲು ಜಿಪುಣರು ಬೇಕಾದ ಕಾರಣವನು ತೋರಿಸಬಲ್ಲರು.

## ೧೬೬— ಸಿಂಹದೊಡನೆ ಇಲಿಯ ಲಗ್ನ.



ಮೇಲಿನ ಕತೆಯಲ್ಲಿಯ ಸಿಂಹವು ಬಲೆಯಲ್ಲಿಂದ ಬಿಡಿಸಿಕೊಂಡು ಸಂತೋಷದಿಂದ ಆ ಇಲಿಗೆ ಬೇಕಾದದ್ದು ಬೇಡಲಿಕ್ಕೆ ಹೇಳಿತು. ಇದನ್ನು ಕೇಳಿ ಇಲಿಯು ಉಬ್ಬಿ ತನ್ನ ನಿಜವಾದ ಸಾಮರ್ಥ್ಯವನ್ನು ಮರೆತು ಸಿಂಹಕ್ಕೆ:— “ ರಾಜನೇ! ನಿನಗೆ ಸಂತೋಷವಾದದ್ದೇ ಸತ್ಯವಿದ್ದರೆ, ನಾನೂ ನಿರ್ಭಿಡೆಯಿಂದ ಕೇಳುತ್ತೇನೆ; ನಿನ್ನ ಮಗಳನ್ನು ನನಗೆ ಮದುವೆ ಮಾಡಿಕೊಡು ” ಎಂದು ಕೇಳಿತು. ಆಗ ಸಿಂಹಕ್ಕೆ ಈ ಬೇಡಿಕೆಯನ್ನು ಕೇಳಿ ಕೊಂಚ ಕೆಟ್ಟೆನಿಸಿತು. ಆದರೂ ವಚನಬದ್ಧವಾಗಿತ್ತಾದ್ದರಿಂದ ತನ್ನ ಮಗಳನ್ನು ತಂದು ಆ ಇಲಿಯ ಸ್ವಾಧೀನ ಮಾಡಿತು. ಆ ಹರೆಯದ ಸಿಂಹವು ಸಡಗರದಿಂದ ಹೆಜ್ಜೆಯಿಡುವಾಗಲೇ ಅದರ ಬುಡಕ್ಕೆ ಸಿಕ್ಕು ಇಲಿಯು ಕಾಲವಾಯಿತು.

ಸಾರಾಂಶ:— ವರ ಬೇಡುವದಾದರೆ ತನ್ನ ಯೋಗ್ಯತೆಗೆ ತಕ್ಕುದನ್ನು ಬೇಡಬೇಕು. ಅಲ್ಲದೆ ಮನಬಂದಂತೆ ಬೇಡಿ ಮೇಲಿನ ಇಲಿಯಂತೆ ಜೀವಕ್ಕೆ ಎರವಾಗಬೇಕಾಗುತ್ತದೆ. ಆದ್ದರಿಂದ ಬೇಡುವಾಗ ಎಚ್ಚರಿಕೆಯಿರಬೇಕು.

## ೧೬೭— ಕಾರಕೂನನೂ ಕಾರಭಾರಿಯೂ.

ಒಬ್ಬ ಕಾರಕೂನನ ಬಾಲ್ಯದ ಗೆಳೆಯನಿಗೆ, ಒಂದು ಸಂಸ್ಥಾನದ ಕಾರಭಾರಿಯ ಸ್ಥಳವು ಸಿಕ್ಕಿತು. ಇದನ್ನು ಕೇಳಿ ಆ ಕಾರಕೂನನು ಆ ಮಿತ್ರನ ಅಭಿನಂದನಕ್ಕೆಂದು ಅವನಲ್ಲಿಗೆ ಹೋಗಿ:— " ಆನಂದ! ಮಿತ್ರಾ! ಆನಂದ! ನಿನಗೆ ಈ ದೊಡ್ಡ ಅಧಿಕಾರ ದೊರಕಿದ್ದು ಅತ್ಯಾನಂದವು! " ಎಂದು ಸಲಿಗೆಯಿಂದ ನುಡಿದನು. ಆಗ ಆ ಕಾರಭಾರಿಯು ತಿರುಗಿ:— " ಎಲೋ! ನೀನು ಯಾರು? ನಿನ್ನ ಹೆಸರೇನು? ಇದನ್ನಾದರೂ ನನಗೆ ಹೇಳು; " ಎಂದಂದನು. ಇದಕ್ಕೆ ಕಾರಕೂನನು:— " ಸ್ವಾಮಿ! ತಮಗೆ ಈ ದೊಡ್ಡ ಅಧಿಕಾರದ ಸ್ಥಳ ದೊರಕಿದ್ದಕ್ಕೆ ದುಃಖಪ್ರದರ್ಶಿತ ಮಾಡಲು ತಮ್ಮೆಡೆಗೆ ನಾನು ಬಂದಿರುವೆನು! ತಮ್ಮ ಈಗಿನ ಇರುವಿಕೆಯನ್ನು ನೋಡಿ ನನಗೆ ಅತಿ ಖೇದವಾಗುತ್ತದೆ! ಯಾಕಂದರೆ ಯಾವ ಇರುವಿಕೆಯು ತನ್ನ ಮೊದಲಿನ ಮಿತ್ರನನ್ನು ಮರೆಯಲ್ಹಚ್ಚಿ ಮದಾಂಧನನ್ನಾಗ ಮಾಡುತ್ತದೊ ಅಂಥವಕ್ಕೆ ಇರುವಿಕೆಯನ್ನಬೇಕೋ ಉರಿಯುವಿಕೆಯನ್ನಬೇಕೋ ನನಗಂತೂ ತಿಳಿಯದಾಗಿದೆ! " ಎಂದು ದುಃಖದಿಂದ ಉದ್ಗಾರ ತೆಗೆದನು.

ಸಾರಾಂಶ:— ಅಧಿಕಾರವು ಬರುತ್ತಲೇ ಮದವು ಮುಂದೆಯೇ ಇರುತ್ತದೆ. ಅದು ಅಧಿಕಾರಿಯನ್ನು ಮುತ್ತಿಕೊಂಡೇ ಬಿಡುತ್ತದೆ; ಹೀಗಾಗದಿರುವದು ಅಪರೂಪ.

---

## ೧೬೮— ಮುದುಕನೂ ಹರೆಯದವನೂ.

ಒಬ್ಬ ವಿಚಾರವಿಲ್ಲದ ಹರೆಯದವನು ಬೀದಿಯಲ್ಲಿ ಹೋಗುತ್ತಿದ್ದನು. ಆಗ ಮುಪ್ಪಿನಿಂದ ಬಿಲ್ಲಿನಂತೆ ಬಾಗಿರುವ ಒಬ್ಬಾನೊಬ್ಬ ಮುದುಕನನ್ನು ಅವನು ಕಂಡನು. ಆಗವನು:— " ಸ್ವಾಮಿ! ತಮ್ಮ ಈ ಬಿಲ್ಲನ್ನು ನನಗೆ ದಯಪಾಲಿಸುವಿರಾ ? ಏನು ಕ್ರಯ ಕೇಳುವಿರಿ? " ಎಂದು ಕುಚೇಷ್ಟೆಯಿಂದ ಕೇಳಿದನು. ಆಗ ಮುದುಕನು:— " ಹುಡುಗಾ! ತಡೆ? ಈಗ ರೊಕ್ಕ ವೆಚ್ಚ ಮಾಡಬೇಡ? ಕೆಲದಿನ ತಡೆದರೆ ರೊಕ್ಕವಿಲ್ಲದೆ ನಿನಗೂ ಇಂಥದೊಂದು ಬಿಲ್ಲು ದೊರೆಯುವದು! ಯಾಕಂದರೆ ಮುದುಕನಾದರೆ ನಿನ್ನ ದೇಹವೂ ನನ್ನಂತೇ ಬಿಲ್ಲಿನಂತೆ ಬಾಗಿಯೇ ತೀರುವದು! " ಎಂದು ಅಧಿಕಾರವಾಣಿಯಿಂದ ನುಡಿದನು. ಇದಕ್ಕೆ ಆ ತರುಣನ ತಲೆಯು ಕೆಳಗಾಯಿತು. ಆಗವನು ಮೆಲ್ಲನೇ ಹಾದೀ ಹಿಡಿದನು.

ತಾತ್ಪರ್ಯ:— ಮುದುಕನನ್ನು ಕಂಡು ಕುಚೇಷ್ಟೆಮಾಡುವವನು ಪಶುವಲ್ಲದೆ, ಮತ್ತೇನು!

## ೧೬೪— ಅಡವಿಯೂ ಕಟ್ಟಿಗೆ ಕಡಿಯುವವನೂ.



ಒಬ್ಬ ಕಟ್ಟಿಗೆ ಕಡಿಯುವವನು ಅಡವಿಗೆ ಹೋಗಿ ಅತ್ತಿತ್ತ ನೋಡಿ ಅಳಹತ್ತಿದನು. ಅವನ ಅಳುವಿನಿಂದ ಗಿಡಗಳಿಗೆಲ್ಲ ಕಳವಳವಾಯಿತು. ಆಗವು:— “ಎಲೋ! ಅಳಬೇಡ! ಏನು ಬೇಕು ನಿನಗೆ?” ಎಂದು ಆ ಕಟ್ಟಿಗೆಕಡಕನಿಗೆ ಕೇಳಿದವು. ಅದಕ್ಕೆ ಆ ಕಡಕನು:— “ದಯಮಾಡಿ, ನನ್ನ ಕೊಡಲಿಗೆ ಕಾವಿಲ್ಲ; ಒಂದನ್ನು ದಯಪಾಲಿಸಿರಿ! ಎಂದು ದೈನ್ಯದಿಂದ ಕೇಳಿಕೊಂಡನು. ಆ ಗಿಡಗಳಿಗೆ ದಯವು ಹುಟ್ಟಿ ಹುಣಿಶಿಯ ಒಂದು ತುಂಡನ್ನು ಅವನಿಗೆ ಕೊಟ್ಟವು. ಆ ತುಂಡನ್ನು ಕೊಡಲಿಗೆ ಸೇರಿಸಿದವನೇ ಆ ಕಡಕನು ಸಿಕ್ಕ ಸಿಕ್ಕ ಗಿಡಗಳನ್ನು ಕಡಿದು ಕೆಡಹಲು ಹತ್ತಿದನು. ಇದನ್ನು ನೋಡಿ ಸಾಗವಾನಿಯ ಮರವು ಬೇರೆ ಮರಗಳಿಗೆ:— “ಅಣ್ಣಗಳಿರಾ! ನಿಮ್ಮ ಕಾಲ ಮೇಲೆ ನೀವೇ ಕಲ್ಲು ಚಲ್ಲಿಕೊಂಡಿರುವಿರಿ; ಅಂದ ಮೇಲೆ ಹೆರವರನ್ನು ಹಳಿದು ಉಪಯೋಗವೇನು?” ಎಂದು ನುಡಿಯಿತು.

ಸಾರಾಂಶ:— ವೈರಿಯನ್ನು ನೋಡಿ ಕನಿಕರಪಟ್ಟು ಅವನಿಗೆ ಬೇಕಾದ ಸಾಹಿತ್ಯಗಳನ್ನು ಒದಗಿಸಿಕೊಟ್ಟರೆ, ಕಡೆಗೆ ನಾವು ಹಳಹಳಿಸಬೇಕಾಗುತ್ತದೆ. ವೈರಿಗೂ ಉಪಕಾರ ಮಾಡಬೇಕು; ಅವನು ಮಾಡಿದ ಅನ್ಯಾಯವನ್ನೂ ಕ್ಷಮಿಸಬೇಕೆಂಬುದು ನಿಜ; ಆದರೆ ಆ ಉಪಕಾರವು ತನ್ನ ನಾಶಕ್ಕೇ ಕಾರಣವಾಗುವಂತಿದ್ದರೆ, ಆಗ ಮಾತ್ರ ಅದನ್ನು ಮಾಡದಿರುವದೇ ಮೇಲು.

———————

## ೧೭೦— ಗೂಬೆಯೂ ಮಿಡಿತೆಯೂ.

ಒಂದು ಮುದಿಗೂಬೆಯು ಒಂದು ಗಿಡದ ಪೊದೆಯಲ್ಲಿ ಮಲಗಿರಲು ಮಿಡಿತೆಯೊಂದು ಹಾಡತೊಡಗಿತು. ಹಾಡು ನಿಲ್ಲಿಸಲು ಗೂಬೆಯು ಮಿಡಿತೆಗೆ ಬಲು ಬೇಡಿಕೊಂಡಿತು. "ಅಪ್ಪಾ! ನಿನಗೆ ಆಟ! ನನಗೆ ಕಾಡಾಟ! ಬೇಡ! ಹೋಗು! ಸುಮ್ಮನೆ ನನ್ನ ನಿದ್ರೆಯನ್ನು ಕೆಡಿಸಬೇಡ!" ಎಂದಿತು. ಆದರೆ ಮಿಡಿತೆಯು ಇದಕ್ಕೆ ಪ್ರತಿಯಾಗಿ ಬೈಗಳ ಮಳೆಯನ್ನೇ ಕರೆಯಿತು. "ನೀನು ವಂಚಕನಿರುವಿ! ಕಳ್ಳನಿರುವಿ! ರಾತ್ರಿಯಲ್ಲಿ ಹೊರಬಿದ್ದು ಕಳವಿನಿಂದ ಹೊಟ್ಟೆಯನ್ನು ಹೊರೆದುಕೊಳ್ಳುವಿ! ಹಗಲಿನಲ್ಲಿ ಮರದ ಪೊದರಿನಲ್ಲಿ ಅಡಗಿಕೊಳ್ಳುವಿ"! ಎಂದಂದಿತು. "ಎಲೋ ಗೃಹಸ್ಥಾ! ಬಾಯಿಯನ್ನು ಬಿಗಿಹಿಡಿ! ಬೊಗಳಬೇಡ! ಬೊಗಳಿ ಹಿಂದಿನಿಂದ ಮಿಡುಕಬೇಡ!" ಎಂದು ಗೂಬೆಯು ಮಿಡಿತಿಗೆ ಹೇಳಿತು. ಇದರ ಲಕ್ಷ್ಯವೇ ಇಲ್ಲ. ಮತ್ತೆ ಶಾಂತವಾಗಿ ಮಿಡಿತೆಯು ಗೂಬೆಯ ಮೇಲೆ ಬಾಯಬಿಟ್ಟಿತು. ಮತ್ತೆ ತನ್ನ ಗಾಯನ ನಡೆಸಿತು. ಆಗ ಗೂಬೆಯು ಮಿಡಿತೆಯ ಸುಳ್ಳು ಸ್ತುತಿಯನ್ನಾರಂಭಿಸಿತು. "ಅಬ್ಬ! ಕ್ಷಮಿಸು! ಅಯ್ಯಾ! ಏನು ನಿನ್ನ ಗಾಯನದ ಮಾಧುರ್ಯವು! ಇಷ್ಟು ಹೊತ್ತು ಇದು ನನ್ನ ಧ್ಯಾನಕ್ಕೆ ಬಂದಿರಲಿಲ್ಲ! ಈಗ ಮಾತ್ರ ಗಾಯಕರಲ್ಲಿ ನಿನ್ನಂಥವರು ನೀನೆಯೆಂದು ನನಗೆ ತಿಳಿಯಬಂತು! ಗಂಧರ್ವರು ನಿನ್ನ ಸರಿಹತ್ತರು! ಕೋಗಿಲೆಯು ನಿನಗೆ ನಾಚುತ್ತದೆ! ಓಹೋ! ನೆನಪಾಯಿತು! ನನ್ನಲ್ಲೊಂದು ಅಮರ್ದಗುಪ್ಪಿಯಿದೆ; ಅದರಲ್ಲಿಯ ಕೊಂಚ ನಿನಗೆ ಕೊಡುವೆನು; ಬಹುಕಾಲ ಹಾಡಿ ನಿನ್ನ ಗಂಟಲವು ಒಣಗಿರಬಹುದು;" ಎಂದದೆಷ್ಟೋ ಬಗೆಯಾಗಿ ಮಿಡಿತೆಯನ್ನು ಹೊಗಳಿತು. ಆಗ ಮಿಡಿತೆಯು ನಿಜವಾಗಿಯೂ ನೀರಡಿಸಿತ್ತು. ಅದು ಅಮೃತ ಬೇಡಲು ಗೂಬೆಯ ಬಳಿಗೆ ಹೋಯಿತು. ಕೂಡಲೇ ಗೂಬೆಯು ಆ ಮಿಡಿತೆಯನ್ನು ಪಟ್ಟನೇ ಬಾಯಲ್ಲಿ ಹಾಕಿಕೊಂಡುಬಿಟ್ಟಿತು.

ಸಾರಾಂಶ:–– ತನಗೆ ಸೇರಿದ್ದೇ ಅನ್ಯರಿಗೆ ಸೇರಬೇಕು ಹೀಗೇನಿಲ್ಲ. ಇದನ್ನು ಲಕ್ಷಿಸದೇ, ಪರರ ಸೇರುವಿಕೆ, ಸೇರದಿರುವಿಕೆಯ ವಿಷಯದಲ್ಲಿ ಉದ್ದಾಮತನದಿಂದ ಉದಾಸೀನರಾದರೆ, ನಮ್ಮ ನಾಶವಾಗದಿರದು.

---

## ೧೭೧–– ಮುದುಕನೂ ಮೃತ್ಯುವೂ.

ಅತಿ ಜರ್ಜರಿತನಾದ ಮುದುಕನೊಬ್ಬನು ಉರವಲಗಳನ್ನು ತರಲು ಅಡವಿಗೆ ಹೋಗಿದ್ದನು. ಅಲ್ಲಿ ಕೆಲವು ಕಟ್ಟಿಗೆಗಳನ್ನು ಕೂಡಿಸಿ, ಕಟ್ಟಿಕೊಂಡು ತಲೆಯಮೇಲಿಟ್ಟು ಅತಿ ಕಷ್ಟದಿಂದ ಮನೆಯ ಕಡೆಗೆ ಸಾಗಿದ್ದನು. ನಡುವೆ ಭಾರದಿಂದ ಬೀದಿಯಲ್ಲಿಯೇ ಒಮ್ಮೆಲೇ ಬಳಲುತ್ತ ಬಿದ್ದು ಕೊಂಡನು. ಆಗವನು ಮೃತ್ಯುವಿಗೆ:–– " ಎಲ್ಲರಿಗೆ ವಿಶ್ರಾಂತಿಯನ್ನು ಕೊಡುವ ನೀನು! ಮೃತ್ಯುವೇ! ನನ್ನನ್ನು ಈ ದುಃಖದಿಂದ ಬಿಡಿಸಬಾರದೆ!" ಎಂದಂದನು. ಇಷ್ಟರಲ್ಲಿ ಪ್ರತ್ಯಕ್ಷ ಮೃತ್ಯುವೇ ಅವನೆದುರಿನಲ್ಲಿ ಬಂದು ನಿಂತನು. ಮೃತ್ಯುವು ಇಷ್ಟು ಸಮೀಪದಲ್ಲಿರುವದು ಆ ಮುದುಕನಿಗೆ ತಿಳಿದಿರಲಿಲ್ಲ. " ನನ್ನನ್ನು ಕರೆದೇತಕೆ " ಎಂದು ಕೇಳುತ್ತ ನಿಂತಿರುವ ಆ ವಿಕ್ರಾಳ ಮೂರ್ತಿಯನ್ನು ನೋಡಿ ಮುದುಕನ ಎದೆಯೊಡೆಯಿತು. ಶರೀರವು ಕಂಪಿಸಹತ್ತಿತು. ಹಾಗೆಯೇ " ಮಿತ್ರಪ್ಪಾ! ಮಿತಪ್ಪಾ! ನಾನು



ಅಶಕ್ತನು! ನನ್ನ ತಲೆಯ ಮೇಲಿನ ಕಟ್ಟಿಗೆಯ ಭಾರವು ಇದೀಗ ಹೇಗೋ ಕೆಳಗೆ ಬಿತ್ತು! ಅದನ್ನು ಎತ್ತಿ ನನಗೆ ಹೊರಿಸುವಿಯೆಂದಪ್ಪ! ನಿನ್ನನ್ನು ಕೂಗಿದೆನು! ಬೇರೆ ಏನು ಕೆಲಸವಿಲ್ಲ; ನಿಜವಾಗಿಯೂ ಬೇರೆ ಕಾರ್ಯವಿಲ್ಲಯ್ಯಾ! ಕೂಗಿದ್ದಕ್ಕೆ ನಿನಗೆ ಅಪಮಾನವೆನಿಸುತ್ತಿದ್ದರೆ, ಇಗೋ ನಿನ್ನ ಕಾಲುಬೀಳುವೆನು! ಕ್ಷಮಿಸು! ಬಂದ ದಾರಿಯಿಂದ ನೀನು ತಿರುಗಿ ಹೋಗು! ಎಂದೆಷ್ಟೋ ಮೆಲುದನಿಯಲ್ಲಿ ಮಾತಾಡಿದನು.

ಸಾರಾಂಶ:— ಮಾತು ಮಾತಿಗೆ ಸಾಯಬೇಕೆನ್ನುವರನೇಕರು. ಆದರೆ ಆ ಸಾವು ಸಮೀಪಕ್ಕೆ ಬಂದುಬಿಟ್ಟರೆ ಅವರು ಭೀತಿಯಿಂದ ನಡಗುಹತ್ತುತ್ತಾರೆ.

---

## ೧೭೨— ಕೊಬ್ಬಿದ ಕೋಳಿಯೂ, ಕೊರಗಿದ ಕೋಳಿಯೂ.

ಒಬ್ಬ ಯವನನ ಮನೆಯಲ್ಲಿ ಅನೇ ಕೋಳಿಗಳಿದ್ದವು. ಅವುಗಳಲ್ಲಿ ಕೆಲವು ಕೊಬ್ಬಿದವು, ಕೆಲವು ಕೊರಗದವಿದ್ದವು. ಕೊಬ್ಬಿದವು ಕೊರಗಿದ್ದವನ್ನು ನೋಡಿ ನಗುತ್ತಿದ್ದವು. ಒಮ್ಮೆ ಆ ಯವನನ ಮನೆಯಲ್ಲಿ ಸೊಗಸೂಟ (ಮೇಜವಾನಿ) ಬಂತು. ಆಗ ಅವನು ಅಡಿಗೆಯವನಿಗೆ ಕೊಬ್ಬಿದ ಕೋಳಿಗಳನ್ನು ಕೊಯ್ದು ಅಡಿಗೆಮಾಡಿ ಊಣಬಡಿಸೆಂದು ಆಜ್ಞೆಮಾಡಿದನು. ಆದರಂತೆ ಅಡಿಗೆಯವನು ಅವನ್ನು ಚೂರಿಯಿಂದ ಕರಕರ ಕೊಯ್ಯುವಾಗ ಕೊಬ್ಬಿದ ಕೋಳಿಗಳು:— "ನಾವೂ ಮಿಕ್ಕುಳಿದವಂತೆ ಕೊರಗಿಬಿಟ್ಟಿದ್ದರೆ ಈಗಿನ ಪ್ರಸಂಗವೇ ನಮಗೆ ಬರುತ್ತಿರಲಿಲ್ಲ"ವೆಂದು ತಮ್ಮೊಳಗೆ ತಾವೇ ಗುಣುಗುಟ್ಟಿದವು.

ಸಾರಾಂಶ:— ಸಂಪತ್ತಿನಿಂದ ಮನುಷ್ಯನ ಸೊಕ್ಕು ಉಕ್ಕುವದು. ಆದರೆ ಅದೇ ಸಂಪತ್ತನು ಪರರು ಕಣ್ಣವಿಕ್ಕಿ ಸೂರೆಮಾಡುವಾಗ ಮನುಷ್ಯನು ಖಿನ್ನನಾಗುವನು.

---

## ೧೭೩— ಹಳ್ಳಿಯ ಇಲಿಯೂ ಪಟ್ಟಣದ ಇಲಿಯೂ.



ಒಂದು ಎಬಡ ಹಳ್ಳಿಯ ಇಲಿಯಿತ್ತು. ಅದರ ಮನೆಗೆ ಒಂದು ಕೊಬ್ಬಿದ ಇಲಿಯು ಬಂದಿತು. ಹಳ್ಳಿಯ ಇಲಿಯು ಬಂದ ಅತಿಥಿಯನ್ನು ಚನ್ನಾಗಿ ಸತ್ಕರಿಸಿತು. ತನ್ನ ಮನೆಯಲ್ಲಿರುವ, ಸಮೀಪದ ಹೊಲದಿಂದ ತಂದಿರುವ ಗೋದಿಯ ಬೆಳಸಿಗಳನ್ನೂ ಅವರೆಯ ಕಾಳುಗಳನ್ನೂ ಮತ್ತು ಕೆಲವು ಬಕ್ಕರಿಯ ತುಣುಕುಗಳನ್ನೂ ಅದರ ಮುಂದಿಟ್ಟಿತು. ಆವರೆ ಈ ಹಳ್ಳಿಯೂಟವು ಪಟ್ಟಣದ ಇಲಿಗೆ ಸೇರಲಿಲ್ಲ. ಆಗ ಅದು ಹಳ್ಳಿಯ ಇಲಿಗೆ:— “ ಕಕ್ಕಾ ! ನೀವು ಸಿಟ್ಟಾಗಿದ್ದರೆ ಮನಬಿಚ್ಚಿ ನಾನೊಂದು ಮಾತನಾಡುವೆನು; ಏನಿರೀ! ಈ ಬೇಸರಬರುವ ಸ್ಥಳದಲ್ಲಿ ನೀವು ಹೇಗೆ ಇರುವಿರಿ! ಈ ಅಡವಿ! ಸುತ್ತಲಿನ ಹುಲ್ಲು ! ಗಿಡಗಂಟಿ! ಗುಡ್ಡ ಮತ್ತು ನೀರಿನ ಝರಿಗಳು! ಇವುಗಳ ಹೊರತು ಇಲ್ಲಿರುವವೇನು! ಇಲ್ಲಿಯ ಹಕ್ಕಿಗಳ ಕಲಕಲಾಟಕ್ಕಿಂತ ನರಶಬ್ದವು ಚನ್ನಾದದ್ದಲ್ಲವೇ ! ಈ ಹಾಳು ಹಳುವಿಗಿಂತ ಹೊಳಲು ಉತ್ತಮವಲ್ಲವೇ ! ಹು! ಕೊಂಚ

ವಿಚಾರಿಸಿರಿ! ನನ್ನೊಡನೆ ನಗರಕ್ಕೆ ನಡೆಯಿರಿ! ಅಲ್ಲಿ ನಿಮಗೆ ಬಹಳ ಸುಖವುಂಟಾದೀತು!" ಎಂದು ಮೋಹಬರುವಂತೆ ಮಾತಾಡಿತು. ಹಳ್ಳಿಯ ಇಲಿಯು ನಗರದ ಇಲಿಯ ಮಾತಿಗೆ ಮರುಳುಗೊಂಡಿತು. ಅದರೊಡನೆ ಪಟ್ಟಣಕ್ಕೆ ಹೊರಟೇ ಬಿಟ್ಟಿತು. ಎರಡೂ ರಾತ್ರಿಗೆ ಪಟ್ಟಣಕ್ಕೆ ಮುಟ್ಟಿದವು. ಮುಂದೆ ಹೋಗುವಷ್ಟರಲ್ಲಿ ಒಂದು ದೊಡ್ಡಮನೆಯು ಬಂದಿತು. ಅಲ್ಲಿ ಮುನಿನ್ನದಿನವೇ ಮದುವೆಯಾಗಿತ್ತು. ಆ ಮನೆಯಲ್ಲಿ ಹೋಗಿ ಅಡಿಗೆಯ ಮನೆಯನ್ನು ಎರಡೂ ಇಲಿಗಳೂ ಹೊಕ್ಕವು. ಅಲ್ಲಿ ಅನೇಕ ತರದ ಊಟದ ಪದಾರ್ಥಗಳಿದ್ದವು. ಮನುಷ್ಯರಾರೂ ಇರಲಿಲ್ಲ. ಇದನ್ನು ನೋಡಿ ಹಳ್ಳಿಯ ಇಲಿಗೆ ಪರಮಾವಧಿ ಆನಂದವಾಯಿತು. ಆ ಮೇಲೆ ನಗರದ ಇಲಿಯು ಅದಕ್ಕೆ ಕಕ್ಕಾ! ನೀವು ಕೋಣೆಯ ನಡುವೆ ಕುಳಿತುಕೊಳ್ಳಿ; ನಾನು ಒಂದೊಂದೇ ಪದಾರ್ಥವನ್ನು ತಂದುಕೊಡುವೆನು. ತಿಂದಾದರೂ ನೋಡಿರಿ! ಅದರ ರುಚಿಯನ್ನು ಹೇಳಿರಿ; ಎಂದು ಉಬ್ಬುಬ್ಬಿ ಹೇಳಿತು. ನಂತರ ಒಂದೊಂದನ್ನೇ ತನ್ನ ಅತಿಥಿಗೆ ಅದು ತಂದು ಕೊಡಹತ್ತಿತು. ಅವನ್ನು ತಿಂದು ಹಳ್ಳಿಯ ಇಲಿಯು:— "ಅಹಹ! ಏನು ಮಿಷ್ಟಾನ್ನವಿದು!" ಎಂದು ಉದ್ಗಾರ ತೆಗೆಯಹತ್ತಿತು. ಹೀಗೆನ್ನುತ್ತ ಒಂದು ಗಳಿಗೆ ಅವು ಆನಂದದಲ್ಲಿ ಕಾಲಕಳೆದವು. ಇಷ್ಟರಲ್ಲಿಯೇ ಅಡಿಗೆಯ ಮನೆಯ ಬಾಗಿಲು ತೆರದಂತೆ ಸಪ್ಪಳವಾಯಿತು. ಕೂಡಲೇ ಎರಡೂ ಇಲಿಗಳು ಒಂದು ಮೂಲೆಯಲ್ಲಿ ಮುಚ್ಚಿಕೊಂಡು ಕುಳಿತವು. ಇಷ್ಟರಲ್ಲಿ ಎರಡು ಕೊಬ್ಬಿದ ಬೆಕ್ಕುಗಳು ಅಲ್ಲಿಗೆ ಬಂದವು. ಮತ್ತು ಅಬ್ಬರಿಸಹತ್ತಿದವು. ಈ ಅಬ್ಬರಕ್ಕೆ ಎರಡೂ ಇಲಿಗಳ ಕೈಕಾಲೇ ಹೋದವು. ಹಳ್ಳಿಯ ಇಲಿಯು ಹೆದರಿ ನಡುಗಹತ್ತಿತು. ಮತ್ತು:— "ಏನಯ್ಯಾ! ಇದೇಯೋ ನಿನ್ನ ನಗರದ ಸುಖವು! ಹೀಗಿದ್ದರೆ ನಿನ್ನ ಸುಖ ನಿನಗಿರಲಪ್ಪ! ನನಗೆ ಹಳ್ಳಿಯೇ ಒಳ್ಳಿತು! ಅಲ್ಲಿಯ ಹೊಲದಲ್ಲಿಯ ಕಾಳುಗಳೇ ಚನ್ನಾದವು! ಆದರೆ ಭಯದಿಂದ ನಡುಗಿಸುವ ಈ ನಗರದ ಪಕ್ವಾನ್ನಗಳು ನನಗೆ ಬೇಡಪ್ಪ! ಎಂದು ಪಟ್ಟಣದ ಇಲಿಗೆ ನುಡಿಯಿತು.

ಸಾರಾಂಶ:— ನಗರದ ನೋಟವು ನಯನಾನಂದ, ನಿಜ; ಸೌಕರ್ಯಗಳೂ ಹೆಚ್ಚು, ಒಪ್ಪಿಗೆ; ಆದರೆ ಇವೆಲ್ಲವುಗಳಂತೆ ದುಃಖವೂ ಇಲ್ಲಿ ಹೆಚ್ಚು: ಹಳ್ಳಿಯಲ್ಲಿ ಹೊಳಲ ಹೊನಲು ಕಾಣಬರುವದಿಲ್ಲ; ಆದರೆ ದುಃಖಗಳು ತೀರಕಡಿಮೆ.

———————

ಬಲವಾಗಿ ಕಚ್ಚಿಬಿಟ್ಟಿದ್ದರೆ, ಇತರ ಜನರು ನಿನ್ನ ಗೋಜಿಗೇ ಬರುವದಿಲ್ಲ;" ಎಂದಿತು.

ಸಾರಾಂಶ:— ನಮ್ಮನ್ನು ಪೀಡಿಸುತ್ತಿರುವ ಒಬ್ಬನನ್ನು ನಾವು ಕ್ಷಮಿಸಿದ ಮತ್ತೊಬ್ಬನು ನಮ್ಮನ್ನು ಪೀಡಿಸಲು ಬರುವದು ಜಗದರೂಢಿಯು. ಆದ್ದ ಮೊದಲೇ ನಾವು ಸಾವಧರಾಗುವದೊಳಿತು.

---

## ೧೭೬:—ಕುದುರೆಯೂ ಸಾರಂಗವೂ.

ಒಂದು ಕುದುರೆಯೂ ಒಂದು ಸಾರಂಗವೂ ಕೂಡಿಯೇ ಒಂದೇ ಗದ್ದೆಯಲ್ಲಿ ಮೇಯುತ್ತಿದ್ದವು. ಅವೆರಡೂ ತಮ್ಮೊಳಗೆ ವಾದಿಸಾಡಿದವು. ಸಾರಂಗವು ತನ್ನ ಕೋಡುಗಳ ಬಲದಿಂದ ಕುದುರೆಯನ್ನು ಅಲ್ಲಿಂದ ಓಡಿಸಿಬಿಟ್ಟಿತು. ಆಗ ಇದರ ಸೇಡು ತೀರಿಸಿಕೊಳ್ಳಬೇಕೆಂದು ಕುದುರೆಯು ಮನುಷ್ಯನ ಬಳಿಗೆ ಬಂದಿತು. ನನಗೆ ಬೆಂಬಲವಾಗಿರೆಂದು ಅವನಿಗೆ ಬೇಡಿಕೊಂಡಿತು. ಮನುಷ್ಯನು ಅದರ ಮೇಲೆ ತಡಿಯನ್ನು ಹಾಕಿ, ಬಾಯಲ್ಲಿ ಕಡಿವಾಣವನ್ನು ಕೊಟ್ಟನು. ಆ ಮೇಲೆ ಅವನು ಅದರ ಮೇಲೆ ಕುಳಿತು, ಚಬಕದಿಂದ ಒಮ್ಮೊಮ್ಮೆ ಕುದುರೆಯನ್ನು ಹೊಡೆಯುತ್ತ ಅದನ್ನು ಹಾರಿಸ್ಯಾಡಹತ್ತಿದನು. ಆ ಹೊಡೆತಗಳನ್ನು ಕುದುರೆಯು ಸುಮ್ಮನೇ ಸಹನ ಮಾಡಿ



ಕೊಂಡಿತು. ಕಡೆಗೆ ಆ ನಾರಂಗದ ಬೆನ್ನಟ್ಟಿ ಅದರ ಸೊಕ್ಕನ್ನು ಇಳಿಸಿತು. ಆ ಮೇಲೆ ಕುದರೆಯು ಆ ಮನುಷ್ಯನಿಗೆ:— ' ನಿನ್ನಿಂದ ಉಪಕಾರವಾಯಿತು ನನಗೆ! ಎಂದೂ ಅವನ್ನು ಮರೆಯಲಾರೆ ನಾನು ಕೈಕೊಂಡ ಕಾರ್ಯವಾಯಿತೀಗ! ಈಗ ಈ ಕಡಿವಾಣ ತಡಿಗಳನ್ನು ತೆಗೆದೊಗೆದು ನನಗೆ ಹೋಗಗೊಡು; ' ಎಂದು ಸವಿನಯ ಕೇಳಿಕೊಂಡಿತು. ಆಗ ಆ ಮನುಷ್ಯನು:— ' ಗೆಳೆಯಾ! ನೀನಿಷ್ಟು ಉಪಯೋಗಿರುವೆಯೆಂದು ನನಗೆ ಮೊದಲು ತಿಳಿದಿರಲಿಲ್ಲ ಬಿಡು! ಈಗ ಈ ಬಂಧನದಿಂದ ನೀನು ಮುಕ್ತನಾಗಲಾರೆ ಯೆಂದೇ ನನಗೆ ಕಾಣುತ್ತದೆ.

---

## ೧೭೭:— ಗರೂಡವೂ ಟಿಟ್ಟಿಭವೂ.

ಒಂದು ಟಿಟ್ಟಿಭಕ್ಕೆ ತಾನು ಬಹಳ ಜಾಣನೆಂದು ಬಲು ಗರ್ವವಿತ್ತು. ಎಲ್ಲ ಪಕ್ಷಿಗಳ ರಾಜ್ಯಸೂತ್ರ ತನ್ನ ಕೈಯಲ್ಲಿ ಬರದೇ ಆ ಪಕ್ಷಿಗಳಿಗೆ ಸುಖವು ಸಿಗಲಾರ ದೆಂದು ಅದಕ್ಕೆ ಅನಿಸುತ್ತಿತ್ತು. ಆ ಮೇಲೆ ಅದು ಗರುಡನಿಗೆ ತನ್ನನ್ನು ಪ್ರಧಾನ ಮಂಡಲದಲ್ಲಿ ಸೇರಿಸಿಕೊಳ್ಳಲು ಕೇಳಿಕೊಂಡಿತು. ಅದು:— " ಮಹಾರಾಜರೇ! ನಾನು ಆಸ್ಥಳಕ್ಕೆ ಯೋಗ್ಯನಿರುತ್ತೇನೆ, ನನ್ನ ಸ್ವರವೆಷ್ಟು ಸವಿಯಾಗಿದೆ! ನಾನು ಎಷ್ಟು ತೀವ್ರಹಾರುತ್ತೇನೆ! ಇವೆಲ್ಲವುಗಳು ತಮಗೆ ಗೊತ್ತಿಲ್ಲವೆಂತಲ್ಲ; ಇದಲ್ಲದೇ ಇನ್ನ ಅನೇಕ ಸದ್ಗುಣಗಳು ನನ್ನಲ್ಲಿ ಮನೆಮಾಡಿಕೊಂಡಿವೆ; ಎಂದೆಷ್ಟೋ ಬಗೆಯಾಗಿ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಳ್ಳಹತ್ತಿತು. ಹೀಗೆ ಅದು ಬಡಬಡಿಸುತ್ತಿರಲು ನಡುವೇ ಅದನ್ನು ತಡೆದು ಗರುಡವು:— " ಎಲೋ! ನಿನಗೆ ಮೇಲೆ ಮೇಲೆ ಹಿರಿಹಿರಿ ತಿರುಗಲು ಬೇಕು; ಇಲ್ಲವೆ ಜಂಬ ಕೊಚ್ಚಲು ಬೇಕು. ಇಂಥ ನಿನ್ನನ್ನು ನನ್ನ ಪ್ರಧಾನ ಮಂಡಲದಲ್ಲಿ ಸೇರಿಕೊಂಡರೆ ಉಳಿದ ಪಕ್ಷಿಗಳು ನನಗೇನಂದಾವು! " ಎಂದಂದಿತು.

ಸಾರಾಂಶ:— ಮಾತುಗುಳಿಗಳು ಮಹತ್ವದ ಅಧಿಕಾರಸ್ಥಳಗಳಿಗೆ ಎಂದೂ ಯೋಗ್ಯರಾಗಿರುವದಿಲ್ಲ.

---

## ೧೭೮:— ಒಕ್ಕಲಿಗನೂ ಇಲಿಯೂ.

ಒಬ್ಬ ಒಕ್ಕಲಿಗನು ಬಹಳ ವಿನೋದಸ್ವಭಾವದವನಿದ್ದನು. ಒಂದು ದಿವಸ ದುರ್ದೈವದಿಂದ ಅವನ ಮನೆಗೆ ಬೆಂಕಿಹತ್ತಿತು. ಆಗ ಒಂದು ಇಲಿಯು ಮನೆಯೊಳಗಿಂದ ಜೀವುಳಿಸಿಕೊಳ್ಳಲೆಂದು ಒದ್ದಾಡುತ್ತ ಓಡಿ ಬರುತ್ತಿತ್ತು. ಅದನ್ನು ಕಂಡು ಒಕ್ಕಲಿಗನು ಮತ್ತೆ ಅದನ್ನು ಹಿಡಿದವನೇ ಉರಿಯಲ್ಲಿ ಹಾಕಿ:— " ಎಲೇ! ಇಷ್ಟು ದಿನಗಳವರೆಗೆ ನಿನ್ನ ಚರಿತಾರ್ಥವನ್ನು ಸಾಗಿಸಿದ್ದನ್ನು ಮರೆತು, ಸಂಕಟಸಮಯದಲ್ಲಿ

ನನ್ನನ್ನು ಬಿಟ್ಟು ಹೋಗುವ ನಿನ್ನ ಕೃತಘ್ನತನಕ್ಕೆ ಏನನ್ನಬೇಕು;" ಎಂದು ನುಡಿದನು.

ತಾತ್ಪರ್ಯ:--- ಜೀವದ ಮೇಲೆ ಪ್ರಸಂಗ ಬರುವವರೆಗೆ ಎಲ್ಲ ಪುಣ್ಯಪಾಪ, ದುರ್ಗುಣ, ಸದ್ಗುಣ; ಹಾಗೆ ಪ್ರಸಂಗ ಬಂದಾಗ್ಯೆ ಈ ಎಲ್ಲವುಗಳಿಗೆ ಶರಣು ಹೊಡೆದು, ಮನುಷ್ಯನು ತನ್ನ ಜೀವವನ್ನು ಉಳಿಸಿಕೊಳ್ಳಲೆತ್ನಿಸುವನು.

---

## ೧೭೯--- ಜಾಣ ಕತ್ತೆಯೂ.

ಒಬ್ಬ ಮುದುಕನು ತನ್ನ ಕತ್ತೆಯನ್ನು ಮೇಯಿಸುತ್ತಿದ್ದನು. ಅಷ್ಟರಲ್ಲಿ ಆ ಸ್ಥಳಕ್ಕೆ, ಅವನ ಹಗೆಯು ಸಾಗಿಬಂದನು. ಆಗ ಆ ಮುದುಕನು, ಕತ್ತೆಗೆ ಅಲ್ಲಿಂದ ಓಡಿಹೋಗಲು ಕರೆದನು. ಅದಕ್ಕೆ ಕತ್ತೆಯು:— "ಅವನಾದರೂ ನನ್ನ ಹೆಗಲ ಮೇಲೆ ಕಂಟಲೆಯನ್ನು ಹೇರುವವನೇ ಅಲ್ಲನೇ!" ಎಂದು ನುಡಿಯಿತು. ಮುದುಕನು:— "ಓಹೋ! ಹೇರದೆ ಏನು ಮಾಡುವನು!" ಎಂದು ಪ್ರತಿಮಾತಾಡಿದನು. "ಹೀಗಿದ್ದರೆ ನಾನು ಇಲ್ಲಿಂದ ಕದಲುವದೇ ಇಲ್ಲ; ಯಾಕಂದರೆ ಕಂಟಲೆಯನ್ನು ಹೇರುವದು ಎಲ್ಲಿಹೋದರೂ



ನನಗೆ ಬಿಟ್ಟಿದ್ದಲ್ಲ; ಅಂದಮೇಲೆ ನೀನು ಏನು! ಅವನೇನು! ಎಲ್ಲರೂ ಸರಿಯೇ ಎಂದು ಕತ್ತೆಯು ಸ್ಪಷ್ಟವಾಗಿ ನುಡಿದು ಬಿಟ್ಟಿತು.

ಸಾರಾಂಶ:—ತಮ್ಮ ಸ್ಥಿತಿಯಲ್ಲಿ ಏನೂ ಪಲ್ಲಟವಾಗದಿದ್ದರೆ, ಯಾರ ಸೇವೆಯನ್ನು ಮಾಡಿದರೂ ಸರಿಯೇ. ಕಾಡಿಸುವಂಥ ಇಬ್ಬರು ಒಡೆಯರಿದ್ದರೆ ಅವರಲ್ಲಿ ಇಂಥವನೇ ಉತ್ತಮನೆಂದು ಹೇಗೆತಾನೆ ಹೇಳುವದು? ಮುನ್ನೋಡಿ ದೈವದಿಂದ ದೊರಕಿದವನ ಊಳಿಗವನ್ನು ಮಾಡುವದು ಉತ್ತಮ ಮಾರ್ಗವು.

## ೧೮೦:— ಸಿಂಪು.

ಸಮುದ್ರತೀರದಲ್ಲಿರುವ ಅನೇಕರು ಸಿಂಪಿನೊಳಗಿನ ಮಾಂಸವನ್ನು ತಿನ್ನುತ್ತಾರೆ. ಒಮ್ಮೆ ಒಳಗೆ ಮಾಂಸವಿಲ್ಲದ ಒಂದು ದೊಡ್ಡ ಸಿಂಪು ಒಂದು ಕಡೆಗೆ ಬಿದ್ದಿತ್ತು. ಸೂರ್ಯನ ಪ್ರಕಾಶವಲ್ಲಿ ಅದು ಮುತ್ತಿನಂತೆ ಹೊಳೆಯುತ್ತಿತ್ತು. ಅದನ್ನು ನೋಡಿ ಒಂದು ಸಣ್ಣ ಸಿಂಪಿನಲ್ಲಿಯ ಪ್ರಾಣಿಯು ತನ್ನ ತಾಯಿಗೆ:— " ಅವ್ವಾ! ಆ ಸಿಂಪು ನೋಡೆ! ಎಷ್ಟು ತೇಜಸ್ವಿ ಮತ್ತು ಸುಂದರವಾಗಿದೆ. ಬಣ್ಣದಲ್ಲಿಯೂ ಹೊಳಪಿನಲ್ಲಿಯೂ ಇದನ್ನು ಸರಿಗಟ್ಟುವ ಪ್ರಾಣಿಗಳು ಈ ಸಮುದ್ರ ತೀರದಲ್ಲಿಯಂತೂ ಯಾವವೂ ಇದ್ದಂತೆ ತೋರುವದಿಲ್ಲ; ನಾನು ಬೆಳೆದು ಇದರಂತೆ ಕಾಣಲಿಕ್ಕೆ ನನಗೆ ಅವ್ವಾ, ಇನ್ನು ಎಷ್ಟು ದಿವಸಗಳು ಬೇಕೆ? ಅಲ್ಲಿಯವರೆಗೆ ಹಾದಿಯನ್ನು ನೋಡಿ ನೋಡಿ ನಾನು ದಣಿಯುವೆನು ಮಾತ್ರ; " ಎಂದು ಮಾತಾಡಿತು. ಇದನ್ನು ಕೇಳಿ ತಾಯಿಯು:— " ಛೀ! ಹುಚ್ಚೀ! ಈ ಸಿಂಪಿಗೆ ಈಗಿನ ಸ್ಥಿತಿಯು ಪ್ರಾಪ್ತವಾಗಲು ಅದರ ಸೌಂದರ್ಯವೇ ಕಾರಣವಾಯಿತು; ಇದೇಕೆ ನಿನ್ನ ಲಕ್ಷ್ಯದಲ್ಲಿ ಬರಲೊಲ್ಲದು, ನೀನೂ ಇದರಂತೆ ಕೊಬ್ಬಿ ಹೊಳೆಯಹತ್ತಿದೆಯೆಂದರೆ ನಿನ್ನಲ್ಲಿಯ ಮಾಂಸ ತಿನ್ನಲು ಜನರು ನಿನ್ನನ್ನು ಹೊಡೆದುಹಾಕಿಬಿಡುತ್ತಾರೆ; ಆದ್ದರಿಂದ ನಿನ್ನ ನಾಶಕ್ಕೆ ಕಾರಣವಾಗುವ ಆ ದೊಡ್ಡಿಸ್ತನವನ್ನು ನೀನು ಎಂದೂ ಅಪೇಕ್ಷಿಸಬೇಡ, ಕಂಡೆಯಾ; " ಎಂದು ತನ್ನ ಮಗುವಿಗೆ ಬುದ್ಧಿಗಲಿಸಿತು.

ಸಾರಾಂಶ:— ಚಿಕ್ಕಂದಿನ ಸೊಗಸು ದಿನಹೋದಂತೆ ಕಡಿಮೆಯಾಗುವದೇ ಹೊರತು ಹೆಚ್ಚಿಸುವದಿಲ್ಲ. ಆಗಿನ ಆನಂದವೇ ಆನಂದ! ಅದು ಮುಂದೆ ಬಾರದು.

---

## ೧೮೧— ಒಬ್ಬ ಗೃಹಸ್ಥನೂ ಅವನ ಮೂರ್ಖ ಚಾಕರನೂ.

ಒಬ್ಬ ಗೃಹಸ್ಥನ ಚಾಕರನು ಬಲು ಮೂರ್ಖನಾಗಿದ್ದನು. ಮೇಲಿಂದ ಮೇಲೆ ಆ ಗೃಹಸ್ಥನು ಅವನಿಗೆ " ನೀನು ಮೂರ್ಖರಿಗೆಲ್ಲಾ ಅರಸನಾಗಿರುವಿ " ಎಂದೆನ್ನುತ್ತಿದ್ದನು. ಒಂದು ದಿನ ಅವನು ಆ ಚಾಕರನಿಗೆ ಹೀಗೇ ಅನ್ನಲು ಅವನು ಸಿಟ್ಟಾಗಿ ಆ ಗೃಹಸ್ಥನಿಗೆ:— " ನೀವನ್ನುವಂತೆ ನಾನು ನಿಜವಾಗಿಯೂ ಎಲ್ಲ ಮೂರ್ಖರಿಗೆ ಅರಸನಾದರೆ ಬಹಳೇ ಚನ್ನಾಗುತ್ತದೆ; ಯಾಕಂದರೆ ಆಗ ಜಗದಲ್ಲಿಯ ನಿಮ್ಮ ಎಲ್ಲ ಜನರೂ ನನ್ನ ಪ್ರಜೆಗಳಾಗುತ್ತಾರೆ; " ಎಂದಂದನು.

ತಾತ್ಪರ್ಯ:— ವಸ್ತುತಃ ಜಗದಲ್ಲಿಯ ಜನರೆಲ್ಲರೂ ಮೂರ್ಖರೇ. ಆದರೆ ಅವರಲ್ಲಿಯೇ ಸ್ವಲ್ಪ ಕಡಿಮೆ ಮೂರ್ಖನಾದವನನ್ನು ನಾವು ಜಾಣನೆಂದು ಕರೆಯುತ್ತೇವೆ, ಇಷ್ಟೇ. ಪ್ರತಿಯೊಬ್ಬನು ಒಂದೊಂದು ರೀತಿಯಿಂದ ತನ್ನ ಮೂರ್ಖತನವನ್ನು ಪ್ರಕಟಮಾಡುತ್ತಾನಲ್ಲದೆ ಮತ್ತೇನು ?

## ೧೪೨:— ಜಿಪುಣ ಮನುಷ್ಯನು.

ಒಬ್ಬ ಜಿಪುಣ ಮನುಷ್ಯನು ತನ್ನ ಹಣವನ್ನೆಲ್ಲ ಹೊಲದಲ್ಲಿ ಹುಗದಿಟ್ಟಿದ್ದನು. ದಿವಸಕ್ಕೆ ಎರಡು ವೇಳೆ ಹೊಲಕ್ಕೆ ಹೋಗಿ ಆ ಹುಗಿದಿಟ್ಟ ಸ್ಥಳವನ್ನು ನೋಡಿ ಹಿರಿ ಹಿರಿ ಹಿಗ್ಗಿ ತಿರುಗಿ ಮನೆಗೆ ಬರುತ್ತಿದ್ದನು. ಈ ಇವನ ದಿನಾಲು ನಡೆಸಿದ ನಿಯಮವನ್ನು ಅವನ ಒಬ್ಬ ಚಾಕರನು ನೋಡಿದನು. ಪ್ರತಿದಿನವೂ ತನ್ನ ಧಣಿಯು ಹೊಲಕ್ಕೆ ಹೋಗಿ ಒಂದೇ ಒಂದು ಸ್ಥಳವನ್ನು ನೋಡಿ ಬರುತ್ತಿರುವದರಿಂದ ಆ ಸ್ಥಳದಲ್ಲಿ ಏನಾದರೂ ಹುಗಿದಿಟ್ಟಿರಬೇಕೆಂದು ಆ ಚಾಕರನು ಯೋಚಿಸಿದನು. ಒಂದು



ದಿನ ರಾತ್ರಿಯಲ್ಲಿ .ಹೊಲದಲ್ಲಿಯ ಆ ಸ್ಥಳವನ್ನು ಆ ಚಾಕರನು ಅಗಿದು ನೋಡಿದನು. ಆಗ ಅವನಿಗೆ ಹೇರಳವಾದ ಸಂಪತ್ತು ಅಲ್ಲಿ ಕಾಣಿಸಿತು. ಅದೆಲ್ಲವನ್ನು ತೆಗೆದುಕೊಂಡವನೇ ಆ ಚಾಕರನು ಓಡಿ ಹೋಗಿಬಿಟ್ಟನು. ಮರುದಿನ ಆ ಜಿಪುಣನು ನಿಯಮದಂತೆ ಹೊಲಕ್ಕೆ ಹೋಗಿ ನೋಡುತ್ತಾನೆ, ಅಲ್ಲೇನಿದೆ ಮಣ್ಣು. ಎಲ್ಲವೂ ಹುಗಿದಿಟ್ಟ ಹಣವು ಹೋಗಿಬಿಟ್ಟಿತ್ತು. ಈ ರೀತಿಯನ್ನು ನೋಡಿದಕೂಡಲೇ ಆ ಜಿಪುಣನು ಎದೆಎದೆ ಬಡಕೊಂಡನು; ತಲೆಯಮೇಲೆ ಮಣ್ಣು ಸುರಿವಿಕೊಂಡನು; ಇನ್ನೆಷ್ಟೋ ಬಗೆಯಿಂದ ಆಕ್ರೋಶ ಮಾಡಹತ್ತಿದನು. ನೆರೆಯವನು ಇಷ್ಟರಲ್ಲಿ ಅವನಿದ್ದಲ್ಲಿಗೆ ಬಂದು ಅಳುವದೇತಕೆಂದು ವಿಚಾರಿಸಿದನು. ಆಗ ತನ್ನ ಹಣವನ್ನು ಯಾರೋ ಕದ್ದೊಯ್ದಿದ್ದಾರೆಂಧು ಆ ಜಿಪುಣನು ಆ ನೆರೆಯವನಿಗೆ ಹೇಳಿದನು. ಇದನ್ನು ಕೇಳಿ ಆ ನೆರೆಯವನು:— " ಎಲೋ! ನಿನ್ನದೇನೂ ಹೋಗಿಲ್ಲವೆಂದು ನನಗೆ ತೋರುತ್ತದೆ; ಹೋದಹಣವನ್ನು ಮನಕ್ಕೆ ತಾರದೆ ಎಂದಿನಂತೆ ಹಣಹುಗಿದಿಟ್ಟ ಸ್ಥಳವನ್ನು ನೋಡುತ್ತಿರೆಂದರೆ ತೀರಿತು; ಅದೇ ನಿನಗೆ ಆನಂದವು; " ಎಂದು ಪ್ರತಿಮಾತಾಡಿದನು.

ಸಾರಾಂಶ:— ಉಣ್ಣಿ ಕೆಚ್ಚಲೊಳಿದ್ದು | ಉಣ್ಣದದು ನೊರೆಹಾಲು ||
ಪುಣ್ಯವ ಮಾಡಿ ಉಣಲೊಲ್ಲದವನು | ಉಣ್ಣಿಗೂ ಕಷ್ಟ ಸರ್ವಜ್ಞ ||

ಎಂಬಂತೆ ತಾನು ಭೋಗಿಸದೆ ಎಷ್ಟು ಹಣವು ಮನುಷ್ಯನಲ್ಲಿದ್ದೇನು? ಯಾವನೋ ಒಬ್ಬನು ಇಂಥವನ ಹಣವನ್ನೇ ಕೊಚ್ಚಿಕೊಂಡು ಹೋಗುತ್ತಾನೆ. ಇಂಥ ಜಿಪುಣರ ಹಣೆಯಬರಹವೇ ಇದು.

———————

## ೧೮೩:— ಆನೆಯೂ ಕಪ್ಪೆಯೂ.

ಒಂದು ನದಿಯ ದಂಡೆಯ ಮೇಲಿನ ಹುಲ್ಲಿನಲ್ಲಿ ಕೆಲವು ಕಪ್ಪೆಗಳು ಜಿಗಿದಾಡುತ್ತ ಸೊಗಸುಗೊಳ್ಳುತ್ತಿದ್ದವು. ಈ ರೀತಿಯನ್ನು ನದಿಯಲ್ಲಿರುವ ಆನೆಗಳು ನೋಡಿದವು. ತಮಗೂ ಹೀಗೆ ಹಾರಾಡಲಿಕ್ಕೆ ಬರದ್ದಕ್ಕೆ ಖೇದಗೊಂಡವು. ಇಷ್ಟರಲ್ಲಿ ಹಾರಾಡುವ ಆ ಕಪ್ಪೆಗಳನ್ನು ಕಂಡದ್ದೇ ಒಂದು ಹದ್ದು ಆಕಾಶದಿಂದ ಭರ್ರನೇ ಭೂಮಿಗಿಳಿದು ಅವೆಲ್ಲವನ್ನು ಕಚ್ಚಿಕೊಂಡು ಹೋಯಿತು. ಇದನ್ನು ನೋಡಿ ಒಂದು ಆನೆಯು ಉಳಿದೆಲ್ಲವುಗಳಿಗೆ:— "ಮೈಯಲ್ಲಿ ಹಾರಾಡಲು ಹುರುಳಿದ್ದು ಮರಣವನ್ನು ಹೊಂದುವವಕ್ಕಿಂತ ಆ ಹುರುಳಿಗೇ ಹೊರತಾಗಿರುವದು ಲೇಸು," ಎಂದು ನುಡಿಯಿತು.

ಸಾರಾಂಶ:— ಈಶ್ವರನು ಜನ್ಮತಃ ಕೊಟ್ಟ ಗುಣಗಳಿಂದಲೇ ಆ ಆ ಪ್ರಾಣಿಗಳಿಗೆ ಹಿತಕರವೇ ಹೊರತು ಬೇರೆ ಬಗೆಯಾಗಿರಲು ಬಯಸುವದು ಬಲು ಕೆಡಕು.

———————

## ೧೮೪:— ಇಲಿಯೂ ಆಲದ ಹಣ್ಣೂ.

ಒಂದು ಆಲದ ಮರದ ಬುಡದಲ್ಲಿ ಕೆಲವು ಇಲಿಗಳು ವಾಸವಾಗಿದ್ದವು. ಹಸಿದಾಗೆಲ್ಲ ಹಣ್ಣು ತಿನ್ನಲು ಮರವೇರಿ ಹೋಗುವವಕ್ಕಿಂತ ಮರವನ್ನೇ ಕೆಡಿವಿಬಿಟ್ಟರೆ ಒಳಿತೆಂದು ಅವಕ್ಕೆ ಅನಿಸಿತು. ಹೀಗೆ ವಿಚಾರಮಾಡಿ ಕೆಲವು ಇಲಿಗಳು ಗಿಡದ ಬೇರುಗಳನ್ನು ಕಡಿಯಲು ಪ್ರಯತ್ನಮಾಡಹತ್ತಿದವು. ಆ ಇಲಿಗಳ ಕೃತ್ಯವನ್ನು ಆ ಗುಂಪಿನಲ್ಲಿ ಕೆಲ ಜಾಣ ಇಲಿಗಳು ಕಂಡು:— "ಅಣ್ಣಾಗಳಿರಾ! ಇದನ್ನೇನು ನಡಿಸಿರುವಿರಿ ನೀವು? ನಿಮ್ಮ ಕಾರ್ಯದಿಂದ ಮುಂದೇನಾಗುವದೆಂಬದನ್ನು ಯೋಚಿಸಿದಿರಾ? ಗಿಡವನ್ನು ಬೀಳಗೆಡವಿ ಮುಂದೆ ಜೀವವಿರುವವರೆಗೆ ಸಿಗುವ ಹಣ್ಣುಗಳಿಗೆ ನಾವೆಲ್ಲರೂ ಎರವಾಗುವೆವೆಂಬದನ್ನು ನೆನೆದಿರಾ?" ಎಂದು ಅವಕ್ಕೆ ಬುದ್ಧಿಯನ್ನು ಕಲಿಸಿದವು.

ಸಾರಾಂಶ:— ಆ ಕ್ಷಣಕ್ಕೆ ಸಿಗುವ ಸ್ವಲ್ಪ ಸುಖವನ್ನು ನೆನೆದು, ಹಿಂದುಮುಂದು ವಿಚಾರಿಸದೆ ಏನೊಂದು ಕೆಲಸವನ್ನು ನಾವು ಮಾಡಿದರೆ ನಮಗೆ ಆ ಬಗ್ಗೆ ಪಶ್ಚಾತ್ತಾಪವಾಗದೆ ಇರದು. ಆದ್ದರಿಂದ ಯಾವದೊಂದು ಕಾರ್ಯವನ್ನು ಮಾಡುವಾಗ ಬಹು ದೂರ ವಿಚಾರಿಸಿ ನೋಡಬೇಕು. ಇದೇ ಜಾಣರ ಲಕ್ಷಣವು.

## ೧೮೫:— ಆನೆಯೂ ಗರುಡವೂ.

ಒಂದು ಆನೆಯು ನೆಲದ ಮೇಲೆ ನಡೆನಡೆದು ಬೇಸತ್ತಿತು. ಆಕಾಶದಲ್ಲಿದ್ದು ಭೂಮಿಯ ಸೊಬಗನ್ನು ನೋಡುವದು ಅದಕ್ಕೆ ಬಲು ಅಂದವೆನಿಸಿತು. ಆ ಕೂಡಲೇ ಅದು ಪಕ್ಷಿಗಳ ಬಳಿಗೆ ಹೋಗಿ:— "ನನ್ನನ್ನು ಕರೆದುಕೊಂಡು ಆಕಾಶದಲ್ಲಿ ಅಲೆದಾಡಿಸಿ ಭೂಮಿಯ ಸೊಬಗನ್ನು ತೋರಿಸಿದವರಿಗೆ ನಾನು ಭೂಮಿಯ ಹೊಟ್ಟೆಯಲ್ಲಿಯ ರತ್ನದ ಖಣಿಯನ್ನೇ ತೋರಿಸಿ ಬಿಡುವೆನು" ಎಂದು ಅವಕ್ಕೆ ಹೇಳಿತು. ಗರುಡಪಕ್ಷಿಯು ಆನೆಯ ಮಾತಿಗೆ ಒಪ್ಪಿತು. ಅದನ್ನು ತೆಗೆದುಕೊಂಡು ಆಕಾಶವಲ್ಲೆಲ್ಲ ಅಲೆದಾಡಿಸಿ ಅಲ್ಲಿಂದ ಪೃಥ್ವಿಯ ಸೌಂದರ್ಯವನ್ನೆಲ್ಲ ತೋರಿಸಿ ಆನೆಯನ್ನು ಮತ್ತೆ ನೆಲಕ್ಕೆ ತಂದು ಇಳಿಸಿತು. ಆ ಮೇಲೆ ಗರುಡನು ಆನೆಗೆ:— "ಎಲೋ ಎಲ್ಲಿದೆ ನಿನ್ನ ರತ್ನದ ಖಣಿಯು? ತೋರಿಸು ನಡೆ;" ಎಂದು ಕೇಳಿತು. ಆಗ ಆನೆಯು ಹುಚ್ಚು ಹಿಡಿದಂತೆ ತೋರಿಸಿ ಆ ಗರುಡನನ್ನು ವಂಚಿಸಬೇಕೆಂದು ವಿಚಾರಿಸಿತು. ಈ ಅದರ ರೀತಿಯನ್ನು ನೋಡಿ ಗರುಡಪಕ್ಷಿಗೆ ಬಲು ಸಿಟ್ಟುಬಂತು. ಕೂಡಲೇ ಅದು ತನ್ನ ಉಗುರುಗಳಿಂದ ಅದರ ಆಯಕಟ್ಟಿನ ಸ್ಥಳಕ್ಕೆ ಚುಚ್ಚಿ ಆ ಆನೆಯನ್ನು ಕೊಂದುಬಿಟ್ಟಿತು.



ತಾತ್ಪರ್ಯವೇನಂದರೆ:— ನುಡಿಯಂತೆ ನಡೆಯಿರಬೇಕು. ಇಲ್ಲವಾದರೆ ಜನರು ನಮ್ಮನ್ನು ವಂಚಕರೆಂದು ಭಾವಿಸುವರು. ಒಮ್ಮೊಮ್ಮೆ ಹೀಗೆ ಪರರನ್ನು ವಂಚಿಸುವ ಭರದಲ್ಲಿ ನಮ್ಮ ಪ್ರಾಣಕ್ಕೆ ಎರವಾಗಬೇಕಾಗುತ್ತದೆ.

---

## ೧೮೬:— ಸಿಂಹವೂ ಕಪ್ಪೆಯೂ.



ಒಂದು ಸಿಂಹವು ಸರೋವರಕ್ಕೆ ನೀರು ಕುಡಿಯಲು ಹೋಗಿ ಅಲ್ಲಿಯ ಕಪ್ಪೆಗಳ ಕಲಕಲಾಟವನ್ನು ಕೇಳಿ ಭಯಗೊಂಡಿತು. ಆಗದು ಸುತ್ತಲೂ ನೋಡಿ, ಯಾರೂ ಇರದೆ ಇಷ್ಟು ಸಪ್ಪಳವು ಬಿಟ್ಟು ಬಿಟ್ಟು ಎತ್ತಲಿಂದ ಬರುತ್ತಿರಬಹುದೆಂದು ಯೋಚಿಸಿ ನೋಡಿತು. ಕಡೆಗದು ಚಿಂತಿಸಹತ್ತಿತು, ಆದರೆ ಓಡಿ ಹೋಗದೆ ಕೊಂಚ ಧೈರ್ಯದಿಂದ ಅಲ್ಲಿಯೇ ವಿಚಾರಿಸುತ್ತ ನಿಂತಿರುವಷ್ಟರಲ್ಲಿ ಕಿರುಚುತ್ತ ಕಪ್ಪೆಯೊಂದು ನೀರೊಳಗಿಂದ ಕಡೆಗೆ ಬಂದಿತು. ಅದನ್ನು ನೋಡಿ ಆ ಸಿಂಹನಿಗೆ ಅತಿ ಕ್ರೋಧ ಉಂಟಾಯಿತು. ತನ್ನಲ್ಲಿ ತಾನೆ ಅದು;— "ಇದೊಂದು ಯಃಕಶ್ಚಿತ ಪ್ರಾಣಿಯು ನನ್ನಂಥವ

ನನ್ನು ಬೆದರಿಸಬೇಕೆ! ಛೀ! ಧಿಕ್ಕಾರಯಿರಲಿ ನನಗೆ! ಆಗದು!" ಎಂದದ್ದೇ ಆ ಕಪ್ಪೆಯನ್ನು ತನ್ನ ಪಂಜರದಿಂದ ಸಿಂಹವು ಹರಿದುಬಿಟ್ಟಿತು.

ಸಾರಾಂಶ:— ಭಯಬಂದಾಗೆಲ್ಲ ನಾವು ಅದರ ಕಾರಣವನ್ನು ಸ್ವಲ್ಪ ಧೈರ್ಯದಿಂದ ಶೋಧಿಸಬೇಕು; ಕೊಂಚಕಾಲದಲ್ಲಿಯೇ ಅದು ಅತಿ ಕ್ಷುಲ್ಲಕವೆಂದು ನಮ್ಮ ನಿದರ್ಶನಕ್ಕೆ ಅನೇಕಸಲ ಬರುವದುಂಟು. ಆದ್ದರಿಂದ ಭಯವುಂಟಾಗುವ ಪ್ರಸಂಗ ಬಂದಾಗ ಒಮ್ಮೆಲೇ ಬೆದರಿ ನಮ್ಮ ಕೈಕಾಲುಗಳನ್ನು ನಾವು ಕಳೆದುಕೊಳ್ಳಬಾರದು.

---

## ೧೪೭:— ಹಕ್ಕಿಯೂ ಬೇಟೆಗಾರನೂ.

ಒಬ್ಬ ಬೇಟೆಗಾರನು ಒಂದು ಅಡವಿಯಲ್ಲಿ ಹಕ್ಕಿಗಳನ್ನು ಹಿಡಿಯಬೇಕೆಂದು ಬಲೆಯನ್ನು ಪಸರಿಸುತ್ತಿದ್ದನು. ಅದನ್ನು ಕಂಡು ಹತ್ತರವೇ ಮರದಮೇಲೆ ಕುಳಿತಿರುವ ಒಂದು ಹಕ್ಕಿಯು ಆ ಬೇಟೆಗಾರನಿಗೆ:—"ಎಲೋ ಇದನ್ನೇನು ನಡೆಸಿರುವಿ ನೀನು ?" ಎಂದು ಕೇಳಿತು. ಅದಕ್ಕೆ ಆ ಬೇಟೆಗಾರನು ತಾನೊಂದು ಸುಂದರವಾದ ಪಟ್ಟಣವನ್ನು ಹಕ್ಕಿಗಳ ಸಲುವಾಗಿಯೇ ಕಟ್ಟಹತ್ತಿರುವನೆಂದು ಉತ್ತರ ಕೊಟ್ಟನು. "ಈ ಪಟ್ಟಣದಲ್ಲಿರುವ ಹಕ್ಕಿಗಳಿಗೆ ಯಾವ ಕೊರತೆಯೂ ಇಲ್ಲ; ಕಾಳು ನೀರುಗಳಿಗೆ ಕಡಿಮೆ ಇಲ್ಲ; ಇರಲಿಕ್ಕೆ ಸುಂದರ ಮನೆಗಳಿವೆ; ಅವುಗಳಲ್ಲಿ ಮಲಗಲಿಕ್ಕೆ ಮೆತ್ತನ್ನ ಹಾಸಿಗೆಗಳಿವೆ;" ಹೀಗಿನ್ನೇ



ಷ್ಟೋರೀತಿಯಿಂದ ಆ ಬೇಟೆಗಾರನು ತನ್ನ ಬಲೆಯ ಸುಳ್ಳು ವರ್ಣನೆಯನ್ನು ಮಾಡಿ

ದನು. ಇದನ್ನು ಕೇಳಿ ಆ ಮರದ ಮೇಲಿನ ಹಕ್ಕಿಗೆ ಎಲ್ಲವೂ ನಿಜವೆನಿಸಿತು. ಆಗದು ಬೇಟೆಯುವನು ಅತ್ತ ಹೋದಕೂಡಲೇ ಇತ್ತ ತಾನು ಬಲು ಹರುಷದಿಂದ ಆ ಬಲೆಯನ್ನು ಸೇರಿತು. ಆ ಕ್ಷಣವೇ ತಾನು ಅಲ್ಲಿಯೇ ಸಿಕ್ಕುಕೊಂಡೆನೆಂದು ಆ ಹಕ್ಕಿಗೆ ತಿಳಿಯಿತು. ಹಿಂಡುಗಟ್ಟಿ ಹಾರಿ ಬರುತ್ತಿರುವ ಬೇರೆ ಹಕ್ಕಿಗಳನ್ನು ಅದು ತಡೆದು:— “ಎಚ್ಚರಿಕೆ! ಅಣ್ಣಗಳಿರಾ! ಮುಂದೆ ಬರಬೇಡಿರಿಲ್ಲಿ! ಬಂದರೆ ಬಲೆ ಬೀಳುವಿರಿ! ನಾನೊಬ್ಬ ಮೋಸದಿಂದ ಇಲ್ಲಿ ಸಿಕ್ಕಿಕೊಂಡೆನು! ಆ ಬೇಟೆಯುವನ ಸವಿನುಡಿಗಳಿಗೆ ನಾನು ಮರುಳಾದೆನು! ನೀವು ಮಾತ್ರ ಮರುಳಾಗಬೇಡಿರಿ! ಎಂದು ಅವೆಲ್ಲವುಗಳನ್ನು ಹಿಂದಿರುಗಿಸಿತು. ಅದರ ಮಾತಿಗೆ ಎಲ್ಲ ಪಕ್ಷಿಗಳೂ ಅಲ್ಲಿಂದ ಹಾರಿಹೋದವು. ಇಷ್ಟರಲ್ಲಿ ಅಲ್ಲಿಗೆ ಆ ಬೇಟೆಗಾರನು ಬಂದನು. ಅವನನ್ನು ಕಂಡು ಬಲೆಯೊಳಗಿನ ಹಕ್ಕಿಯು:— ವಂಚಕನೇ! ನನ್ನೊಬ್ಬನನ್ನು ನೀನು ಮೋಸಗೊಳಿಸಿದಿ; ಆದರೆ ಈ ನಿನ್ನ ಸುಂದರ ಪಟ್ಟಣವಲ್ಲಿ ಇರಲಿಕ್ಕೆ ಬೇರೆ ಯಾವಹಕ್ಕಿಗಳು ಬಾರವು, ಇದನ್ನು ಮಾತ್ರ ನೆನಪಿನಲ್ಲಿಟ್ಟುಕೋ,” ಎಂದು ಸಿಟ್ಟಿನಿಂದ ಅವನಿಗೆ ನುಡಿಯಿತು.

ಸಾರಾಂಶ:— ಮೋಸಗಾರರ ಮೋಸವು ಹೊರಬೀಳುವವರೆಗೆ ಅವರಾಟವು. ಒಮ್ಮೆ ಅದು ಹೊರಬಿತ್ತೆಂದರೆ ಅವರ ಗಾಳಿಗೆ ಕೂಡ ಯಾರೂ ನಿಲ್ಲುವದಿಲ್ಲ.

---

## ೧೮೮:— ಕರಡಿಯೂ ಜೇನುನೊಣವೂ.

ಒಂದು ತೋಟವಲ್ಲಿ ಒಂದು ಜೇನುಹುಟ್ಟು ಇತ್ತು. ಅದರೊಳಗಿನ ತುಪ್ಪವನ್ನು ತಿನಲಿಕ್ಕೆಂದು ಒಂದು ಕರಡಿಯು ಅಲ್ಲಿಗೆ ಬಂದಿತು. ಅದು ಹುಟ್ಟಿಗೆ ಬಾಯಿಹಚ್ಚಿ ತುಪ್ಪವನ್ನು ಕುಡಿಯುವಷ್ಟರಲ್ಲಿಯೇ ಎಲ್ಲ ಜೇನು ನೊಣಗಳೂ ಕೂಡಿ ಅದರ ಕಣ್ಣು ಬಾಯಿಗೆ ಕಂಡಂತೆ ಚುಚ್ಚಿ ಅದನ್ನು ಹಣ್ಣುಮಾಡಿಬಿಟ್ಟವು. ಆಗ ಆ ಕರಡಿಗೆ ಅತಿ ಹುಚ್ಚು ಹಿಡಿದಂತಾಗಿ ತನ್ನ ತಲೆಯ ತೊಗಲನ್ನು ತಾನೇ ಹರಿದುಕೊಂಡಿತು.

ತಾತ್ಪರ್ಯ:— ಸಿಟ್ಟಿನಭರದಲ್ಲಿ ಮನುಷ್ಯನು ತನ್ನನ್ನೇ ಮರೆತುಬಿಡುತ್ತಾನೆ. ಆಗ ತನ್ನ ನಾಶಮಾಡಿಕೊಳ್ಳಲೂ ಸಹ ಅವನು ಹಿಂದುಮುಂದು ನೋಡುವದಿಲ್ಲ.

---

## ೧೪೯:— ಸಾಗವಾನಿಯ ಮರವೂ ಮುಳ್ಳುಮರವೂ.

ಒಂದು ಅಡವಿಯ ನಡುವೆ ಒಂದು ಸಾಗವಾನಿಯ ಮರವು ಎತ್ತರವಾಗಿಯೂ ನೇರವಾಗಿಯೂ ಬೆಳೆದಿತ್ತು. ಅದು ತನ್ನ ದೊಡ್ಡಸ್ತನದ ಜಂಬದಿಂದ ತನ್ನ ಕೆಳಗೆ ಬೆಳೆದಿರುವ ಕಂಟಿ ಮೊದಲಾದವುಗಳ ತಿರಸ್ಕಾರವನ್ನು ಮಾಡುತ್ತಿತ್ತು. ಈ ಸೊಕ್ಕಿನ ಸ್ವಭಾವವು ಸೇರದೆ ಒಂದು ಮುಳ್ಳುಮರವು ಒಂದು ದಿನ ಆ ಸಾಗವಾನಿಯ ಮರಕ್ಕೆ:— "ನಿನಗೆ ಸೊಕ್ಕಿಷ್ಟೇಕಪ್ಪಾ!" ಎಂದು ಸ್ಪಷ್ಟವಾಗಿ ಕೇಳಿತು. ಆಗ ಸಾಗವಾನಿಯ ಮರವು:— "ಎಲ್ಲ ಗಿಡಗಳಲ್ಲಿ ನಾನು ಹೆಚ್ಚಿನಾತನು; ನನ್ನ ಸೊಬಗು ಬಹಳ; ನನ್ನ ತಲೆಯು ಮುಗಿಲಿಗೆ ಮುದ್ದುಕೊಡುತ್ತಿರುತ್ತದೆ. ನನ್ನ ಟೊಂಗೆಗಳು ಯಾವಾಗಲೂ ಹಸರು ಮುರಿಯುತ್ತಿರುತ್ತವೆ. ಆದರೆ ನೀವು! ಕ್ಷುದ್ರ! ನೀಚ! ಕಂಡವರೆಲ್ಲ ನಿಮ್ಮನ್ನು ಕಾಲಕೆಳಗೆ ತುಳಿಯುತ್ತಾರೆ; ನನ್ನ ಎಲೆಗಳ ಮೇಲೆ ಹರಿಯುತ್ತಿರುವ ನೀರಿನಲ್ಲಿಯೇ ನೀವು ಮುಳುಗಿ ಹೋಗುತ್ತೀರಿ;" ಎಂದು ಆಢ್ಯತೆಯಿಂದ ನುಡಿಯಿತು. ಇದನ್ನು ಕೇಳಿ ಆ ಮುಳು ಮರವು:— "ಅದೆಲ್ಲ ಸರಿಯಾಯಿತಪ್ಪಾ! ಹೋಗಲಿ ಬಿಡು! ಆದರೆ ಯಾರಾದರು ಕೊಡಲಿಯಿಂದ ನಿನ್ನನ್ನು ಕಡಿಯಲು ಬಂದಾಗ ಮಾತ್ರ, ನಮ್ಮದೇಕೆ, ನಮ್ಮಕಿಂತಲೂ



ಕೀಳವಾಗಿರುವ ಕಂಟಿಗಳ ಸ್ಥಿತಿಯೂ ಕೂಡ ನಿನಗೆ ಒಳಿತೆನಿಸಬಹುದು; ಇದನ್ನು ಮಾತ್ರ ಚನ್ನಾಗಿ ನೆನಪಿನಲ್ಲಿಡು; " ಎಂದು ಸಾಗವಾನಿಯ ಮರಕ್ಕೆ ಬುದ್ಧಿಗಲಿಸಿತು.

ಸಾರಾಂಶ: ದೊಡ್ಡಿತೆಯ ಬೆನ್ನಿಂದೆ ದುಃಖಗಳೂ ಹೆಚ್ಚು; ಆದರೆ ಸಣ್ಣವರಿಗುತಹದೇನೂ ಇರುವದಿಲ್ಲ; ಆದ್ದರಿಂದ ದೊಡ್ಡವರು ಸಣ್ಣವರನ್ನು ಹೀಯಾಳಿಸುವದು ಸರಿಯಲ್ಲ.

## ೧೯೦:— ಬಲೆಯೊಡ್ಡಿದ ಬೇಡನೂ ಪಕ್ಷಿಗಳೂ.

ಒಬ್ಬ ಬೇಡನು ಒಂದು ಹೊಲದಲ್ಲಿ ಪಕ್ಷಿಗಳನ್ನು ಹಿಡಿಯಬೇಕೆಂದು ಬಲಿಯೊಡ್ಡಿ, ಅವು ಹೇಗೆ ಬಲೆಬೀಳುವವೆಂಬದನ್ನು ನೋಡಲು, ಒಂದು ಗಿಡದಲ್ಲಿ ಅಡಗಿದ್ದನು ಸ್ವಲ್ಪ ವೇಳೆಯಲ್ಲಿ ಒಂದರ ಹಿಂದೊಂದು ಪಕ್ಷಿಗಳು ಆಸ್ಥಳಕ್ಕೆ ಬಂದವು. ಆದರೆ ಅವು ಕೆಲಹೊತ್ತು ಕುಳಿತು ಮತ್ತೆ ಹಾರಿಹೋಗಹತ್ತಿದವು. ಅವು ಸ್ವಲ್ಪೇ ಇದ್ದದ್ದರಿಂದ ಅವನ್ನು ಹಿಡಿಯಲು ಆ ಬೇಡನಿಗೆ ಮನಸಾಗಲಿಲ್ಲ. ಅನೇಕ ಪಕ್ಷಿಗಳನ್ನೂ ಹಿಡಿಯಬೇಕೆಂದು ಅವನು ಮಾಡಿದ್ದನು. ಇಷ್ಟರಲ್ಲಿ ಸಂಜೆಯಾಯಿತು. ಹಕ್ಕಿಗಳು ತಮ್ಮ ಗೂಡುಗಳಿಗೆ ಹಾರಿ ಹೋದವು. ಆ ಬೇಡನು ತನ್ನ ದೈವವನ್ನು ನಿಂದಿಸುತ್ತ ನಿರಾಶನಾಗಿ ಮನೆಯ ಹಾದೀ ಹಿಡಿದನು.

ತಾತ್ಪರ್ಯ:— ಗಡಿಬಿಡಿಯೂ ಹೇಗೆ ದೋಷವೋ ಹಾಗೆಯೇ ಮಂದತನವೂ ನಿಂದ್ಯವಾದದ್ದೇ ಯಾವದಾದರೂ ಅತಿಯಾದರೆ ಗತಿಗೆಡಿಸುತ್ತದೆ.

## ೧೯೧:— ಮುದುಕನೂ ಸರಾಯಿಯ ಪೀಪೆಯೂ.

ಒಬ್ಬ ಮುದುಕನು ಬಲು ಶೆರೆಕುಡುಕನಿದ್ದನು. ಒಮ್ಮೆ ಅವನು ಒಂದು ಒರಿ ಶರೆಯ ಪೀಪನ್ನು ನೋಡಿದನು. ಅದರಲ್ಲಿ ಶೆರೆಯಿಲ್ಲದಿದ್ದರೂ ಅದಕ್ಕೆ ಶರೆಯ ವಾಸನೆಯಾದರೂ ಇತ್ತು. ಅಷ್ಟಾದರೂ ತೆಗೆದು ಕೊಳ್ಳುವಲ್ಲಿ ಆ ಮುದುಕನಿಗೆ ಬಲು ಆನಂದ. ಅದಕ್ಕಿರುವ ತೂತಿನಲ್ಲಿ ತನ್ನ ಮೂಗನ್ನು ಸೇರಿಸಿ ಆ ಮುದುಕನು ತನ್ನಲ್ಲಿ ತಾನೇ:— "ವಾಸನೇ ಮಧುರವಿದ್ದ ಈ ಶೆರೆಯು ಎಷ್ಟು ರುಚಿಕರವಾಗಿರಬಹುದು; " ಎಂದು ಹಿರಿಹಿರಿ ಹಿಗ್ಗಿದನು.

ಸಾರಾಂಶ:— ಒಂದೇ ಅಗಳಿನ ಮೇಲಿಂದ ಅನ್ನದ ಪರೀಕ್ಷೆಯಾಗುತ್ತದೆ. ಹಾಗೆ ಒಂದು ಅಂಶದ ಪರೀಕ್ಷೆಯ ಮೇಲಿಂದ ಪೂರ್ಣಪದಾರ್ಥದ ಗುಣದೋಷಗಳು ಹೇಳಬಹುದು.

## ೧೯೨:— ಬೇನೆಯ ಗಂಡೆರಳೆಯು.

ಒಂದು ಬೇನೆಯಿಂದ ಬಳಲುತ್ತಿರುವ ಗಂಡೆರಳೆಯು ತಾನು ಮೇಯುತ್ತಿರುವ ಗದ್ದೆಯ ಒಂದು ಮೂಲೆಯಲ್ಲಿ ಬಿದ್ದುಕೊಂಡಿತ್ತು. ಅದರ ಯೋಗಕ್ಷೇಮಕ್ಕೆಂದು ಇತರ ಪ್ರಾಣಿಗಳು. ಅಲ್ಲಿಗೆ ಬರಹತ್ತಿದವು. ಬಂದಾಗೆಲ್ಲ ಅವು ಆ ಗಂಡೆರಳೆಯ ಎದುರಿನ ಹುಲ್ಲನ್ನು ತಿಂದು ಹೋಗುತ್ತಿದ್ದವು. ಹೀಗಾಗಿ ಆ ಎರಳೆಗೆ ತಿನ್ನಲು ಹುಲ್ಲಿಲ್ಲದೆ ಅದು ಕೊಂಚಕಾಲದಲ್ಲಿ ಪಂಚತ್ವವನ್ನು ಹೊಂದಿತು.



ಸಾರಾಂಶ:— ಇಂಥ ಹಿತ ಶತ್ರುಗಳಿಗಿಂತ ಪ್ರತ್ಯಕ್ಷ ವೈರಿಗಳೇ ಹೆಚ್ಚಿನವರು. ಅವರು ಹಿತಮಾಡುತ್ತಿರುವಂತೆ ತೋರಿದರೂ ಅವರಿಂದ ಅಹಿತವೇ ಹೆಚ್ಚಾಗುತ್ತದೆ.

———————

### ೧೯೩:— ಗಾಡಿಯುವನೂ ಗಾಲಿಯೂ.

ಒಬ್ಬ ಗಾಡಿಯುವನು ತನ್ನ ಗಾಡಿಯನ್ನು ಬೀದಿಯಲ್ಲಿ ಸಾಗಿಸುತ್ತಿರುವಾಗ, ಅದರ ಒಂದು ಗಾಲಿಯು ಗಟ್ಟಿಲ್ಲಪ್ಪರಿಂದ ಬಹಳ ಸಪ್ಪಳವಾಗುತ್ತಿತ್ತು. ಆಗ ಅವನು ಆ ಗಾಲಿಗೆ:— " ನಿನ್ನ ಜೋತೆಯುದು ಸುಮ್ಮನೇ ತನ್ನ ಕೆಲಸವನ್ನು ಸಾಗಿಸಿರಲು ನೀನೇ ಇಷ್ಟು " ಕುರುಕುರು " ಮಾಡುವದೇಕೆ? " ಎಂದು ಕೇಳಿದನು. ಇದಕ್ಕೆ ಆ ಗಾಲಿಯು:— " ಅಪ್ಪಾ ! ತೊಂದರೆಯಾಗಹತ್ತಲು ಒಂದೇ ಸವನೇ ತಿಣಕುತ್ತ ಮಳು ಮುಳು ಅಳುವದು ಅಶಕ್ತರ ಜನ್ಮಸಿದ್ಧವಾದ ಅಧಿಕಾರವೇ ಇದೆ; " ಎಂದು ಉತ್ತರ ಕೊಟ್ಟಿತು.

ತಾತ್ಪರ್ಯ:— ಆಶಕ್ತನಿಗೆ ಕೆಲಸವು ಹೆಚ್ಚಾದರೆ ನೆರಳುವದನ್ನುಳಿದು ಅವನು ಏನು ತಾನೇ ಮಾಡಬಲ್ಲನು.

---

### ೧೯೪:— ಸುಭೇದಾರನೂ ಅವನ ಕುದುರೆಯೂ.

ಒಬ್ಬ ಸುಭೇದಾರನ ಕುದುರೆಯು ಚಂದವೂ ಚಪಲವೂ ಆಗಿತ್ತು. ಆದರೆ ಅವನು ಅದರಿಂದ ಸ್ವಲ್ಪ ಕೀಳಾದ ಮತ್ತೊಂದು ಕುದುರೆಯನ್ನು ಕೊಂಡು ಅದರ ಲಾಲನೆ ಪಾಲನೆಗಳಲ್ಲಿ ತನ್ನ ಕಾಲವನ್ನು ಕಳೆಯಹತ್ತಿದನು. ಒಂದು ದಿನ ಈ ಎರಡನೇ ಕುದುರೆಯು ಮೊದಲನೆಯದಕ್ಕೆ:— " ಅಣ್ಣಾ ! ನೀನು ಅತಿ ಸುಂದರನೂ ಚಪಲನೂ ಇರುತ್ತಿದ್ದು ನಮ್ಮ ಒಡೆಯನಿಗೆ ನಿನ್ನನ್ನು ಬಿಟ್ಟು ನನ್ನ ಮೇಲೆಯೇ ಇಷ್ಟು ಪ್ರೇಮ ಕೂಡಲು ಕಾರಣವೇನಿರ ಬಹುದೆಂದು; " ಕನಿಕರದ ದನಿಯಲ್ಲಿ ಮಾತನಾಡಿತು. ಇದಕ್ಕೆ ಮೊದಲನೆಯ ಕುದುರೆಯು:— " ಹೊಸ ಬಿಸಿ ನನ್ನಗಂಡ ಕಸ ಉಡುಗಗೊಡ; ಬರಬರುತ್ತ ನನ್ನ ಗಂಡ ನಡಮುರಿ ಒದ್ದ; " ಎಂಬದಂತೆ ಹೊಸ ವಸ್ತುಗಳ ಮೇಲೆ ಪ್ರೇಮ ತೋರುವದು ಮನುಷ್ಯ ಸ್ವಭಾವವು. ಅದೇ ಸ್ವಲ್ಪ ಹಳೆಯದಾಗಲು ಅವನು ಅದರ ವಿಷಯದಲ್ಲಿ ದುರ್ಲಕ್ಷ ಮಾಡುತ್ತಾನೆ. ಈಗ ನಿನ್ನನ್ನು ಪ್ರೀತಿಸುವ ನನ್ನ ಒಡೆಯನು ಕೆಲದಿನಗಳಮೇಲೆ ನಿನ್ನನ್ನು ಬಿಟ್ಟು ಮತ್ತೊಂದು ಕುದುರೆಯನು ಕೊಳ್ಳಬಹುದೆಂಬದನ್ನು ಚನ್ನಾಗಿ ತಿಳಿದುಕೋ, " ಎಂದು ಬುದ್ಧಿಯನ್ನು ಹೇಳಿತು.

ಸಾರಾಂಶ:—ವಸ್ತುವು ಹೊಸದಿರುವಾಗಿನ ಮನುಷ್ಯನ ಹುರುಪೇ ಬೇರೆ. ಆದರೆ ಆ ವಸ್ತುವು ಹಳೆಯದಾಗಲು ಅದನ್ನು ಸ್ಮರಣೆಯನ್ನು ಮಾಡದಿರುವಷ್ಟು ದುರ್ಲಕ್ಷವನ್ನು ಅದರ ಮೇಲೆ ಅವನು ಮಾಡಬಹುದು. ಅತಿ ಪರಿಚಯದಿಂದ ಅನಾದರವು ಉತ್ಪನ್ನವಾಗುವದು ಸಹಜವು.

## ೧೪೫:— ಮೂರ್ಖತೋಳವು.

ಒಬ್ಬ ಹೆಣ್ಣುಮಗಳ ಒಂದು ಹಟಮಾರಿ ಕೂಸು ಒಮ್ಮೆ ರಾತ್ರಿ ಒಹಳ ಅಳಹತ್ತಿತು. ಅದನ್ನು ಸಮಾಧಾನ ಪಡಿಸಲು ತಾಯಿಯು ಮಾಡಿದ ಯತ್ನಗಳೆಲ್ಲ ನಿರರ್ಥಕವಾದವು. ಕಡೆಗೆ ಬೆದರಿಕೆಯನ್ನು ತೋರಿಸಬೇಕೆಂದು ಅವಳು:— “ಸುಮ್ಮನಾಗದಿದ್ದರೆ ನೋಡು! ಬಾಗಿಲಲ್ಲೇ ತೋಳು ಬಂದಿದೆ; ನಿನ್ನನ್ನು ಅದಕ್ಕೆ ಕೊಟ್ಟುಬಿಡುವೆನು;” ಎಂದು ಸಿಟ್ಟಿನಿಂದ ನುಡಿದಳು. ಅಕಸ್ಮಾತ್ತಾಗಿ ಬಾಗಿಲಲ್ಲಿ ನಿಜವಾಗಿಯೂ ಒಂದು ತೋಳವು ಬಂದಿತ್ತು. ತಾಯಿಯ ಮೇಲಿನ ಮಾತುಗಳನ್ನು ಆ ತೋಳವು ನಿಜವೆಂದು ನಂಬಿ ಕೂಸನ್ನು ಅವಳು ಈಗ ತರುವಳು; ಎಂದೆಷ್ಟೋ ವೇಳೆ ಹಾದಿಯನ್ನು ನೋಡಿತು. ಇಷ್ಟರಲ್ಲಿ ಆ ಕೂಸು ಅತ್ತತ್ತು ದಣಿದು ಮಲಗಿಕೊಂಡಿತು ಆದ್ದರಿಂದ ಪಾಪ! ಆ



ತೋಳಕ್ಕೆ ಉಪವಾಸದಿಂದ ಅಡವಿಗೆ ತಿರುಗಿ ಹೋಗಬೇಕಾಯಿತು. ಹೋಗುವಾಗ್ಯೆ ಹಾದಿಯಲ್ಲಿ ಅದಕ್ಕೆ ಒಂದು ನರಿಯು ಭೆಟ್ಟಿಯಾಯಿತು. ಆ ನರಿಯು ತೋಳಕ್ಕೆ:— “ಗೆಳೆಯಾ ಸುಖವಾಗಿದ್ದೀಯಾ?” ಎಂದು ಕೇಳಿತು. ಇದಕ್ಕೆ ತೋಳವು:— “ಇಲ್ಲ! ಮಿತ್ರಾ! ನೋಡು! ನಾನೊಬ್ಬ ಹೆಣ್ಣುಮಗಳ ಮಾತನ್ನು ನಿಜವೆಂದು ನಂಬಿ ಮೋಸ

ಹೋದೆನು! ರಾತ್ರಿಯಲ್ಲಿ ಎಚ್ಚತ್ತು ಉಪವಾಸಬಿದ್ದು ಕಷ್ಟಪಟ್ಟೆನು " ಎಂದು ಉತ್ತರಕೊಟ್ಟಿತು.

ಸಾರಾಂಶ:— ಮನುಷ್ಯನಬಾಯಿಂದ ಸಹಜವಾಗಿ ಹೊರಟ ಯಾವವೋ ಶಬ್ದ ಗಳನ್ನು ಒಮ್ಮೆಲೇ ಸತ್ಯವೆಂದು ಎಂದೂ ಭಾವಿಸಬಾರದು. ಆಗ್ಗೆ ಹಿಂದುಮುಂದಿನ ಸಂದರ್ಭವನ್ನು ನೋಡಬೇಕು. ಇಲ್ಲವಾದರೆ ಮನುಷ್ಯನಿಗೆ ಮೇಲಿನ ತೋಳನ ಅವಸ್ಥೆ ಯಾಗುತ್ತದೆ.

———

೧೯೬:— ಮುಳ್ಳುಕಂಟಿಗಳನ್ನು ತಿನ್ನುವ ಕತ್ತೆಯು.

ಒಬ್ಬ ಕುಂಬಾರನ ಕತ್ತೆಯು ಬೆನ್ನಮೇಲೆ ತನ್ನ ಒಡೆಯನ ಉಣ್ಣುವ ಪದಾರ್ಥ ಗಳನ್ನು ಹೊತ್ತುಕೊಂಡು ಅವನಿರುವ ಹೊಲದಕಡೆಗೆ ನಡೆದಿತ್ತು. ಹೋಗ ಹೋಗುತ್ತ ಸಂಣಸಂಣ ಜಾಲಿಯ ಗಿಡಗಳ ಒಂದು ಗುಂಪು ಕಾಣಿಸಿತು. ಆ ಗಿಡಗಳ ಎಳೆ ಎಳೆ ಮುಳ್ಳು ಮತ್ತು ಎಲೆಗಳನ್ನು ತಿನಲಿಕ್ಕೆಂದು ಕೊಂಚಕಾಲ ಅದು ಅಲ್ಲಿಯೇ ನಿಂತಿತು. ಮತ್ತು ತಿನ್ನುತ್ತ ತಿನ್ನುತ್ತ ಅದು ತನ್ನಲ್ಲಿ ತಾನೇ:—" ನನ್ನ ಬೆನ್ನ ಮೇಲೆ ಇಷ್ಟು ತಿನ ಸುಗಳಿರುತ್ತಿರಲು ಅದನ್ನು ಬಿಟ್ಟು ನಾನು ಮುಳ್ಳುಎಲೆಗಳನ್ನು ತಿನ್ನುವದನ್ನು ಕಂಡು ಜನರಿಗೆ ಆಶ್ಚರ್ಯವೆನಿಸಬಹುದಲ್ಲವೇ? " ಎಂದುಕೊಂಡಿತು.

ತಾತ್ಪರ್ಯ:— " ಲೋಕವು ಬಿನ್ನರುಚಿಯಾಗಿರುತ್ತದೆ.

———

೧೯೭:— ಅಲಸಿಕೆಯುಳ್ಳ ಹರೆಯುದವನು.

ಒಬ್ಬ ಅಲಸಿಕೆಯುಳ್ಳ ಹರೆಯುದವನಿಗೆ ಮುಂಜಾವು ನಾಲ್ಕುತಾಸು ಹೊತ್ತೇರಿ ದರೂ ಹಾಸಿಗೆಯಿಂದ ಹೊರಬೀಳುವದಾಗುತ್ತಿದ್ದಿಲ್ಲ. ಯಾವನೋ ಒಬ್ಬನು ಅವನಿಗೆ ತೀವ್ರ ಏಕೆ ಏಳುವದಿಲ್ಲವೆಂದು ಕೇಳಲು ಅವನು:— " ಪ್ರತಿದಿನವು ನಸುಕಿನಲ್ಲಿ ಅಲ ಸಿಕೆ ಮತ್ತು ಉದ್ಯಮೆ ಎಂಬಿಬ್ಬರು ಸ್ತ್ರೀಯರು ನನ್ನ ಬದಿಯಲ್ಲಿ ಬಂದು ನಿಂತು ಉದ್ಯ ಮೆಯು " ಬೇಗನೇಳು! ನಿನ್ನ ಕೆಲಸಕ್ಕೆ ಹೋಗು " ಎಂದು, ಅಲಸಿಕೆಯು " ಬೇಡ! ಹಾಸಿಗೆಯಲ್ಲೇಮಲಗಿರು! " ಎಂದೂ ನನಗೆ ಪರಾಕು ಹೇಳುತ್ತಾರೆ; ಇಷ್ಟಕ್ಕೇ ಸುಮ್ಮನಿ ರದೆ ಇಬ್ಬರೂ ತಾವು ಹಾಗೆ ಹೇಳುವದರ ಸಮರ್ಥನಕ್ಕಾಗಿ ಕಾರಣಪರಂಪರೆಗಳನ್ನೇ ತೋರಿಸಹತ್ತುತ್ತಾರೆ. ಅಂದಮೇಲೆ ಒಬ್ಬ ನ್ಯಾಯಾಧೀಶನಂತೆ ಇಬ್ಬರಮಾತುಗಳನ್ನೂ ಕೇಳಿಕೊಳ್ಳುವಷ್ಟರಲ್ಲಿ ನನ್ನ ಊಟದ ಹೊತ್ತಾಗುತ್ತದೆ. ಆಗ್ಗೆ ನಾನು ಏಳುವೆನು; " ಎಂದು ಗಂಭೀರವಾಗಿ ಹೇಳಿದನು.

ಸಾರಾಂಶ:— ಅಲಸಿಕೆಯುಳ್ಳವರು ಕೆಲಸವನ್ನು ತಪ್ಪಿಸಿಕೊಳ್ಳಲು ಬೇಕಾದ ಸುಳ್ಳು ಕಾರಣಗಳನ್ನು ತೋರಿಸಲೂ ಹಿಂಜರಿಯುವದಿಲ್ಲ.

---

**೧೫೮:— ನರಿಯೂ ಕಾಡಹಂದಿಯೂ.**

ಅಡವಿಯಲ್ಲಿ ಒಂದು ಕಾಡಹಂದಿಯು ತನ್ನ ಕೋರೆದಾಡೆಗಳನ್ನು ಒಂದು ಗಿಡದ ಬೊಡ್ಡೆಯ ಮೇಲೆ ಮಸೆಯುತ್ತಿತ್ತು. ಆಗ ಅಲ್ಲಿಗೊಂದು ನರಿಯು ಬಂದು:— “ ಎಲೋ ! ನಿನ್ನ ಮೇಲೆ ವೈರಿಗಳಾರೂ ಏರಿಬಂದಂತೆ ಕಾಣುವದಿಲ್ಲ; ಹೀಗಿದ್ದು ಸುಮ್ಮನೇ ನಿನ್ನ ಹಲ್ಲುಗಳನ್ನು ಗಿಡಕ್ಕೆ ಏಕೆ ಮಸೆಯುತ್ತಿರುವಿ ? ” ಎಂದು ಕೇಳಿತು. ಅದಕ್ಕೆ ಕಾಡಹಂದಿಯು:— “ ಗೆಳೆಯಾ ! ವೈರಿಗಳಾರೂ ಈಗ ಬಂದಿಲ್ಲ ನಿಜ; ಆದರೆ ಹೊತ್ತುಸಿಕ್ಕಾಗ ನನ್ನ ಕೋರೆದಾಡೆ ಗಳಿಗೆ ನಾನು ಸಾಣೆಯನ್ನಿಕ್ಕಿದ್ದರೆ ಪ್ರಸಂಗದಲ್ಲಿ ಅವು ನನ್ನ ಉಪಯೋಗಕ್ಕೆ ಬೀಳಲುಸಾಕು ಸಂಕಟಕಾಲವು ಒಮ್ಮೆಲೇ ಬಂದರೆ ಈ ಕಾರ್ಯವು ನನಗೆ ಆಗ ಮಾಡಲು ಸಾಧ್ಯವಾಗುವದೆಂಬ ನಿಯಮವಿಲ್ಲ; ” ಎಂದು ಪ್ರತಿನುಡಿಯಿತು.



ತಾತ್ಪರ್ಯವೇನಂದರೆ:— ನೀರಡಿಸಿದಾಗ ಬಾವಿಯನ್ನು ತೋಡಹೋಗುವದೂ, ಮನೆಗೆ ಬೆಂಕಿಹತ್ತಿದಾಗ ಕಲೆಗಳನ್ನು ಶೋಧಿಸಲು ಹೋಗುವದೂ ಅತೀವ ತಪ್ಪು, ಹಾಗೆ ಮಾಡದ ಗಾಳಿಬಂದಾಗ ತೂರಿಕೊಳ್ಳುವದೇ ಮೇಲು.

## ೧೯೯:— ಕೋಗಿಲೆಯೂ ಗಿಡಗವೂ.

ಒಂದು ಹಸಿದ ಗಿಡಗವು ಆಹಾರಕ್ಕಾಗಿ ಹಾರಾಡುತ್ತಿತ್ತು. ಅದಕ್ಕೆ ಒಂದು ಕೋಗಿಲೆಯು ಸಿಕ್ಕಿತು. ಆಗ ಕೋಗಿಲೆಯು:— "ಅಣ್ಣಾ! ನನ್ನನ್ನು ಬಿಡೊ! ನಾನು ಬಲು ಚಿಕ್ಕವನಿರುವೆನು! ನನ್ನನ್ನು ತಿಂದರೆ ನಿನ್ನ ಹಸಿವು ಹಿಂಗುವದಿಲ್ಲ! ಇದಲ್ಲದೆ ನಾನು ಒಳ್ಳೇ ಗಾಯಕನಿರುವೆನು ನನ್ನನ್ನು ಬಿಟ್ಟು ಒಂದು ಗಳಿಗೆ ನನ್ನ ಗಾಯನವನ್ನು ಕೇಳುವೆಯಾದರೆ ನಿನಗೆ ಬಲು ಆನಂದವಾಗುವದು!" ಎಂದು ಅಂಗಲಾಚಿ ಬೇಡಿಕೊಂಡಿತು. ಆಗ ಗಿಡಗವು:— "ನನ್ನಂಥ ಹಸಿದವನಿಗೆ ನೀನು ಸಣ್ಣವನಿರು, ದೊಡ್ಡವನಿರು, ಇದರ ಪರಿವೆ ಎಳ್ಳಷ್ಟಿಲ್ಲ, ಸಿಕ್ಕಷ್ಟೇ ಶಿವಶಿವ; ಇಷ್ಟರಿಂದ ಸ್ವಲ್ಪೇ ಆಗಲೊಲ್ಲದು ನನ್ನ ಹಸಿವು ಹಿಂಗುತ್ತದೆ; ಅಲ್ಲದೆ ಕೈಯೊಳಗಿನ ಪಕ್ಷಿಯನ್ನು ಸಣ್ಣದೆಂದು ಬಿಟ್ಟುಕೊಟ್ಟು ದೊಡ್ಡಪಕ್ಷಿಗೆಂದು ಯತ್ನಮಾಡಲು ನಾನೇನು ಅಂಥ ಮೂರ್ಖನಲ್ಲ" ಎಂದು ಮಾತಾಡಿತು.

ಸಾರಾಂಶ:— ಸಿಗಬೇಕಾಗಿರುವ ಸಾವಿರಕ್ಕಿಂತಲೂ ಸಿಕ್ಕಿರುವ ಒಂದೇ ವಸ್ತುವು ಮೇಲು.

---

## ೨೦೦:— ಮುದುಕನೂ ಅವನ ಕುದುರೆಯೂ.

ಒಬ್ಬ ಮುದುಕನೂ ಅವನ ಮಗನೂ ತಮ್ಮದೊಂದು ಕುದುರೆಯನ್ನು ಕ್ರಯಕ್ಕೆ ಕೊಡಲು ಪೇಟೆಗೆ ಹೊರಟಿದ್ದರು. ಆಗ ಮಾರ್ಗದಲ್ಲಿ ಒಬ್ಬನು ಆ ಮುದುಕನಿಗೆ:— "ಅಯ್ಯೋ! ಪಾಪ! ಆ ಚಿಕ್ಕಮಗುವನ್ನು ನಡೆಸುತ್ತ ಹೋಗುವದಕ್ಕಿಂತ ಅವನನ್ನು ಆ ಕುದುರೆಯ ಮೇಲೆ ಕೂಡಿಸಿ ನೀನು ನಡೆಯುತ್ತ ಹೋಗುವದು ಒಳಿತಲ್ಲವೇ?" ಎಂದು ನುಡಿದನು. ಇದನ್ನು ಕೇಳಿ ಆ ಮುದುಕನು ತನ್ನ ಮಗನನ್ನು ಕುದುರೆಯಮೇಲೆ ಕುಳ್ಳಿರಿಸಿ ತಾನು ಅದರ ಲಗಾಮನ್ನು ಹಿಡಿದುಕೊಂಡು ಮುಂದೆ ಮುಂದೆ ನಡೆದನು. ಹೀಗೆ ಸಾಗಿರಲು ಮತ್ತೊಬ್ಬನು ಹಾದಿಯಲ್ಲಿ ಏ! ಮದ್ದಮಗುವೇ! ನಿನ್ನ ಮುಪ್ಪಿನ ತಂದೆಯು ನಡೆದುಬರುತ್ತಿರುವಾಗ ನಿನಗೆ ಕುದುರೆಯ ಮೇಲೇರಿಬರಲು ನಾಚಿಕೆಬರುವದಿಲ್ಲೇ?" ಎಂದು ಮಗನಿಗೆ ಸಿಟ್ಟುಮಾಡಿದನು. ಆಗ ಮುದು

ಕನು ತಾನು ಕುದುರೆ ಏರಿ ತನ್ನ ಮಗನ ಕೈಯಲ್ಲಿ ಲಗಾಮನ್ನು ಕೊಟ್ಟನು. ಸ್ವಲ್ಪೇ ದೂರ ಹೋಗುಷ್ಟರಲ್ಲಿ ಇಬ್ಬರು ಹೆಣ್ಣುಮಕ್ಕಳು ಆವರಿಗೆ ಭೆಟ್ಟಿಯಾದರು. ಆವ ರಲ್ಲಿ ಒಬ್ಬಳು:-- "ಅಹಹ! ಈ ಮುದುಕನನ್ನು ನೋಡಿರೇ! ಮಗುವನ್ನು ನಡೆಯಿ ಸುತ್ತ ಕುದುರೆಯಮೇಲೆ ಹೇಗೆ ತಾನು ಕುಳಿತಿದ್ದಾನೆ!" ಎಂದು ಗಹಗಹಿಸಿ ನಕ್ಕಳು. ಆ ವಾಗ ಆ ಮುದುಕನು ತನ್ನ ಮಗನನ್ನು ತನ್ನ ಬೆನ್ನ ಹಿಂದೆ ಕುದುರೆಯ ಮೇಲೇರಿ ಸಿದನು. ಮತ್ತೆ ಕೆಲವು ದಾರಿಯನ್ನು ಸಾಗಿರಲು ಇವರನ್ನು ಕಂಡು ಬೇರೊಬ್ಬನು:-- "ಈ ಕುದುರೆಯು ನಿಮ್ಮದೋ ಹೆರವರದೋ?" ಎಂದು ಅವರಿಗೆ ಕೇಳಿದನು. ಮುದು ಕನು ನಮ್ಮದೆಂದು ಉತ್ತರವಿತ್ತನು. ಇದಕ್ಕೆ ಆ ಮನುಷ್ಯನು ತಿರುಗಿ:— "ನನ ಗಂತೂ ಇದು ನಿಜವಾಗಿ ತೋರುವದಿಲ್ಲ; ಯಾಕಂದರೆ ಕುದುರೆಯು ನಿಮ್ಮದಾಗಿ ದ್ದರೆ ಅದರ ಬೆನ್ನಿನ ಚಿಂತೆಯು ನಿಮಗೆ ಕೊಂಚವಾದರೂ ಇರುತ್ತಿತ್ತು; ಅದರ ಬೆನ್ನು ಮುರಿಯುವಂತೆ ಇಬ್ಬರೂ ಅದರ ಮೇಲೇರಿಹೋಗುವದಕ್ಕಿಂತ ಅದನ್ನೇ ನೀವಿಬ್ಬರೂ ಹೊತ್ತುಕೊಂಡರೆ ಉತ್ತಮವಲ್ಲವೇ?" ಎಂದು ನುಡಿದನು. ಇದನ್ನು ಕೇಳಿ ಇಬ್ಬರೂ ಕುದುರೆಯ ಮೇಲಿಂದಿಳಿದು ಆ ಮುದುಕನೂ ಅವನ ಮಗನೂ ಆ ಕುದುರೆಯನ್ನು ಅಂಗಾತ ಬೀಳಗೆಡವಿ ಅದರ ನಾಲ್ಕೂಕಾಲುಗಳನ್ನು ಕಟ್ಟಿ, ನಡುವೆ ಒಂದು ಕೋಲು ಹಾಕಿ, ಇಬ್ಬರೂ ಆ ಕೋಲಿಗೆ ಹೆಗಲುಕೊಟ್ಟು ಮುಂದೆ ನಡೆದರು. ಈ ವಿಚಿತ್ರವನ್ನು ನೋಡಿದವರೆಲ್ಲರೂ ಬಿದ್ದು ಬಿದ್ದು ಗಟ್ಟಿಯಾಗಿ ನಗಹತ್ತಿದರು. ಆ ನಗೆಯ ದನಿಗೆ ಕುದು ರೆಯು ಬೆದರಿ ತನ್ನ ಕಾಲುಗಳನ್ನು ಕಸುವಿನಿಂದ ಜಾಡಿಸಿ ಕಟ್ಟಿದ ಹಗ್ಗವನ್ನು ಹರಿದು ಕೊಂಡಿತು. ಹಗ್ಗವು ಹರಿದೊಡನೆ ಕೆಳಗಿದ್ದ ನದಿಯಲ್ಲಿ ಕುದುರೆಯು ಬಿದ್ದು ಮುಳು ಗಿ ಪ್ರಾಣವನ್ನು ಬಿಟ್ಟಿತು. ಪಾಪ ಮುದುಕನು ಬೆಪ್ಪನಾಗಿ ತನ್ನ ಮಗನನ್ನು ಕರೆದು ಕೊಂಡು ತನ್ನ ಮನೆಗೆ ಬಂದನು.

ತಾತ್ಪರ್ಯ:— ಕಂಡಕಂಡವರನ್ನು ಸಮಾಧಾನ ಪಡಿಸಲು ಹೋಗುವದು ಬಲು ಭಂಡಾಟವಲ್ಲದೆ ಮತ್ತೇನು?

——————

## ೨೦೧:— ಚಿರ್ತೂ ನರಿಯೂ



ಒಮ್ಮೆ ಒಂದು ಚಿರ್ತು, ತನ್ನ ಮೈಮೇಲಿನ ಬಣ್ಣಬಣ್ಣದ ಚಂದವಾದ ಚಿಕ್ಕೆಗಳನ್ನು ನೋಡಿ ತಾನು ಸಿಂಹನಿಗಿಂತಲೂ ಸುಂದರನಾಗಿದ್ದೇನೆಂದು ತನ್ನಲ್ಲಿ ತಾನೇ ಅಂದುಕೊಂಡಿತು. ಇತರ ಪಶುಗಳಂತೂ ತನಗೆ ಸರಿಯಾಗುವದೇ ಇಲ್ಲವೆಂದು ಬಲು ಸೊಕ್ಕಿತು. ಕಂಡಕಂಡ ಪಶುಗಳನ್ನು ಅಲ್ಲಗಳೆಯಲಾರಂಭಿಸಿತು. ಆಗ ಅದಕ್ಕೆ, ಒಮ್ಮೆ ಒಂದು ನರಿಯು ಭೆಟ್ಟಿಯಾಯಿತು. ಆ ನರಿಯು:— “ ಎಲೋ! ಸರ್ವಕ್ಕೂ ಗುಣಗಳೇ ಭೂಷಣವಲ್ಲದೆ, ಬರಿ ಹೊರಗಿನ ಹೊಳಪಿಗೆ ಜಾಣರು ಬೆಲೆಕೊಡುವದಿಲ್ಲ; ನಿನ್ನ ತಿಳಿವಳಿಕೆಯು ತಪ್ಪಾದದ್ದು; ” ಎಂದು ಆ ಚಿರ್ತಿಗೆ ಬುದ್ಧಿಗಲಿಸಿತು.

ಸಾರಾಂಶ:— ಚಲುವನು ತನ್ನ ಚೆಲ್ವಿಕೆಗೆ ಸೊಕ್ಕದಿದ್ದರೇ, ಅದು ಅವನಿಗೆ ಹೆಚ್ಚು ಶೋಭೆಯನ್ನು ಕೊಡುವದು.

---

## ೨೦೨:— ಏದೂ ಹಾವೂ.

ಒಂದು ಏದುವು, ತನಗೆ ಹುತ್ತದಲ್ಲಿರಲು ಸ್ವಲ್ಪ ಸ್ಥಳವನ್ನು ಕೊಟ್ಟರೆ, ಬಲು ಉಪಕಾರವಾಗುತ್ತದೆಂದು, ಒಂದು ಹಾವಿಗೆ ಕೇಳಿಕೊಂಡಿತು. ಹಾವು ಹಿಂದುಮುಂದು ನೋಡದೆ, ಏದಿಗೆ ತನ್ನ ಹುತ್ತದಲ್ಲಿ ಬರಗೊಟ್ಟಿತು. ಅದು ಒಳಹೊಕ್ಕಕೂಡಲೇ ಹಾವಿಗೆ ಅದರ ಹರತಾದ ಗರಿಗಳು ಚುಚ್ಚಹತ್ತಿದವು. ಆಗ ಅದಕ್ಕೆ ಬಹಳ ಸಂಕಟವಾಗಹತ್ತಿತು. ಆದ್ದರಿಂದ ಹಾವು ಏದಿಗೆ ಅದರ ಪೀಡೆಯನ್ನು ಸಹಿಸಲಾರೆನೆಂದು ಅದಕ್ಕೆ ಹುತ್ತಿನ ಹೊರಗೆ ಹೊರಟು ಹೋಗಲಿಕ್ಕೆ ಬೇಡಿಕೊಂಡಿತು. ಆಗ ಏದುವು:— ” ನನಗಂತೂ ಈ ಸ್ಥಳವು ಸೌಖ್ಯವಾಗಿದೆ; ತೊಂದರೆಗೊಳ್ಳುವವರೇ ಹೊರಗೆ ಹೋದರೆ

ಹೆಚ್ಚು ಚನ್ನಾಗುತ್ತದೆ;" ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿತು.

ಸಾರಾಂಶ:— ಪರರ ಮನೆಯಲ್ಲಿ ಸ್ವಲ್ಪ ನೆರವು ದೊರಕಿದೊಡನೇ, ದುರುಳರು ಆ ಮನೆಯಲ್ಲೆಲ್ಲ ತಾವೇ ಪಸರಿಸಿಕೊಂಡು, ಮನೆಯವರನ್ನೇ ಹೊರಗೆಹಾಕಲು ಅವರು ಹಿಂದುಮುಂದು ನೋಡುವದಿಲ್ಲ.

---

### ೨೦೩— ಸಿಂಹವೂ ಮೂರು ಎತ್ತುಗಳೂ.

ಮೂರು ಎತ್ತುಗಳು ಬಲು ಜೀವದ ಜೊತೆಯಾಗಿದ್ದವು.. ಯಾವಾಗಲೂ ಒಂದೇ ಕಡೆಗೆ ಅವು ಮೇಯುತ್ತಿದ್ದವು. ಅವನ್ನು ಕಂಡು ಒಂದು ಸಿಂಹವು ಅವುಗಳಲ್ಲಿಯ ಒಂದು ಎತ್ತು ತನ್ನ ಆಹಾರಕ್ಕೆ ಸಿಕ್ಕರೆ ಒಳಿತು; ಎಂದು ವಿಚಾರಮಾಡ ಹತ್ತಿತು. ಒಂದೊಂದನ್ನೇ ಆ ಸಿಂಹವು ಸಹಜವಾಗಿ ನುಂಗಲು ಶಕ್ತವಾಗಿತ್ತು. ಆದರೆ ಮೂರೂ ಒಂದೆಡೆಗೆ ಮೇಯುತ್ತಿದ್ದದರಿಂದ ಒಮ್ಮೆಲೆ ಅವುಗಳ ಮೇಲೆ ಹಾರಲು ಸಿಂಹಕ್ಕೆ ಧೈರ್ಯ ಸಾಲದಂತಾಗಿತ್ತು. ಆದ್ದರಿಂದ ಸಿಂಹವು ಯುಕ್ತಿಯಿಂದ ಆ ಮೂರೂ ಎತ್ತುಗಳೊಳಗೆ ಚಾಡಿಯನ್ನು ಹೇಳಿ, ಒಡಕು ಹುಟ್ಟಿಸಿ, ಅವು ಒಂದನ್ನೊಂದು ಅಗಲುವಂತೆ ಮಾಡಿತು. ಆ ನಂತರ ಒಮ್ಮೆ ಅವು ಬೇರೆ ಬೇರೆ ಚರಿಸುತ್ತಿರಲು, ಒಂದೊಂದನ್ನೇ



ಆನಂದದಿಂದ ಹರಿದು ತಿಂದು ಬಿಟ್ಟಿತು.

ತಾತ್ಪರ್ಯ:— ಒಕ್ಕಟ್ಟಾಗಿದ್ದರೆ ವೈರಿಯ ಆಟವು ನಮ್ಮ ಮೇಲೆ ಸಾಗುವದಿಲ್ಲ. ಆದ್ದರಿಂದ ಅವನು ಅನೇಕರೀತಿಯಿಂದ ಚಾಡಿಯನ್ನು ಹೇಳಿ ನಮ್ಮ ಕಟ್ಟನ್ನು ಬಿಡಿಸಲಿಕ್ಕೆ ಯತ್ನಿಸುತ್ತಾನೆ. ಆಗ ಮಾತ್ರ ನಾವು ಜಾಗರೂಕರಾಗಿರತಕ್ಕದ್ದು.

---

## ೨೦೪– ನರಿಯೂ ತೋಳವೂ.

ಒಮ್ಮೆ ಒಂದು ನರಿಯು ಒಂದು ತೋಳಕ್ಕೆ:— “ ಗೆಳೆಯಾ! ಏನು ಹೇಳಲಿ ನನ್ನ ಜೀವವನ್ನು! ಅದರ ಕಲ್ಪನೆಯೂ ಕೂಡ ನಿನಗೆ ಬರಲಿಕ್ಕಿಲ್ಲ; ಸಿಕ್ಕದುದೊಂದು ಮುದಿಕೋಳಿಯನ್ನೋ, ಸಾಯಲು ಸಮೀಪಿಸಿದ ಅಶಕ್ತ ಹುಂಜವನ್ನೋ ತಿಂದು, ನನಗೆ ನನ್ನ ಉದರನಿರ್ವಾಹವನ್ನು ಸಾಗಿಸಬೇಕಾಗುತ್ತದೆ; ನಾನಂತೂ ತೀರ ಬೇಸತ್ತುಹೋಗಿದ್ದೇನೆ; ನಿನ್ನ ಸ್ಥಿತಿಯು ನನ್ನಿಂದ ನೂರುಪಾಲು ಮೇಲಾದದ್ದು; ನಿನಗೆ ನನ್ನಂತೆ, ಆಹಾರದೊರಕಿಸಲಿಕ್ಕೆ ನಿನ್ನ ಜೀವವನ್ನು ಸಂಕಟಕ್ಕೆ ಸಿಲುಕಿಸಬೇಕಿಲ್ಲ; ನನಗೆ ಆಹಾರವನ್ನು ಹುಡುಕಲಿಕ್ಕೆ ಹಳ್ಳಿಗಳೊಳಗೆ ಅಡಗಡಗುತ್ತ ಅಲೆದಾಡಬೇಕಾಗುತ್ತದೆ; ಆದರೆ ನಿನ್ನ ಮಾತು ಹಾಗಲ್ಲ; ನೀನು ನಿನ್ನ ಆಹಾರವನ್ನು ಅಡವಿಯಲ್ಲೋ, ಒಂದಾನೊಂದು ಗದ್ದೆಯಲ್ಲೋ ದೊರಕಿಸಲು ಸಮರ್ಥನಿರುತ್ತೀ; ಈ ನಿನ್ನ ವಿದ್ಯೆಯನ್ನು ನನಗೆ ಸ್ವಲ್ಪ ಕಲಿಸುವಿಯಾದರೆ ಬಹಳೇ ಚನ್ನಾದೀತು; ನಿನ್ನ ಶಿಷ್ಯತ್ವ ವಹಿಸಿ, ನರಿಯ ಜನ್ಮಕ್ಕೆ ಬಂದು ಮೊದಲನೇ ಸಲ ಕುರಿಯನ್ನು ಕೊಂದುತಿನ್ನುವ ಮಾನವು ನನಗೆ ಪ್ರಾಪ್ತವಾಗಿಯೇ ತೀರುವದೆಂದು ನನಗೆ ಪೂರ್ಣ ವಿಶ್ವಾಸ; ನೀನು ನನಗೆ ಶಿಕ್ಷಣವನ್ನಾದರೂ ಕೊಟ್ಟುನೋಡು; ನಿನ್ನ ಶ್ರಮೆಯು ವ್ಯರ್ಥ್ಯವೆಂದೂ ಹೋಗುವದಿಲ್ಲ; ಹಿಂದಿನಿಂದ ಹಳಹಳಿಸುತ್ತ ಕೂಡುವ ಪ್ರಸಂಗವು ನಿನಗೆಂದೂ ಬರಲಿಕ್ಕಿಲ್ಲ; ” ಎಂದೆಷ್ಟೋ ಬಗೆಯಾಗಿ ಮಾತನಾಡಿತು. ಇದಕ್ಕೆ ತೋಳವು:— “ ಒಳ್ಳೇದು! ಯತ್ನಮಾಡಿ ನೋಡುವೆನು; ಮೊದಲು ಹೀಗೆ ಮಾಡು; ಆ ನೆರೆಯ ಹೊಲದಲ್ಲಿ ನನ್ನ ತಮ್ಮನು ಸತ್ತು ಬಿದ್ದಿದ್ದಾನೆ; ಹೋಗಿ ಅವನ ಚರ್ಮವನ್ನು ಹೊದ್ದುಕೋ; ” ಎಂದು ಹೇಳಿತು. ನರಿಯು ಅದರ ಹೇಳಿಕೆಯಂತೆ ಚರ್ಮವನ್ನು ಹೊದ್ದುಕೊಂಡು ಬಂದಿತು; ಆಗ ತೋಳವು ಅದಕ್ಕೆ ಬೇರೆ ಬೇರೆ ಪಾಠಗಳನ್ನು ಕಲಿಸಹತ್ತಿತು; ಗುರುಗುಟ್ಟೋಣ, ಕಡಿಯೋಣ, ಕಾದಾಡೋಣ ಮತ್ತು ಕುರಿಗಳ ಹಿಂಡಿನಮೇಲೆ ಸಿಡಿದು ಬಿದ್ದು ಒಂದಾನೊಂದು ಕುರಿಯನ್ನು ಎತ್ತಿಕೊಂಡು ಹೋಗೋಣ ಇವೇ ಮೊದಲಾದವುಗಳ ಶಿಕ್ಷಣವನ್ನು ನರಿಗೆ ತೋಳವು ಕಲಿಸಿತು. ಮೊದಮೊದಲು ನರಿಯು ತನ್ನ ಪಾಠದಲ್ಲಿ ಅಷ್ಟೇನು ಮುಂದು

ನರಿಯುಲಿಲ್ಲ. ಆದರೆ ಅದು ಸ್ವಭಾವತಃ ತೈಲಬುದ್ಧಿಯುದಾದದ್ದರಿಂದ, ಅದು ಬೇಗನೇ ಎಲ್ಲ ಪಾಠಗಳನ್ನು ಕಂಠಗತ ಮಾಡಿಬಿಟ್ಟಿತು. ಅವರ ಚುರುಕುತನಕ್ಕೆ ತೋಳವು ಆಶ್ಚರ್ಯಪಟ್ಟಿತು. ಕಡೆಗೆ, ಒನ್ಮೆ, ಒಂದು ದೊಡ್ಡ ಕುರಿಯ ಹಿಂಡು ಆ ನರಿಯ ಕಣ್ಣಿಗೆ ಕಾಣಿಸಿತು. ಕೂಡಲೇ ಅದು ಒಳ್ಳೇ ಆವೇಶದಿಂದ ಆ ಹಿಂಡಿನ ಮೇಲೆ ಸಿಡಿದು ಬಿದ್ದು ಒಂದು ಕ್ಷಣದಲ್ಲಿ ಕುರಿಗಳನ್ನೂ, ಕುರುಬನನ್ನೂ ಮತ್ತು ಅವನ ನಾಯಿಗಳನ್ನೂ ಗಾಬರಿಗೊಳಿಸಿಬಿಟ್ಟಿತು. ಒಂದು ದೊಡ್ಡ ಕುರಿಯನ್ನು ಬಾಯಿಯಲ್ಲಿ ಹಿಡಿದುಕೊಂಡು ಅದರ ಗಂಟಲದ ರಕ್ತವನ್ನು ಗುಟುಗುರಿಸಬೇಕೆನ್ನುವಷ್ಟರಲ್ಲಿ ಸಮೀಪದ ಹೊಲದಿಂದ ಬರುತ್ತಿರುವ ಒಂದು ಕೋಳಿಯ ಕೂಗು ಅದಕ್ಕೆ ಕೇಳಹತ್ತಿತು. ಆ ಗುರುತಿನ ಕೂಗನ್ನು ಕೇಳುತ್ತಲೇ ನರಿಗೆ ಎಚ್ಚರದಪ್ಪಿತು. ತೋಳದ ತ್ವಚೆಯನ್ನು ಅದು ತೆಗೆದೊಗೆದು ಬಿಟ್ಟಿತು. ತನ್ನ ಗುರುವಿಗೆ ಹೇಳಕೇಳದೆ ಒನ್ಮೆಲೇ ಹೊಲದ ಕಡೆಗೆ ಓಡಿಹೋಗಿಬಿಟ್ಟಿತು.

ಸಾರಾಂಶ:— ಕಲಿತ ಗುಣವು ಕಟ್ಟಿಗೆಯಲ್ಲಿಟ್ಟರೂ ಹೋಗದು

---

### ೨೦೫:— ಕಾಗೆಯೂ ಹೂಜಿಯೂ.



ಒಂದು ಕಾಗೆಯು ನೀರಡಿಕೆಯಿಂದ ಬಾಯಾರಿ ನೀರನ್ನು ಹುಡುಕುತ್ತಿತ್ತು. ಆಗ

ಅವಕ್ಕೆ ಒಂದು ಹೂಜೆಯು ಕಾಣಿಸಿತು. ಅದನ್ನು ಹಣಿಕಿನೋಡಿತು: ನೀರು ಬಹಳ ತಳಕ್ಕೆ ಹತ್ತಿದ್ದವು. ಆಗ ಕಾಗೆಯು ತನ್ನ ಚುಂಚುವನ್ನು ಆ ಹೂಜೆಯಲ್ಲಿ ಚಾಚಿ ನೋಡಿತು. ಆದರೆ ಅದಕ್ಕೆ ಒಂದು ಹನಿಯಾದರೂ ನೀರು ಸಿಗಲಿಲ್ಲ. ಆಗ ಅದು ಸಣ್ಣಸಣ್ಣ ಕಲ್ಲುಗಳನ್ನು ಆರಿಸಿ ತಂದಿತು; ಆ ಮೇಲೆ ಒಂದೊಂದನ್ನೇ ಆ ಹೂಜೆಯಲ್ಲಿ ಚಲ್ಲಿಕೊಟ್ಟಿತು. ಇದರಿಂದ ಅದರ ಚುಂಚುವಿಗೆ ಸಿಲುಕುವಷ್ಟು ನೀರು ಮೇಲೆ ಏರಿ ಬಂದವು. ಇದನ್ನು ನೋಡಿ ಆ ಕಾಗೆಗೆ ಆದ ಆನಂದವನ್ನೆಷ್ಟು ಹೇಳುವದು! ನೀರು ಕುಡಿದು ಅದು ಹಾರಿಹೋಯಿತು.

ಸಾರಾಂಶ:— ಜಾಣರು ಸಂಕಟಸಮಯದಲ್ಲಿ ಏನಾದರೊಂದು ಯುಕ್ತಿಯಿಂದ ಪಾರಾಗುತ್ತಾರೆ.

———————

### ೨೦೬:-- ಎತ್ತೂ, ಡೋಮೆ ( ಸೊಳ್ಳೆ ) ಯೂ.

ಬಿಸಿಲಿನಿಂದ ಬಳಲಿದ ಒಂದು ಎತ್ತು, ಸ್ವಲ್ಪ ತಂಪಾಗಬೇಕೆಂದು ಹತ್ತರದಲ್ಲಿಯ ಒಂದು ಹಳ್ಳದಲ್ಲಿ ಹೋಗಿ ನಿಂತುಕೊಂಡಿತು. ಈ ಕಾಲಕ್ಕೆ ಒಂದು ಡೋಮೆಯು ಅದರ ಕೋಡಿನಮೇಲೆ ಕುಳಿತು, ಬಳ್ಳೇ ಆಢ್ಯತೆಯಿಂದ ಎತ್ತಿಗೆ:— “ಏನಪ್ಪಾ! ನಾನು ಬಲು ಸಲಗೆಯಿಂದ ನಿನ್ನೊಡನೆ ನಡೆಯ ಹತ್ತಿದ್ದೇನೆ, ಇದನ್ನು ಕ್ಷಮಿಸೆಂದು ಬೇಡುವೆನು; ನನ್ನ ಒಜ್ಜೆಯು ನಿನಗೆ ಸಹಿಸಲಾಗದಿದ್ದರೆ, ನನಗೆ ಹೇಳಿಬಿಡು; ಕೂಡಲೇ ನಾನು ಹಾರಿಹೋಗುತ್ತೇನೆ; ಬದಿಯ ಗಿಡದ ಮೇಲೆ ಕುಳಿತುಕೊಳ್ಳುವೆನು;” ಎಂದು ನುಡಿಯಿತು. ಇದಕ್ಕೆ ಎತ್ತು:— “ಎಲೋ! ಹೋಗು, ಹೋಗದಿರು; ಅದರ ಪರಿವೆಯು ನನಗಿಲ್ಲ; ನನ್ನೊಡನೆ ನೀನು ಮಾತಾಡದಿದ್ದರೆ ನೀನು ಇರುವೆಯೋ ಇಲ್ಲೋ ಎಂಬದು ಸಹ ನನಗೆ ತಿಳಿಯುತ್ತಿದ್ದಿಲ್ಲ;” ಎಂದು ತಿರಸ್ಕಾರದಿಂದ ಮಾತಾಡಿತು.

ಸಾರಾಂಶ:— ಕೆಲಕೆಲವು ಜನರಿಗೆ, ತಾವು ಬಲು ದೊಡ್ಡವರೆಂದು ಹೆಮ್ಮೆಯಿರುತ್ತದೆ. ಆದರೆ ನಿಜವಾಗಿಯೂ ಜನರು ಅವರಿಗೆ ಕವಡಿಯ ಕ್ರಯವನ್ನೂ ಕೊಡುವದಿಲ್ಲ.

———————

### ೨೦೭:-- ಅಣ್ಣನೂ ತಂಗಿಯೂ.

ಒಬ್ಬ ಗ್ರಹಸ್ಥನಿಗೆ ಒಬ್ಬ ಮಗನೂ ಒಬ್ಬ ಮಗಳೂ ಹೀಗೆ ಎರಡು ಮಕ್ಕಳಿದ್ದವು. ಹುಡುಗನು ಬಳ್ಳೇ ಚಲುವನಿದ್ದನು. ಹುಡಿಗೆಯು ಸಾಧಾರಣವಾಗಿದ್ದಳು. ಆ ಎರಡೂ ಹುಡುಗರು ಒಂದು ದಿನ ಕನ್ನಡಿಯಲ್ಲಿ ನೋಡುತ್ತ ನಿಂತಿದ್ದರು. ಆಗ ಹುಡುಗನು ತನ್ನ ತಂಗಿಗೆ:— “ಅಕ್ಕಾ! ನೋಡು! ನಾನೆಷ್ಟು ಸುಂದರನಿದ್ದೇನೆ; ನನ್ನ ಚಲುವಿಕೆಯ ಮುಂದೆ ನಿನ್ನದೇನೂ ಅಲ್ಲ;” ಎಂದು ಹಿಗ್ಗಿನಿಂದ ನುಡಿದನು. ಈ ಶಬ

ಗಳು ತಂಗಿಯ ಕಿವಿಯಲ್ಲಿ ಬಹಳ ಚುಚ್ಚಿದವು. ಆಗ ಆಕೆಯು ತಂದೆಯ ಬಳಿಗೆ ಹೋಗಿ ಅಣ್ಣನು ತನ್ನನ್ನು ಹಿಯಾಳಿಸಿದನೆಂದು ದೂರ ಹೇಳಿದಳು. ಇದನ್ನು ಕೇಳಿ ತಂದೆಯು ತನ್ನ ಇಬ್ಬರು ಮಕ್ಕಳನ್ನು ಹತ್ತರಕರೆದು:— "ಮಕ್ಕಳಿರಾ ನೀವಿಬ್ಬರೂ ನಿತ್ಯ ಕನ್ನಡಿಯಲ್ಲಿ ನೋಡುತ್ತೀರಿ; ಆದರೆ ಮಗನೆ! ಇನ್ನುಮುಂದೆ ನಿನ್ನ ಚಲುವಿಕೆಗೆ ಕೆಟ್ಟ ನಡತೆಯ, ಅಸಭ್ಯತನದ ಕಲಂಕವು ಹತ್ತಬಾರದೆಂದು ನೀನು ಕನ್ನಡಿಯಲ್ಲಿ ನೋಡು; ಮಗಳೇ! ನಿನ್ನ ಚಲುವಿಕೆಯಲ್ಲಿ ಸ್ವಲ್ಪ ಕೊರತೆಯಿದೆಯಲ್ಲ, ಅದನ್ನು ಸದಾಚಾರ ಸವಿಮಾತುಗಳಿಂದ ಪೂರ್ಣಗೊಳಿಸು; ಈ ಹೇತುವಿನಿಂದ ನೀನು ಕನ್ನಡಿಯಲ್ಲಿ ನೋಡುತ್ತಿರು;" ಎಂದು ಬುದ್ಧಿಗಲಿಸಿದನು.

ಸಾರಾಂಶ:— ಅಂಗವು ಊನವಾಗಿದ್ದರೆ, ಅದು ಸದ್ಗುಣದಿಂದ ಮುಚ್ಚಿ ಹೋಗುತ್ತದೆ. ಅದೇ ಸದ್ಗುಣವೇ ಇಲ್ಲದಿದ್ದರೆ, ಸೌಂದರ್ಯರಾಶಿಯಿಂದಲೂ ಮನುಷ್ಯನಿಗೆ ಮನ್ನಣೆಯು ಬಾರದು.

———————

## ೨೦೮:— ತುಂಟ ನಾಯಿಯು.



ಒಬ್ಬ ಮನುಷ್ಯನ ಒಂದು ನಾಯಿಯು ಇತ್ತು. ಅದು ಕಂಡವರ ಮೇಲೆಲ್ಲ ಹರಿದು ಬೀಳುತ್ತಿತ್ತು. ಇದಕ್ಕೆಂತಲೆ ಅದರ ದಣಿಯು ಅದರ ಕೊರಳಿಗೊಂದು

ಗಂಟೆಯನ್ನು ಕಟ್ಟಿದ್ದನು. ಆದರೆ ಆ ಹುಚ್ಚು ನಾಯಿಯು ಅದೊಂದು ತನಗೆ ಭೂಷಣವೆಂದೇ ಭಾವಿಸಿಕೊಂಡಿತ್ತು. ಆದ್ದರಿಂದಲೇ ತನ್ನ ಬದಿಗೆ ನಾಯಿಗಳನ್ನು ಅದು ಬರಗೊಡುತ್ತಿದ್ದಿಲ್ಲ. ಎಲ್ಲ ನಾಯಿಗಳನ್ನೂ ಅದು ತಿರಸ್ಕರಿಸಲಾರಂಭಿಸಿತು. ಹೀಗಿರಲು ಒಮ್ಮೆ ಒಂದು ಮುದಿನಾಯಿಯು ಈ ತುಂಟನಾಯಿಯನ್ನು ಕಂಡು:- "ಅಪ್ಪಾ! ನಿನ್ನ ಕೊರಳೊಳಗೆ ಗಂಟೆಯಿದ್ದ ಮಾತ್ರಕ್ಕೇನೆ ನೀನು ನಿನ್ನನ್ನು ಮನ್ನಿಸಿಕೊಳ್ಳುತ್ತಿದ್ದರೆ ಬೇಕಾದಷ್ಟು ಮನ್ನಿಸಿಕೋ; ಆದರೆ ನಿನ್ನ ಕೊರಳಲ್ಲಿ ಗಂಟೆಕಟ್ಟಿದವನು, ನಿನ್ನ ಭೂಷಣಕ್ಕಾಗಿ ಮಾತ್ರ ಕಟ್ಟಿಲ್ಲ. ಅದು ನಿನ್ನ ಅಪ್ರತಿಷ್ಟತೆಯ ಗುರುತಾಗಿರಲೆಂಬದೇ ಅವನ ಉದ್ದೇಶವಿದೆ."

ತಾತ್ಪರ್ಯ:--ಏನೊಂದು ಕೆಟ್ಟ ಗುಣದಿಂದ ಮನುಷ್ಯನು ಹೆಸರು ಪಡೆದಿದ್ದರೆ, ಅದು ಅವನಿಗೆ ಭೂಷಣವೆಂದೇ ಭಾಸವಾಗುತ್ತದೆ. ಏನಕೇನ ಪ್ರಕಾರದಿಂದ ತನ್ನ ಪ್ರಸಿದ್ಧಿಯಾದರೆ ತೀರಿತೆಂದು ಅವನ ಇಚ್ಛೆಯು. ಆದರೆ ಈ ಪ್ರಸಿದ್ಧಿಯು ಸತ್ಕೃತ್ಯದಿಂದಾಗಲಿ, ಅಥವಾ ದುಷ್ಕೃತ್ಯದಿಂದಾಗಲಿ, ಆದರ ಪರಿವೆಯೇ ಅವರಿಗಿರುವದಿಲ್ಲ.

---

## ೨೧೯:— ಹರೆಯದವನೂ ಅವನ ಬೆಕ್ಕೂ.

ಒಬ್ಬ ಹರೆಯದವನ ಹತ್ತರ ಒಂದು ಬೆಕ್ಕು ಇತ್ತು. ಅದರ ಮೇಲೆ ಅವನ ಪ್ರೇಮವು ಬಹಳ. "ಈ ಬೆಕ್ಕು ಒಂದು ವೇಳೆ ಒಬ್ಬ ಸುಂದರ ಸ್ತ್ರೀಯಾದರೆ ನಾನವಳನ್ನು ಮದುವೆಯಾಗೇ ಬಿಡುವೆನು," ಎಂದು ಆ ಹರೆಯದವನು ಹಾರೈಸಿದನು. ಈ ಅವನ ಹಾರೈಕೆಯನ್ನು ದೇವರು ದಯೆಯಿಂದ ಪೂರೈಸಿಕೊಟ್ಟನು. ಬೆಕ್ಕು ಆಗ ಸುಂದರ ಸ್ತ್ರೀಯಾಯಿತು. ಆಗ ಆ ಹರೆಯದವನು ಮಾತಾಡಿದಂತೆ ಮದುವೆಯಾಗೇಬಿಟ್ಟನು. ಒಂದು ದಿವಸ ಈ ದಂಪತಿಗಳು ರಾತ್ರಿಯಲ್ಲಿ ಊಟಕ್ಕೆ ಕುಳಿತಿರಲು ಅಲ್ಲೊಂದು ಇಲಿಯು ಸಪ್ಪಳಮಾಡಹತ್ತಿತು. ಇದನ್ನು ಕೇಳಿದ ಕೂಡಲೇ ಆ ಹೆಣ್ಣುಮಗಳು ಎಲೆಯನ್ನು ಬಿಟ್ಟು ಹೋದವಳೇ ಆ ಇಲಿಯನ್ನು ಹೊಡೆದು ಕೊಂದು ಬಿಟ್ಟಳು. ರೂಪ ಬೇರೆಯಾದರೂ ಗುಣವು ಬೇರೆಯಾಗಲಿಲ್ಲವೆಂಬದನ್ನು ನೋಡಿ ದೇವರು ಆ ಸ್ತ್ರೀಯ ಮೇಲೆ ಸಿಟ್ಟಾದನು. ಆ ಕೂಡಲೇ ಅವಳನ್ನು ಮೊದಲಿನಂತೆ ಬೆಕ್ಕನ್ನೇ ಮಾಡಿಬಿಟ್ಟನು.

ಸಾರಾಂಶ:-- ರೂಪ ಬೇರೆಯಾದರೂ ಗುಣವು ಬೇರೆಯಾಗಲರಿಯದು.

---

## ೨೧೦:— ಇಬ್ಬರು ಹಾದಿಕಾರರೂ ಕರಡಿಯೂ.

ಇಬ್ಬರು ಗೃಹಸ್ಥರು ದೇಶಾಟನೆಗೆಂದು ಹೊರಟರು. ಯಾರಿಗಾದರೂ ಸಂಕಟ ಬಂದರೆ ಪರಸ್ಪರರು ಸಹಾಯವಾಗಬೇಕೆಂದು ಅವರು ತಮ್ಮ ತಮ್ಮೊಳಗೆ ಮಾತನಾಡಿಕೊಂಡರು. ಒಮ್ಮೆ ಒಂದು ಅರಣ್ಯದಲ್ಲಿ ಅವರು ಹೋಗುತ್ತಿರುವಾಗ್ಯೆ ಅವರ ಮೇಲೊಂದು ಕರಡಿಯು ಧಾವಿಸಿ ಬಂತು. ಆಗ ಅವರಲ್ಲೊಬ್ಬನು ಚಪಲನಾದವನು ಕೂಡಲೇ ಗಿಡವೇರಿ ಕುಳಿತನು. ಶರೀರವು ಸ್ಥೂಲವಾದವನು ಓಡಲಿಕ್ಕಾಗದೆ ಮಡಿದವನಂತೆ ಭೂಮಿಯ ಮೇಲೆ ಬಿದ್ದುಕೊಂಡನು. ಕರಡಿಯು ಈ ಬಿದ್ದವನನ್ನು ಸಮೀಪಿಸಿ ಕಿವಿಯ ಹತ್ತರ ಮೂಸಿನೋಡಿತು. ಆಗ ಅದು ಅವನು ಸತ್ತಿರುವನೆಂದು ತಿಳಿದು ಅವನನ್ನು ಏನೂ ತೊಂದರೆಪಡಿಸದೇ ಬಂದ ದಾರಿಯಿಂದ ಹೊರಟು ಹೋಯಿತು. ಕರಡಿಯು ಹೋದಮೇಲೆ ಗಿಡದ ಮೇಲಿನವನು ಕೆಳಗಿಳಿದು ನಗುತ್ತ ತನ್ನ ಗೆಳೆಯನಿಗೆ:— " ಮಿತ್ರಾ! ನಿನ್ನ ಕಿವಿಯಲ್ಲಿ ಆ ಕರಡಿಯು ಏನು ಹೇಳಿತು " ಎಂದು ಕೇಳಿದನು. ಆಗ ಅವನು ಪ್ರತಿಯಾಗಿ:— " ನಿನ್ನಂಥ ನೀಚನೊಡನೆ ಗೆಳೆತನ ಮಾಡಬೇಡ " ವೆಂದು ಹೇಳಿತೆಂದು ನುಡಿದನು.



ಸಾರಾಂಶ:— ಎಲ್ಲವೂ ಸುಲಲಿತವಾಗಿರುವಾಗ ಮಾತ್ರ ಸರ್ವರೂ ನಮ್ಮ ಸುತ್ತಲೂ ಸುಳಿದಾಡುವರು. ಆದರೆ ಸಂಕಟವು ಬಂದರೆ ಎಲ್ಲರೂ ದಿಕ್ಕಿಗೊಬ್ಬರಾಗುವರು. ಇಂಥ ಸಮಯದಲ್ಲಿ ಸ್ವಾರ್ಥವನ್ನುಳಿದು ಪರರ ಸಂಕಟ ನಿವಾರಿಸಲು ಸಿದ್ಧರಾಗುವವರು ಅತೀವ ವಿರಲ.

——————

## ೨೧೧:— ಬೆಕ್ಕುಗಳೂ ಇಲಿಗಳೂ.

ಒಮ್ಮೆ ಬೆಕ್ಕು ಇಲಿಗಳ ನಡುವೆ ಬಹು ದಿವಸದ ಜಗಳ ನಡೆಯಿತು. ಅದರಲ್ಲಿ ಪ್ರತಿಸಾರೆ ಇಲಿಗಳು ಸೋತು ಓಡಿಹೋಗಬೇಕಾಗುತ್ತಿತ್ತು. ಒಂದು ದಿನ ಎಲ್ಲ ಇಲಿಗಳು ಒಟ್ಟುಗೂಡಿ ತಮ್ಮ ಸೋಲಿನ ಕಾರಣವನ್ನು ಕುರಿತು ಯೋಚನೆ ಮಾಡಿದವು. ಆಯುತ್ತಕಾಲಕ್ಕೆ ತಮ್ಮ ಸೈನ್ಯಕರಿಗೆ ತಮ್ಮ ಸೇನಾಪತಿಯನ್ನು ಗುರುತಿಸಲಾಗುವದಿಲ್ಲವೆಂಬುದೇ ಇದಕ್ಕೆ ಕಾರಣವೆಂದು ಆಗ ಅವುಗಳಿಗೆ ಹೊಳೆಯಿತು. ಆದ್ದರಿಂದ ಕೂಡಲೇ ಸೇನಾಪತಿಗಳಾದವರು ಏನೊಂದು ಚಿನ್ಹವನ್ನು ಹಚ್ಚಿಕೊಳ್ಳಬೇಕೆಂದು ಅವು ನಿರ್ಧರಿಸಿದವು. ಸೇನಾಪತಿಗಳು ತಮ್ಮ ತಲೆಯಮೇಲೆ ಒಂದು ಹುಲ್ಲು ಕಡ್ಡಿಯನ್ನು ಚುಚ್ಚಿಕೊಳ್ಳಬೇಕೆಂದು ಸರ್ವಾನುಮತದಿಂದ ನಿಶ್ಚಯವಾಯಿತು. ಹಾಗೆ ಹಚ್ಚಿಕೊಂಡು ಎಲ್ಲ ಸೇನಾಪತಿಗಳೂ ತಮ್ಮ ಸೈನ್ಯದೊಂದಿಗೆ ಯುದ್ಧಭೂಮಿಗೆ ಹೋದವು. ಆದರೆ ಬೆಕ್ಕುಗಳ ಮುಂದೆ ಇಲಿಗಳ ಪಾಡೇನು! ಅವೆಲ್ಲವೂ ಸೋತು ಜೀವ ಉಳಿಸಿಕೊಳ್ಳಬೇಕೆಂದು ತಮ್ಮ ಬಿಲವನ್ನು ಸೇರಿದವು. ಈ ರೀತಿಯಿಂದ ಸೈನಿಕರೆಲ್ಲರೂ ತಮ್ಮ ಜೀವವನ್ನು ಉಳಿಸಿಕೊಂಡರು. ಆದರೆ ಸೇನಾಪತಿಗಳ ಅವಸ್ಥೆಯು ಮಾತ್ರ ಅತಿ ಶೋಚನೀಯವಾಯಿತು. ಅವುಗಳ ನೆತ್ತಿಯ ಮೇಲೆ ಕಡ್ಡಿಯನ್ನು ಹಚ್ಚಿದ್ದರಿಂದ ಬಿಲವನ್ನು ಸೇರಲು ಅವಕ್ಕೆ ಸಾಧ್ಯವಾಗಲಿಲ್ಲ. ಹೀಗಾಗಿ ಅವೆಲ್ಲ ಬೆಕ್ಕುಗಳ ಬಾಯಿಗೆ ಬಿದ್ದವು.

ತಾತ್ಪರ್ಯ:— ದೊಡ್ಡಿಸ್ತನದೊಂದಿಗೆ ಹೊಣೆಗಾರಿಕೆಯೂ ಸಂಕಟವೂ ಹೆಚ್ಚಾಗ ಹತ್ತುವವು.

——————

## ೨೧೨:— ಮೊಂಡಬಾಲದ ನರಿಯು.

ಒಂದು ನರಿಯು, ಕಬ್ಬಿಣ ಬಲೆಯಲ್ಲಿ ತನ್ನ ಬಾಲವು ಸಿಕ್ಕಿರಲು, ಕಸುವಿನಿಂದ ಅದನ್ನು ಹರಿದುಕೊಂಡು ಓಡಿಹೋಯಿತು. ಮೊದಮೊದಲು ಜೀವದ ಮೇಲೆ ಬಂದ ಪ್ರಸಂಗವು ಬಾಲದ ಮೇಲೆ ಹೋಯಿತೆಂದು ಆ ನರಿಗೆ ಆನಂದವಾಯಿತು. ಆದರೆ, ಅದು ತನ್ನವರಲ್ಲಿ ಸೇರಲು, ಅದಕ್ಕೆ ತನ್ನ ಬಾಲವು ಮೊಂಡವಾದದ್ದಕ್ಕೆ ಅಸಹ್ಯವೆನಿಸಹತ್ತಿತು. "ಹೀಗೆ ಬಾಲವು ಮೊಂಡವಾಗುವ ಬದಲು ನಾನೇ ಮರಣ ಹೊಂದಿದ್ದರೆ ಮೇಲಾಗುತ್ತಿತ್ತಲ್ಲ;" ಎಂದು ಅದು ಮನದಲ್ಲಿ ಮಿಡುಕಹತ್ತಿತ್ತು. ಕಡೆಗೆ ಆದದ್ದೇ ಒಳ್ಳಿತಾಯಿತೆಂದು ಆ ನರಿಗೆ ತನ್ನ ಬಾಲದ ಮೊಂಡತನವೇ ಶೋಭೆಯುಳ್ಳದೆಂಬ ಭಾವನೆಯನ್ನು ಸಕಲರಲ್ಲಿ ಬೀರಲು ಯೋಚನೆಯನ್ನು ಮಾಡತೊಡಗಿತು. ಆಗ ಅದಕ್ಕೊಂದು ಹಂಚಿಕೆಯು ತೋಚಿತು. ಆ ಕೂಡಲೇ ಅದು ಎಲ್ಲ ನರಿಗಳನ್ನು ತನ್ನ ಮನೆಗೆ ಬರಮಾಡಿಕೊಂಡಿತು. ಆ ಮೇಲೆ ಅವೆಲ್ಲವುಗಳ ಮುಂದೆ:— "ಬಾಂಧವರೇ! ನಮ್ಮೆಲ್ಲರಿಗೂ ಇದ್ದ ಈ ಬಾಲದಿಂದ ನಮಗೇನಾದರೂ ಉಪಯೋಗವುಂಟೋ? ಕೇವಲ ಒಜ್ಜೆಯು ಮಾತ್ರವಿದು; ಅದಿಲ್ಲದಿದರೆ ಹಗುರಾಗಿ ನಮಗೆ ಓಡಿಹೋಗಲು ಸುಲಭವಾಗುತ್ತದೆ;



ಅಲ್ಲದೆ ನಮ್ಮ ದೇಹಕ್ಕೆ ಅದೊಂದು ಭೂಷಣಾಸ್ಪದವಾಗುತ್ತದೆ; ನಾನು ಅದರ ಅನುಭವವನ್ನು ಸ್ವತಃ ತೆಗೆದುಕೊಂಡಿರುವೆನು; ನೋಡಿರಿ; ನನ್ನ ಸೌಂದರ್ಯವು ಎಷ್ಟು ಹೆಚ್ಚಿದೆ ಆ ಬಾಲವಿಲ್ಲದುದರಿಂದ; ನನಗಂತೂ ಅತೀವ ಸೌಖ್ಯವಾಗಿಬಿಟ್ಟಿದೆ. ಸ್ವಾರ್ಥಿಯಾಗದೆ ಆ ಲಾಭವು ತಮ್ಮೆಲ್ಲರಿಗೂ ಸಿಗಬೇಕೆಂಬ ನನ್ನ ಬಲವಾದ ಆಶೆಯು; ಎಂದಿನ್ನೆಷ್ಟೋ ಮಿರುಗುಮಾತುಗಳಿಂದ ಆ ನರಿಯು ಮಾತನಾಡಿತು. ತನ್ನ ಮಾತುಗಳು ಯಾರ್ಯಾರನ್ನು ಮರುಳು ಮಾಡಿವೆಯೆಂಬದನ್ನು ತಿಳಿಯಲು ಅದು ಎಲ್ಲ ನರಿಗಳ ಮೋರೆಯ ಕಡೆಗೆ ತಿರುತಿರುಗಿ ನೋಡಹತ್ತಿತು. ಆಗೊಂದು ಅವುಗಳಲ್ಲಿಯ ಮುದಿನರಿಯು ಈ ನರಿಯ ಖೊಟ್ಟಿಬುದ್ಧಿಯನ್ನು ಕಂಡುಹಿಡಿದು ಮೋರೆಯನ್ನು ಮುದುಡೆಮಾಡಿ:– "ಹಾ! ಪಂಡಿತರೇ! ತಮ್ಮ ವಾಕ್ಪ್ರವಾಹವನ್ನು ತಡೆಯಿರಿನ್ನು; ಬಾಲವನ್ನು ಬಿಟ್ಟುಕೊಟ್ಟು ತಮ್ಮ ಕಲ್ಯಾಣವಾಗಿರಬಹುದು; ಒಪ್ಪಿಗೆ; ನಮ್ಮೆಲರ ಮೇಲೆಯೂ ಅಂಥ ಪ್ರಸಂಗ ಒದಗಿದಾಗ್ಯೆ ನಾವೂ ಬಾಲವನ್ನು ಬಿಡೋಣ; ಅಲ್ಲಿಯವರೆಗೆ ತಾವು ನಮ್ಮನ್ನು ಒತ್ತಾಯಪಡಿಸಬೇಡಿರೆಂದೇ ಬೇಡಿಕೆ;" ಎಂದು ನಗೆನುಡಿಗಳನ್ನಾಡಿತು.

ತಾತ್ಪರ್ಯ:– ತಮ್ಮ ಮಾನವು ಮುಕ್ಕಾಗಬಾರದೆಂದು ಅನೇಕರು ತಮ್ಮಲ್ಲಿಯ ವ್ಯಂಗವನ್ನು ಸದ್ಗುಣವೆಂದೇ ಸಾಧಿಸುತ್ತಿರುತ್ತಾರೆ. ಆದರೆ ಜಾಣರು ಇವರ ಭಾವವನ್ನರಿತು ಇವರ ಮಾತನ್ನು ನಂಬುವದಿಲ್ಲ.

---

## ೨೧೪:– ಕುರಿಗಳೂ ನಾಯಿಗಳೂ.

ಒಂದು ದಿವಸ ಕುರಿಗಳು ಕುರುಬನಲ್ಲಿ ದೂರಹೇಳಿದವು. ಏನಂದರೆ:– "ನಮ್ಮ ಉಣ್ಣೆಯನ್ನು ನೀವು ಮೇಲೆಮೇಲೆ ಕತ್ತರಿಸಿಕೊಳ್ಳುತ್ತೀರಿ, ನಮ್ಮ ಹಾಲಿನ ಮೇಲೂ ಮಾಂಸದ ಮೇಲೂ ನಿಮ್ಮ ನಿರ್ವಾಹವನ್ನು ಸಾಗಿಸಿಕೊಳ್ಳುತ್ತೀರಿ; ಆದರೆ ನಮ್ಮ ಅನ್ನನೀರುಗಳ ವ್ಯವಸ್ಥೆಯನ್ನು ಮಾತ್ರ ಚನ್ನಾಗಿ ಇಡುವದಿಲ್ಲ; ಗುಡ್ಡದ ಮೇಲೆಲ್ಲಿಯೋ ಮೇದು, ಹಳ್ಳದೊಳಗಿನ ನೀರು ಕುಡಿದು, ನಮ್ಮ ದಿವಸವನ್ನು ನಾವು ಕಳೆಯುತ್ತೇವೆ. ಆದರೆ ಈ ನಿಮ್ಮ ಕೊಬ್ಬುಕುತ್ತಿಗೆಯ ನಾಯಿಯಾದರೋ ನಿಮಗೆ ಉಣ್ಣೆಯನ್ನು ಕೊಡುವದಿಲ್ಲ; ಅಥವಾ ಮತ್ತಾವ ಬಗೆಯಿಂದಲೂ ಅದು ನಿಮ್ಮ ಉಪಯೋಗಕ್ಕೆ ಬೀಳುವದಿಲ್ಲ; ಹೀಗಿದ್ದು ಅವುಗಳ ಮೇಲೆ ನಿಮ್ಮದು ಬಲು ಜೀವ; ಈ ಪಕ್ಷಪಾತವು ನಿಮಗೆ ಸರಿಯಾದದ್ದಲ್ಲ;" ಇದನ್ನು ಕೇಳಿ ನಾಯಿಗಳು ಕುರಿಗಳಿಗೆ:– "ಎಲೈ! ಶಾಂತರಾಗಿರಿ! ಶಾಂತರಾಗಿರಿ! ಹೀಗೆ ಕ್ಷುಬ್ಧರಾಗಬೇಡಿರಿ! ನಾವು ನಿಮ್ಮೊಡನೆ ತಿರುತಿರುಗಿ ನಿಮ್ಮ ಅಂಗರಕ್ಷಣೆಯನ್ನು ಮಾಡದಿದ್ದರೆ ತೋಳಗಳು ನಿಮ್ಮನ್ನು ತಿಂದು

ಬಿಡುತ್ತಿದ್ದವು; ಕಳ್ಳರು ನಿಮ್ಮನ್ನು ಕದ್ಯೊಯ್ಯುತ್ತಿದ್ದರು; ಇದೆಲ್ಲ ಚನ್ನಾಗಿ ಧ್ಯಾನಿಸಿರಿ;" ಎಂದು ಬುದ್ಧಿಯನ್ನು ಹೇಳಿದವು.

ಸಾರಾಂಶ:— ಎಲ್ಲರೂ ಒಂದೇಬಗೆಯಾಗಿ ನಮ್ಮ ಉಪಯೋಗಕ್ಕೆ ಬರುತ್ತಾರೆಂದು ಹೇಳಲಿಕ್ಕೆ ಬರುವದಿಲ್ಲ. ಒಬ್ಬರು ಒಂದು ರೀತಿಯಿಂದ ನಮಗೆ ಉಪಯೋಗವಾದರೆ ಮತ್ತೊಬ್ಬರು ಮತ್ತೊಂದು ಬಗೆಯಿಂದ ಉಪಯೋಗವಾಗುವರು. ಇದನ್ನು ಲಕ್ಷಕ್ಕೆ ತಂದರೆ ನಾವು ಯಾರಿಗೂ ಹೆಸರಿಡುವ ಕಾರಣವಿಲ್ಲ.

---

## ೨೧೪— ಚಿಗರಿಯೂ ಚಿಗರಿಯ ಮರಿಯೂ.



ಒಂದು ಚಿಗರಿಯ ಮರಿಯು ಒಮ್ಮೆ ತನ್ನ ತಾಯಿಗೆ ಕೇಳುತ್ತದೆ "ಅವ್ವಾ! ನೀನು ನಾಯಿಗಿಂತಲೂ ಹೆಚ್ಚು ಚಪಲಳಿರುತ್ತೀ; ಅದಕ್ಕಿಂತಲೂ ಬೇಗನೇ ಓಡುತ್ತೀ; ಹೀಗಿದ್ದು ಅದರ ಶಬ್ದ ಕೇಳಿದ ಮಾತ್ರವೇ ನಿನ್ನ ಕೈಕಾಲೇ ಹೋಗುವವು; ಹೀಗೇಕೆ?" ಎಂದಿತು. ಚಿಗರಿಯು ನಕ್ಕು:— "ಮಗೂ! ನೀನನ್ನುವದು ನಿಜ; ಆದರೆ ನಾಯಿಯ ಕೂಗಿಗೆ ನಾನು ಬೆದರುವ ಕಾರಣವು ನನಗೇ ತಿಳಿಯದು; ನಾಯಿಗಿಂತಲೂ ದೊಡ್ಡದಾಗಿ ನನ್ನ ಶರೀರ; ಅದಕ್ಕಿಂತಲೂ ಚಪಲ ನನ್ನ ಮೈಕಟ್ಟು; ಆದರೂ ಅದರ ಕೂಗು

ಕಿವಿಗೆ ಬಿದ್ದೊಡನೆಯೇ ನಾನು ಹಿಂಡಿಹಿಪ್ಪಿಯಾದಂತಾಗುತ್ತೇನೆ " ಎಂದು ನುಡಿಯಿತು.

ತಾತ್ಪರ್ಯ:— ಬೆದರುವ ಸ್ವಭಾವವಿದ್ದವರಿಗೆ ಎಷ್ಟು ಧೈರ್ಯದ ನುಡಿಗಳನ್ನು ಹೇಳಿದರೂ, ಅವರ ಆ ಸ್ವಭಾವವು ಹೋಗುವದಿಲ್ಲ.

---

## ೨೧೫— ಇಲಿಯೂ ಕೋಳಿಯೂ ಬೆಕ್ಕೂ.

ಒಂದು ಇಲಿಯ ಸಣ್ಣ ಮರಿಯು ಅದೇ ತನ್ನ ಹೋರಿನಿಂದ ಹೊರಬಿದ್ದಿತ್ತು. ಸ್ವಲ್ಪ ಹೊತ್ತು ಅತ್ತಿತ್ತ ತಿರುಗಾಡಿ ತಿರುಗಿ ತನ್ನ ಹೋರಿನಲ್ಲಿ ಹೊಕ್ಕು ಅದು ತನ್ನ ತಾಯಿಗೆ:— " ಅವ್ವಾ! ನೀನು ಸಾಕಿ ಸಲಹಿ ಸಣ್ಣವನನ್ನು ದೊಡ್ಡವನನ್ನಾಗಿ ಮಾಡಿದ ಈ ಸ್ಥಳದಿಂದ ಈ ದಿನ ನಾನು ಕೊಂಚ ಹೊರಗೆ ಅಲೆದಾಡಿ ಬಂದೆ; ಅಲ್ಲಿ ನಾನು ನೋಡಿದ ಚಮತ್ಕಾರವನ್ನೇನು ಹೇಳಲಿ! ಬೀದಿಯ ಒಂದು ಬದಿಯಿಂದ ಅಡ್ಡಾಡು ತ್ತಿರಲು ನನ್ನ ದೃಷ್ಟಿಗೆ ಎರಡು ಪ್ರಾಣಿಗಳು ಬಿದ್ದವು; ಅವುಗಳಲ್ಲೊಂದು ಅತಿ ಅವಸ ರದ ಸ್ವಭಾವದ್ದಿದ್ದು ಅದರ ನೆತ್ತಿಯ ಮೇಲೆ ಕೆಂಪು ಬಣ್ಣದ ಒಂದು ತುರಾಯಿಯು ಅಲ್ಲಾಡುತ್ತಿತ್ತು; ಈ ಚಮತ್ಕಾರವನ್ನು ನಾನು ನೋಡನೋಡುವಷ್ಟರಲ್ಲಿ ಆ ಪ್ರಾಣಿ ಯು ತನ್ನ ಕೈಗಳೆರಡನ್ನೂ ಕುಣಿಸುತ್ತ ಒಮ್ಮೆಲೇ ಬಲು ಕರ್ಕಶವಾಗಿ ಕೂಗಿತು. ಆ ಕೂಗಿಗೆ ನನ್ನ ಕಿವಿಗಳು ಗಡುಚಿಕ್ಕಿದವು; ಇನ್ನು ಆ ಮತ್ತೊಂದು ಪ್ರಾಣಿಯ ಸುದ್ದಿಯನ್ನಿಷ್ಟು ಕೇಳು; ಆ ಪ್ರಾಣಿಯು ಬಲು ಸಾಧುವು; ಅತಿ ಶಾಂತವಾಗಿತ್ತು; ಅದರ ಮೈಮೇಲೆ ರೇಶ್ಮೆಯಂತೆ ಮೆತ್ತನ್ನ ತುಪ್ಪಳವಿತ್ತು; ಅದು ನೋಡಲು ಬಲು ಬೆಡಗಿನದಿತ್ತು; ಆಗ ಅದನ್ನು ನೋಡಿ ಅದರೊಡನೆ ನಮ್ಮ ಗೆಳೆತನವಾದರೆ ಒಳಿತೆಂದು ನನಗೆ ಎನಿಸದೇ ಇರಲಿಲ್ಲ;" ಎಂದು ಒಂದೇಸವನೇ ವರ್ಣಿಸಿತು. ಆಗ ತಾಯಿಯು:— " ಹುಚ್ಚ ಹುಡುಗಾ! ನಿನಗೆ ಕೊಂಚವೂ ತಿಳವಳಿಕೆಯಿಲ್ಲ; ಬರೇ ಹೊರಮಿಂಚಿಗೆ ಮರುಳಾಗುವಿಯಾದರೆ ಮೋಸಹೋಗುವಿ; ಇದನ್ನು ಚನ್ನಾಗಿ ನೆನಪಿನಲ್ಲಿಡು; ನೀನು ಮೊದಲು ನೋಡಿ ಅದರ ಕೂಗಿನಿಂದ ಭಯಗೊಂಡ ಪ್ರಾಣಿಯು ಕೋಳಿಯು; ಪಾಪ ಅದೆಷ್ಟೋ ಸಾಧುವು; ಅದರ ಮಾಂಸದ ಒಂದು ತುಣುಕಾದರೂ ಒಂದು ವೇಳೆ ನಮಗೆ ಸಿಗಬಹುದು; ಆದರೆ ರೇಷ್ಮೆಯಂತೆ ಮಿದುವಾದ ತುಪ್ಪಳುಳ್ಳ ನೀನು ನೋಡಿದ ಆ ಎರಡನೇ ಪ್ರಾಣಿಯು, ಬಲು ದುಷ್ಟ ಕ್ರೂರ ಸ್ವಭಾವದ ಬೆಕ್ಕು; ಇಲಿಯ ಮಾಂಸ ವನ್ನುಳಿದು ಬೇರೆ ಪದಾರ್ಥಗಳಾವವೂ ಅದಕ್ಕೆ ಸೇರದು; ಇದೂ ಚನ್ನಾಗಿ ನಿನ್ನ ನೆನ ಪಿನಲ್ಲಿರಲಿ; " ಎಂದು ಬುದ್ಧಿಗಲಿಸಿತು.

ಸಾರಾಂಶ:- ಹೊರಗಿನ ಹೊಳಪುರೂಪಗಳ ಮೇಲಿಂದಲೇ ಮನುಷ್ಯನ ಅಂತರಂಗದ ಪರೀಕ್ಷೆಯಾಗುವದು ಕಠಿಣವು.

---

## ೨೧೬:— ಗರುಡವೂ ಬಾಣವೂ.



ಒಂದು ಗರುಡವು ಎತ್ತರವಾದದ್ದೊಂದು ದಿನ್ನೆಯ ಮೇಲೆ ಕುಳಿತು ಮೊಲವನ್ನು ಹುಡುಕುತ್ತಿತ್ತು, ಆಗೊಬ್ಬ ಬಿಲ್ಲುಗಾರನಾದ ಬೇಡನು ಅದನ್ನು ನೋಡಿ ಒಳ್ಳೇ ಗುರಿಯಿಂದ ಅದಕ್ಕೊಂದು ಬಾಣವನ್ನು ಬಿಟ್ಟನು. ಆ ಬಾಣವು ಗರುಡದ ಮರ್ಮಸ್ಥಾನಕ್ಕೆ ಚುಚ್ಚಿ ಅದು ಸಾಯುವಂತಾಯಿತು. ಸಾಯುವ ವೇಳೆಯು ತನಗೆ ನಟ್ಟ ಬಾಣವ ಕಡೆಗೆ ಅದರ ದೃಷ್ಟಿಯು ಹೋಯಿತು. ತನ್ನ ಗರಿಗಳನ್ನೇ ಆ ಬಾಣಕ್ಕೆ ಹಚ್ಚಿರುವದನ್ನು ನೋಡಿ ಅದಕ್ಕೆ ಬಹು ದುಃಖವಾಯಿತು. ತನ್ನ ಗರಿಗಳೇ ತನ್ನ ಮರಣಕ್ಕೆ ಮೂಲವಾದದ್ದು ಆ ಗರುಡಕ್ಕೆ ದುಸ್ಸಹವಾಯಿತು.

ತಾತ್ಪರ್ಯವೇನೆಂದರೆ:— ತನ್ನವರೇ ತನ್ನ ಬನ್ನಕ್ಕೆ ಕಾರಣರಾದರೆ ಉಂಟಾಗುವ ದುಃಖವು ದ್ವಿಗುಣಿತವಾದದ್ದು.

---

## ೨೧೬:— ಒಕ್ಕಲಿಗನೂ ಗರುಡವೂ.

ಒಂದು ದಿವಸ ಒಬ್ಬ ಒಕ್ಕಲಿಗನು ಅಡವಿಯಲ್ಲಿ ತಿರುಗಾಡುತ್ತಿರುವಾಗ ಮುಳ್ಳುಕೊಂಪೆಯಲ್ಲಿ ಸಿಕ್ಕಿರುವ ಒಂದು ಗರುಡವು ಅವನಿಗೆ ಕಾಣಿಸಿತು. ಆ ಪಕ್ಷಿಯ ಸೌಂದರ್ಯವನ್ನು ನೋಡಿ ಅವನ ಹೃದಯದಲ್ಲಿ ದಯೆಯು ಸೆಲೆಯೊಡೆಯಿತು. ಆಗ ಅವನು ಕೂಡಲೇ ಆ ಕೊಂಪೆಯೊಳಗಿನ ಗರುಡವನ್ನು ಕಡೆಗೆ ತೆಗೆದು ಅದರ ಬಿಡುಗಡೆ ಮಾಡಿದನು. ಗರುಡವು ಒಮ್ಮೆಲೇ ಭರ್ರನೇ ಗಗನಕ್ಕೆ ಹಾರಿಹೋಯಿತು. ಇತ್ತ ಒಕ್ಕಲಿಗನು ಬಿಸಿಲಿನ ಬಳಲಿಕೆಯನ್ನು ಆರಿಸಿಕೊಳ್ಳಲು ಒಂದು ಹಾಳು ಗೋಡೆಯ ನೆರಳಿಗೆ ಹೋಗಿ ಕುಳಿತನು. ಕೊಂಚ ಕಾಲ ಕಳೆದನಂತರ ಅದೇ ಗರುಡವು ಆ ಒಕ್ಕಲಿಗನ ಕಂಬಳಿಯನ್ನು ತನ್ನ ಕಾಲಲ್ಲಿ ಹಿಡಿದುಕೊಂಡು ಸ್ವಲ್ಪ ದೂರ ಹೋಗಿ ಅಲ್ಲಿ ಅದನ್ನು ಕೆಳಗೆ ಚಲ್ಲಿಕೊಟ್ಟಿತು. ಈ ಎಲ್ಲ ಪ್ರಕಾರವನ್ನು ಕಂಡು ಒಕ್ಕಲಿಗನು ಗರುಡನ ಕೃತಘ್ನತೆಗೆ ಬಲು ಕ್ರುದ್ಧನಾದನು. ಆದರೇನು? ಕುಳಿತಲ್ಲಿಂದೆದ್ದು ಆ ಕಂಬಳಿಯನ್ನು ತೆಗೆದುಕೊಂಡು ತಿರುಗಿ ತನ್ನಸ್ಥಳಕ್ಕೆ ಬರಬೇಕೆಂದು ಅವನು ಹೊರಟನು. ಆದರೆ ಆ ಮೊದಲಿನ ಸ್ಥಳವೇ ಅವನಿಗೆ ಸಿಗದಾಯಿತು. ಗೋಡೆಯು ಅವನಿಗೆ ಕಾಣಲೊಲ್ಲದು, ಕಡೆಗೆ ಅವನಿಗೆ ಮಣ್ಣಿನ ರಾಸಿಯು ಮಾತ್ರ ಕಂಡಿತು. ಇದನ್ನು ನೋಡಿ ಗೋಡೆಯು ತನ್ನ ಮೇಲೆ ಬೀಳಬಾರದೆಂಬ ಆ ಪಕ್ಷಿಯ ಕೃತಜ್ಞತೆಗೆ ಆ ಒಕ್ಕಲಿಗನು ತಲೆದೂಗಿದನು. ಆಶ್ಚರ್ಯಪಡುತ್ತ ತನ್ನ ಮನೆಯ ಕಡೆಗೆ ಅವನು ಸಾಗಿದನು.

ಸಾರಾಂಶ:— ಸತ್ಕಾರ್ಯವು ಫಲಿಸದೇ ಹೋಗುವದಿಲ್ಲ.

---

## ೨೧೮:— ಮೀನಬಲೆಗಾರನೂ ಮೀನವೂ.

ಒಬ್ಬ ಮೀನಬಲೆಗಾರನು ನದಿಯಲ್ಲಿ ತನ್ನ ಕೋಲುಬಲೆಯನ್ನು ಹಾಕಿದನು. ಆಗೊಂದು ಮೀನವು ಬಲೆಗೆ ಬಿತ್ತು. ಅದನ್ನು ತೆಗೆದು ಬುಟ್ಟಿಯಲ್ಲಿ ಅವನು ಹಾಕುತ್ತಿರುವಷ್ಟರಲ್ಲಿ ಅದು ಆ ಜಾಲಗಾರನಿಗೆ ದಯೆಯುದನಿಯಲ್ಲಿ ತನ್ನನ್ನು ತಿರುಗಿ ನದಿಯಲ್ಲಿ ಚಲ್ಲಿಬಿಡಲು ಪ್ರಾರ್ಥಿಸಿತು. ಆಗ ಅವನು ಮೀನಕ್ಕೆ:—“ ಹು! ಅದೇಕೋ ! ನಿನ್ನನ್ನೇಕೆ ಬಿಡಬೇಕು ? ” ಎಂದು ಕೇಳಿದನು. “ ನನ್ನಂಥ ಸಣ್ಣ ಪ್ರಾಣಿಯಿಂದ ನಿನಗೇನು ಉಪಯೋಗವು ? ನಾನು ಬೆಳೆದ ಮೇಲೆ ನನ್ನ ಉಪಯೋಗವು ನಿನಗೆ ಬಹಳವಾದೀತು. ” ಎಂದು ಆ ಮೀನವು ಪ್ರತಿಯಾಗಿ ಹೇಳಿತು. “ ನೀನನ್ನುವದು ನಿಜ; ಆದರೆ ಈಗ ಕೈಗೆ ಸಿಕ್ಕದ್ದನ್ನು ಬಿಟ್ಟುಕೊಟ್ಟು ಮುಂದೊದಗಬೇಕಾಗಿರುವ ವಸ್ತುವಿನ ಆಶೆಯನ್ನು ಮಾಡುತ್ತ ಕೂಡಲು ನಾನೇನು ಮೂರ್ಖನಲ್ಲ ” ವೆಂದು ಆ ಜಾಲಗಾರನು ಮೀನಕ್ಕೆ ಸ್ಪಷ್ಟವಾಗಿ ಹೇಳಿದನು.



ಸಾರಾಂಶ:— ಕೈಯಲ್ಲಿರುವದನ್ನು ಕಳೆದುಕೊಂಡು ಓಡುವದನ್ನು ಬೆನ್ನಟ್ಟುವದು ಬುದ್ಧಿಗೇಡಿತನವೇ ಸರಿ.

## ೨೧೯:— ಮನುಷ್ಯನೂ ಮುಂಗಲಿಯೂ.

ಒಬ್ಬ ಮನುಷ್ಯನು ಒಂದು ಮುಂಗಲಿಯನ್ನು ಹಿಡಿದು ಅದನಿನ್ನು ಕೊಲ್ಲುವವ ನಿದ್ದನು. ಅಷ್ಟರಲ್ಲಿ ಅದು ಕನಿಕರ ಹುಟ್ಟುವಂತೆ ಅವನಿಗೆ:— "ಎಲೋ! ಹೀಗೆ ನಿರ್ದಯನಾಗಬೇಡ! ನಿನ್ನ ಮನೆಯೊಳಗಿನ ಇಲಿಗಳನ್ನು ಕೊಂದು ನಿನ್ನ ಧಾನ್ಯವನ್ನು ರಕ್ಷಿಸುವವನು ನಾನು; ಅರಿವಿ ಅಂಚಡಿಗಳನ್ನು ಕಾಯುವವನು ನಾನು; ಇಂಥ ನನ್ನನ್ನು ಕೊಂದು ನೀನು ಯಾವ ಪಾತಕಕ್ಕೆ ಗುರಿಯಾಗುವಿಯೋ ದೇವರೇ ಬಲ್ಲ;" ಎಂದು ಗಟ್ಟಿಸಿ ಮಾತಾಡಿತು. ಆಗ ಆ ಮನುಷ್ಯನು ಪ್ರತಿಯಾಗಿ "ನಿನ್ನ ತಿನಸಿಗಾಗಿ ನೀನು ಇಲಿಗಳನ್ನು ಕೊಲ್ಲುತ್ತೀ; ನನ್ನ ಹಿತವನ್ನು ಸಾಧಿಸಲು ಬೇಕಾದುದು ನಿನಗೆ ಸ್ವಲ್ಪೇ ಇದೆ; ಇದಲ್ಲದೆ ನಮ್ಮ ಮನೆಯಲ್ಲೆಲ್ಲ ಹೊದರು ಮಾಡಿ ಮನೆಯನೆಲ್ಲ ಕೆಡಿಸಿಬಿಡುತ್ತೀ; ಹೀಗಿರಲು ನಿನ್ನ ಇಂಥ ಮೂರ್ಖತನದ ಮತ್ತು ಸುಳ್ಳು ಕಾರಣಗಳಿಗೆ ಮೋಸ ಹೋಗಿ ನಾನು ನಿನ್ನನ್ನು ಬಿಟ್ಟು ಬಿಡುವೆನೆಂದು ಕನಸಿನಲ್ಲಿಯೂ ಕೂಡ ನೆನೆಯದಿರು;" ಎಂದು ನುಡಿದವನೇ ಆ ಮುಂಗಲಿಯನ್ನು ಆ ಮನುಷ್ಯನು ಕೊಂದುಬಿಟ್ಟನು.

ಸಾರಾಂಶವೇನೆಂದರೆ:— ಸ್ವಾರ್ಥವನ್ನು ಸಾಧಿಸಿಕೊಳ್ಳಬೇಕೆಂದು ಕೆಲಸ ಮಾಡಿ ಅದನ್ನು ಪರರ ಸಲುವಾಗಿ ಮಾಡಿರುವೆನೆಂದು ಜಂಭಕೊಚ್ಚಿ ಯಾವನೊಬ್ಬನು ಸಂಕಟದೊಳಗಿಂದ ಪಾರಾಗಲೆತ್ನಿಸಿದರೆ ಅವನಂಥ ಮೂರ್ಖನು ಅವನೇ ಸರಿ.

---

## ೨೨೦:— ಜೇಡವೂ ರೇಶ್ಮೆಯ ಹುಳವೂ.

ಒಬ್ಬ ಮನುಷ್ಯನು ಒಂದು ಕೋಣೆಯಲ್ಲಿ ಕೆಲವು ರೇಶ್ಮೆಯ ಹುಳಗಳನ್ನು ಸಾಕಿದ್ದನು ಒಮ್ಮೆ ಅಲ್ಲಿ ಒಂದು ಜೇಡವು ಬಲೆಯನ್ನು ಹೆಣೆಯುತ್ತ ಕುಳಿತಿತ್ತು. ಅದನ್ನು ಕಂಡು ಒಂದು ರೇಶ್ಮೆಯ ಹುಳವು:— ಏನಣ್ಣಾ! ಇಷ್ಟು ಪರಿಶ್ರಮದಿಂದ ನೀನು ಮಾಡುತ್ತ ಕುಳಿತಿರುವದೇನು?" ಎಂದು ಕೇಳಿತು. ಪ್ರತಿಯಾಗಿ ಜೇಡವು:— "ಮೂರ್ಖಾ ಸುಮ್ಮನಿರು! ಹೀಗೆ ಮೂರ್ಖನಂತೆ ಪ್ರಶ್ನೆಯನ್ನು ವಿಚಾರಿಸಿ ನನ್ನ ಕೆಲಸಕ್ಕೆ ಅಡ್ಡಿಯನ್ನು ಮಾಡಬೇಡ! ನಾನು ಮಾಡುವದೆಲ್ಲ ಜಗದಲ್ಲಿ ನನ್ನ ನಾಮವು ಚಿರಕಾಲ ಉಳಿಯಲೆಂದೇ ಇರುತ್ತದೆ;" ಎಂದು ಜಂಭದಿಂದ ಮಾತಾಡಿತು. ಆದರೆ ಇಷ್ಟರಲ್ಲಿ ಆ ರೇಶ್ಮೆಯ ಹುಳಗಳಿಗೆ ಆಹಾರವನ್ನು ಹಾಕಲಿಕ್ಕೆ ಒಬ್ಬ ಚಾಕರನು ಆ ಕೋಣೆಗೆ ಬಂದು ಮಾರ್ಗದಲ್ಲಿ ತಡೆಯಾದುದರಿಂದ ಕಸಬರಿಗೆಯ ಒಂದೇ ಹೊಡೆತದಿಂದ ಆ ಜೇಡದ ಜಾಲವನ್ನು ಹರಿದು ಬಿಟ್ಟನು.

ತಾತ್ಪರ್ಯ:— ನಮ್ಮ ಯಾವದೊಂದು ಕೃತ್ಯಕ್ಕೆ ನಾವು ಕೊಡುವಷ್ಟೇ ಮಹತ್ವವನ್ನು ಪರರೂ ಕೊಡಬೇಕೆಂದು ನೆನೆಯುವದು ಬುದ್ಧಿಗೇಡಿತನವು.

---

## ೨೨೧:— ತೋಳವೂ ಕುದುರೆಯೂ.



ಒಂದು ತೋಳವು ಕಡಲೆಯ ಹೊಲದಿಂದ ಅದೇ ಹೊರಬಿದ್ದಿತು. ಅಷ್ಟರಲ್ಲಿ ಅದಕ್ಕೊಂದು ಕುದುರೆಯು ಭೆಟ್ಟಿಯಾಯಿತು. ಆಗ ಅದು ಕುದುರೆಗೆ:— " ಅಣ್ಣಾ! ಬೇಗ ಹೋಗು ಆ ಹೊಲಕ್ಕೆ! ಅಲ್ಲಿ ಕಡಲೆಯ ಪೈರು ಚನ್ನಾಗಿ ಬೆಳೆದುಬಂದಿದೆ. ನೀನು ನನ್ನವನಿದ್ದು, ನೀನು ಕಡಲೆಯನ್ನು ಕಡಿಯುವ ಸಪ್ಪಳವನ್ನು ಕೇಳಿ ನನಗೆ ಅದೆಷ್ಟೋ ಆನಂದ; ಆದ್ದರಿಂದಲೇ ಒಂದೂ ಗಿಡಕ್ಕೆ ಕೈಹಚ್ಚದೆ, ಎಲ್ಲವನ್ನೂ ನಿನ್ನ ಸಲುವಾಗಿ ನಾನು ಬಿಟ್ಟುಬಂದಿದ್ದೇನೆ; " ಎಂದು ಒಳ್ಳೇ ಹಿತವಂತನಂತೆ ನುಡಿಯಿತು. ಇದನ್ನು ಕೇಳಿ ಕುದುರೆಯು:— " ಅಯ್ಯಾ! ಕಡಲೆಯು ನಿಮ್ಮ ಖಾದ್ಯವಾಗಿದ್ದರೆ, ನೀನು ಉಪವಾಸ ಬಿದ್ದು, ನನ್ನ ಹಲ್ಲಿನ ಸಪ್ಪಳದಿಂದ ಸಂತೋಷ ಹೊಂದುವ ಇಚ್ಛೆಯನ್ನು ನೀನು

ಮಾಡುತ್ತಲೇ ಇದ್ದಿಲ್ಲ; ಮತ್ತು ಆ ಹೊಲದಲ್ಲಿ ಒಂದೂ ಕಡಲೆಯ ಕಾಳನ್ನು ನೀನು ಉಳಿಸುತ್ತಿದ್ದಿಲ್ಲ;" ಎಂದು ನುಡಿಯಿತು.

ತಾತ್ಪರ್ಯ:— ತನಗೆ ಬೇಡಾದ ಪದಾರ್ಥವನ್ನು ಪರರಿಗೆ ಕೊಟ್ಟು ಔದಾರ್ಯವಂತನೆಂದೆನಿಸಿಕೊಳ್ಳುವಲ್ಲಿ ಅಷ್ಟೊಂದು ಮಹತ್ವವಿಲ್ಲ.

———————

## ೨೨೨:-- ಗಿಡಗವೂ ಕೋಳಿಯೂ.

ಒಬ್ಬ ಒಕ್ಕಲಿಗನ ಹತ್ತರ ಒಂದು ಕೋಳಿಯಿತ್ತು. ಒಡೆಯನು ತನ್ನನ್ನು ಮುರಿದು ತಿನ್ನುವನೆಂದು ಒಮ್ಮೆ ಆ ಕೋಳಿಗೆ ತಿಳಿಯಿತು. ಆಗ ಅದು ಅವನ ಕಣ್ಣು ತಪ್ಪಿಸಬೇಕೆಂದು ಅಲ್ಲಲ್ಲಿ ಅಡಗಿಕೊಂಡು ಕುಳಿತುಕೊಳ್ಳಹತ್ತಿತು. ತನ್ನೊಡನೆ ಇದ್ದ ಕೋಳಿಗಳ ಕುತ್ತಿಗೆಯನ್ನು ಆ ಒಕ್ಕಲಿಗನು ಕರಕರನೆ ಕೊಯ್ಯುವಾಗ ಆ ಕೋಳಿಯು ಅನೇಕ ವೇಳೆ ನೋಡಿತ್ತು. ಆದ್ದರಿಂದಲೇ ಅದಕ್ಕೆ ದಿಗಿಲುಬಡಿದಂತಾಗಿತ್ತು. ಕಾಳುಗಳ ಆಶೆಯನ್ನು ತೋರಿಸಿ ಸಮೀಪಕ್ಕೆ ಕರೆದು, ಮೆಲ್ಲನೆ ಹಿಡಿದು ಆ ಕೋಳಿಯ ಕುತ್ತಿಗೆಯನ್ನು ಕೊಯ್ಯಲು ಆ ಒಕ್ಕಲಿಗನು ಬಲು ಹೆಣಗಿದನು. ಆದರೆ, ಎಲ್ಲವನ್ನು ಬಲ್ಲಿದುದಾದ್ದರಿಂದ, ಆ ಕೋಳಿಯು ಅವನ ಕೈಗೇ ಹತ್ತಲಿಲ್ಲ. ಬದಿಯಲ್ಲಿಯೇ ಪಂಜರದಲ್ಲಿ ಆ ಒಕ್ಕಲಿಗನು ಸಾಕಿದ ಒಂದು ಗಿಡಗವು ಇತ್ತು. ಇದೆಲ್ಲವನ್ನೂ ನೋಡಿ ಅದು ಕೋಳಿಗೆ:— "ಎಲೋ! ನೀನು ಅತಿಮೂರ್ಖ ಕೃತಘ್ನ! ಒಡೆಯನು ಕೂಗಿದೊಡನೇ ಹತ್ತರ ಹೋಗಿ ಅವನನ್ನುವದನ್ನು ಕೇಳಿಕೊಳ್ಳುವದು ನಿನ್ನ ಕರ್ತವ್ಯವಲ್ಲವೇ? ನಾನು ಹೇಗೆ ಇರುವೆನು ನೋಡು, ಮತ್ತೊಂದು ಸಲ ನನ್ನನ್ನು ಕೂಗುವ ಭಾಗವೇ ನನ್ನ ಯಜಮಾನನಿಗೆ ಬೀಳುವದಿಲ್ಲ. ಇದನ್ನು ನೀನೇ ನೋಡಿರುವಿಯಲ್ಲ;" ಎಂದು ಆಶ್ಚರ್ಯತೆಯಿಂದ ನುಡಿಯಿತು. ಇದಕ್ಕೆ ಕೋಳಿಯು:— "ನಿಜವಯ್ಯಾ! ಹು! ನನ್ನಂತೆ ನಿನ್ನ ಕುತ್ತಿಗೆಯನ್ನು ಕತ್ತಿಗೆ ತುತ್ತು ಮಾಡಿ, ನಿನ್ನ ಶರೀರದ ತುಣುಕು ತುಣುಕಗಳನ್ನು ಹುಂಚನ ಮೇಲಿಟ್ಟು ಬೇಯಿಸಲು ಯಜಮಾನನು ನಿನ್ನನ್ನು ಕರೆಯುತ್ತಿದ್ದರೆ ನೀನೂ ಅತ್ತಿತ್ತ ಅಡಗಿಕೊಳ್ಳುತ್ತಿದ್ದಿ; ಇದಕ್ಕೇನೂ ಸಂಶಯವಿಲ್ಲ;" ಎಂದು ಆಕ್ರೋಶದಿಂದ ಮಾತಾಡಿತು.

ತಾತ್ಪರ್ಯ:-- ಪರಿಸ್ಥಿತಿಯಲ್ಲಿ ಪಲ್ಲಟವಾದಂತೆ ನಡೆನುಡಿಗಳಲ್ಲಿಯೂ ಹೆಚ್ಚು ಕಡಿಮೆಯಾಗುವದು ಸ್ವಾಭಾವಿಕವು.

## ೨೨೩ ನರಿಯೂ ಗೊಂಬೆಯ ಮುಖವೂ.



ಒಂದು ದಿನ ರಾತ್ರಿ ಒಂದು ನರಿಯು ಒಬ್ಬ ಗೊಂಬೆಮಾಡುವವನ ಅಂಗಡಿಯನ್ನು ಹೊಕ್ಕಿತು. ಅಲ್ಲಿ ಅನೇಕ ಗೊಂಬೆಗಳ ಮೋರೆಗಳಿದ್ದವು. ಅವುಗಳಲ್ಲೊಂದರ ಮೇಲೆ ಕಾಲನ್ನಿಟ್ಟು ಆ ನರಿಯು ಆ ಮೋರೆಯನ್ನು ಚನ್ನಾಗಿ ನೋಡೇ ನೋಡಿತು. ಆಗ ಅದು:— “ ಈ ಮುಖವು ಎಷ್ಟು ಮುದ್ದಾಗಿದೆ; ಆದರೇನು ಇದರಲ್ಲಿ ಮಾಂಸ ವಿಲ್ಲ; ರಕ್ತವಿಲ್ಲ; ಮಿದುಳಿಲ್ಲ; ಬರೇ ನಗೆಯಾಡುವದಕ್ಕೆ ಮಾತ್ರ ಇದರ ಉಪ ಯೋಗವು; ” ಎಂದು ತನ್ನಲ್ಲಿ ತಾನು ಮಾತನಾಡಿತು.

ಸಾರಾಂಶ:— ಜ್ಞಾನವಿಲ್ಲದೆ ಮನುಷ್ಯನಲ್ಲಿ ಬರಿ ಹೊರಗಿನ ಮಿರುಗು ಇದ್ದ ದ್ದಾದರೆ ಅದು ನಗೆಗೆ ಮಾತ್ರ ಗುರಿಯಾಗುತ್ತದೆ.

———————

## ೨೨೪:— ಕರಡಿಯೂ ನರಿಯೂ.

ಕರಡಿಯು ಶವವನ್ನು ಮುಟ್ಟುವದಿಲ್ಲವೆಂದು ಹೇಳಿಕೆಯು. ಒಮ್ಮೆ ಒಂದು ಕರಡಿಯು:— “ ಮನುಷ್ಯಜಾತಿಯ ವಿಷಯದಲ್ಲಿ ನನಗೆ ಅದೆಷ್ಟೋ ಆದರ! ಜಗ ತ್ತನ್ನೇ ಯಾರಾದರೂ ಕೊಡುವೆನೆಂದರೂ ಮನುಷ್ಯನ ಪ್ರೇತವನ್ನು ನಾನು ಮುಟ್ಟು

ವದಿಲ್ಲ; ಕೊಂಚವೂ ಅದಕ್ಕೆ ಗಾಯಗೊಳಿಸುವದಿಲ್ಲ; ” ಎಂದು ಅಂದಿತು. ಇದಕ್ಕೆ ನರಿಯು:— “ ಅಹುದಯ್ಯಾ! ಸತ್ಯವಿರಬಹುದು; ಪ್ರೇತದ ವಿಷಯದಲ್ಲಿ ಪ್ರೇಮವಿದ್ದಂತೆ ನಿನಗೆ ಜೀವಂತ ಮನುಷ್ಯನ ವಿಷಯದಲ್ಲೂ ಇರುವದಾದರೆ ನಾನು ಅಹುದೆನ್ನುತ್ತಿದ್ದೆನು; ” ಎಂದು ನುಡಿಯಿತು.

ಸಾರಾಂಶ:— ಉಪಯೋಗ ಮಾಡಿಕೊಳ್ಳಲಿಕ್ಕೆ ಬರದಂಥ ವಸ್ತುವಿನ ವಿಷಯದಲ್ಲಿ ನಾನು ನಿರಪೇಕ್ಷಿಯಾಗಿರುವೆನೆಂದು ಜಂಭಕೊಚ್ಚುವದು ಸೋಗಲ್ಲದೆ; ಮತ್ತೇನು ?

---

### ೨೨೫:— ಸರದಾರನೂ ಅವನ ಕುದುರೆಯೂ.

ಒಬ್ಬ ಸರದಾರನು ಯುದ್ಧದ ಕಾಲಕ್ಕೆ ತನ್ನ ಕುದುರೆಯ ಅನ್ನ ನೀರುಗಳ ಸಲುವಾಗಿ ಬಲು ಎಚ್ಚರಪಡುತ್ತಿದ್ದನು. ಮುಂದೆ ಕೆಲವು ದಿನಗಳ ಮೇಲೆ ಯುದ್ಧವು ನಿಂತಿತು. ಆಗ ಆ ಸರದಾರನ ವೇತನವು ಕಡಿಮೆ ಮಾಡಲ್ಪಟ್ಟಿತು. ಆದ್ದರಿಂದ ಕುದುರೆಯ ಮೇಲಿನ ಅವನ ಮೊದಲಿನ ಪ್ರೇಮವು ಹೋಯಿತು. ಕೈಗೆ ಕೈ ಹತ್ತಿ ಕಾದುವಾಗ ಎದೆಗಾರಿಕೆಯಿಂದ ಸರದಾರನನ್ನು ಸಮರಾಂಗಣದಲ್ಲಿ ಹೊತ್ತುಕೊಂಡು ಫುರುಫುರಿಸುತ್ತಿರುವ ಕುದುರೆಯ ಬೆನ್ನ ಮೇಲೆ ಈಗ ಕಟ್ಟಿಗೆಯ ಹೊರೆಗಳು ಬಂದವು. ಅನ್ನನೀರುಗಳ ವ್ಯವಸ್ಥೆಯಂತೂ ಕುಂಡಿದ್ದೇ ಇದೆ. ಆದ್ದರಿಂದ ಆ ಕುದುರೆಯು ಕೊರಗಿ ದುರ್ಬಲವಾಗತೊಡಗಿತು. ಆದರೆ ಇಷ್ಟರಲ್ಲಿ ಮತ್ತೆ ಕಾಳಗವು ಆರಂಭವಾಗಿ ಸರದಾರನಿಗೆ ಯುದ್ಧದ ಕರೆವು ಬಂತು. ಆಯಿತು; ಕುದುರೆಯ ದೈವವು ಮತ್ತೆ ತೆರೆಯಿತು. ಸರದಾರನ ಪ್ರೇಮವು ಕುದುರೆಯ ಮೇಲೆ ಹೆಚ್ಚಾಗಹತ್ತಿತು. ಕುದುರೆಯು ಕೊಬ್ಬಲೆಂದು ಅದರ ಅನ್ನನೀರುಗಳ ವ್ಯವಸ್ಥೆಯನ್ನು ಚನ್ನಾಗಿ ಇಡಹತ್ತಿದನು. ಆದರೆ ಎಲ್ಲವೂ ವ್ಯರ್ಥ! ಕುದುರೆಯು ಕೊಂಚವೂ ಕೊಬ್ಬಲಿಲ್ಲ. ಸರದಾರನನ್ನು ಸಮರಾಂಗಣದಲ್ಲಿ ನಿರಾಯಾಸವಾಗಿ ಹೊತ್ತುತಿರುಗುವ ಕುದುರೆಯು ಈಗ ನಡುನಡುವೆ ನಡೆಯಲ್ಲಿ ತಡೆಯಹತ್ತಿತು. ಆಗ ಕುದುರೆಯು ಸರದಾರನಿಗೆ:— “ ಅಯ್ಯಾ! ನಿನ್ನ ಕಾಲ ಮೇಲೆ ನೀನೇ ಕಲ್ಲು ಚಲ್ಲಿಕೊಂಡಿ! ನನ್ನ ಬೆನ್ನ ಮೇಲೆ ಕಟ್ಟಿಗೆಯ ಹೊರೆಗಳನ್ನು ಹೊರಿಸಿ, ನನ್ನ ಕೂಳನ್ನು ಕಡಿಮೆ ಮಾಡಿ, ಕುದುರೆಯನ್ನು ಕತ್ತೆಯ ಹಾಗೆ ಮಾಡಿದಿ! ಈಗ ಕಾಳಗದಲ್ಲಿ ಮೊದಲಿನಂತೆ ನಿನ್ನ ಉಪಯೋಗಕ್ಕೆ ನಾನು ಬಾರದಿದ್ದರೆ ನನ್ನ ತಪ್ಪೇನು ಅದರಲ್ಲಿ; ” ಎಂದು ಮಿಡುಕುತ್ತ ನುಡಿಯಿತು.

ಸಾರಾಂಶಃ— ಯಾವದೊಂದು ಪ್ರಾಣಿಯನ್ನು ಬೇಕಾದಾಗ ಮಾತ್ರ ಸಾಕುತ್ತ ಬೇಡಾದಾಗ ಹೊರದೂಡುವ ನಡತೆಯು ಚನ್ನಾದದ್ದಲ್ಲ. ಒಮ್ಮಿಲ್ಲೊಮ್ಮೆ ಈ ನಡತೆಯು ಮನುಷ್ಯನಿಗೆ ಅಹಿತವನ್ನು ಮಾಡಿಯೇ ತೀರುವದು.

---

### ೨೨೬:— ತೋಳವೂ ನರಿಯೂ ಕೋತಿಯೂ.

ಒಂದು ಕೋತಿಯನ್ನು ಮಧ್ಯಸ್ಥಗಾರನನ್ನು ಮಾಡಿ, ಅದರ ಮುಂದೆ ತೋಳವು ನರಿಯ ಮೇಲೆ ಕಳವಿನ ಆರೋಪವನ್ನು ಹೊರಿಸಿತು. ಈ ಜಗಳವನ್ನು ಬಗೆಹರಿಸುವ ಚಮತ್ಕಾರವನ್ನು ನೋಡಲಿಕ್ಕೆಂದು ಬೇರೇ ಪಶುಗಳೂ ಆ ಸಭೆಯಲ್ಲಿ ಸೇರಿದ್ದವು. ತೋಳನ ಭಾಷಣವು ಮುಗಿಯಿತು. ಆಮೇಲೆ ನರಿಯು ತನ್ನ ಮಾತಿಗೆ ಮೊದಲು ಮಾಡಿತು. " ನಾನು ತೋಳನ ಒಡವೆಗಳನ್ನು ಕದ್ದಿಲ್ಲ" ವೆಂದು ಅದು ಸ್ಪಷ್ಟವಾಗಿ ಹೇಳಿತು. ಕಡೆಗೆ ಕೋತಿಯು ಎಲ್ಲ ವಿಷಯವನ್ನು ಸಮಾಲೋಚಿಸಿ ಜಗಳವನ್ನು ತೀರಿಸಿತು. ಅದು ತೋಳನಿಗೆ " ನಿನ್ನದೆಂಬುವ ಯಾವ ಒಡವೆಯೂ ಹೋಗಿಲ್ಲವೆಂದೂ, " ನರಿಗೆ " ನೀನು ಕಳವು ಮಾಡಿರಲಿಕ್ಕೇ ಸಾಕು " ಎಂದೂ ತೀರ್ಮಾನ ಹೇಳಿ, ಹೀಗೆ ಇಬ್ಬರನ್ನೂ ವಂಚಕರೆಂದು ಸಿದ್ಧಮಾಡಿತು. ಆ ಮೇಲೆ ಸಭೆಯು ತೀರಿತು.



ಸಾರಾಂಶ:— ಒಮ್ಮೆ ಠಕ್ಕನೆಂಬ ಖ್ಯಾತಿಯುಂಟಾದರೆ ಪರರು ಆ ಮನುಷ್ಯನನ್ನು ಎಂದೂ ನಂಬುವದಿಲ್ಲ. ತೋಳನು ಕುರಿಗಳನ್ನು ಕೊಂದು ತಿನ್ನುವದೆಂದೂ ನರಿಯು ವಂಚಕನೆಂದೂ ಪ್ರಸಿದ್ಧಿಯಿದೆ. ಆದ್ದರಿಂದಲೇ ಕೋತಿಯು ಮೇಲಿನಂತೆ ತೀರ್ಮಾನ ಮಾಡಿತು.

## ೨೨೭:— ಹಳೇಹದ್ದೂ ಪಾರಿವಾಳಗಳೂ.

ಒಂದು ಪೊದೆಯಲ್ಲಿ ಅನೇಕ ಪಾರಿವಾಳಗಳು ವಾಸವಾಗಿರುತ್ತಿದ್ದವು. ಅವುಗಳನ್ನು ಮುರಿದು ತಿನ್ನುವದಕ್ಕೆಂದು ಒಂದು ಹಳೇಹದ್ದು ಬಹು ದಿವಸಗಳಿಂದ ಹೊಂಚು ಹಾಕಿ ಹಾಕಿ ಬೇಸತ್ತಿತು. ಒಂದಾದರೂ ಅದಕ್ಕೆ ಪಾರಿವಾಳವು ಸಿಗಲಿಲ್ಲ. ಆಗ ಅದೊಂದು ಹಂಚಿಕೆಯನ್ನು ಹಾಕಿತು. ಏನಂದರೆ, ಒಳ್ಳೇ ಸಾಧುಭಾವದಿಂದ ಹೋಗಿ ಆ ಪಾರಿವಾಳಗಳಿಗೆ ಅದು:— "ಎಲ್ರೈ! ನನ್ನಂಥ ಬಲಾಢ್ಯ ಮತ್ತು ಶೂರಪ್ರಾಣಿಯನ್ನು ನೀವು ನಿಮ್ಮ ಅರಸನನ್ನಾಗಿ ಮಾಡಿಕೊಂಡರೆ ನಿಮಗೆ ಗಿಡಗ ಮುಂತಾದ ನಿಮ್ಮ ಶತ್ರುಗಳಿಂದ ಯಾವ ಭಯವೂ ಇಲ್ಲ; ಅವುಗಳಿಂದ ನಿಮ್ಮನ್ನು ಜೋಪಾನಮಾಡುವ ಭಾರವು ನನ್ನದು;" ಎಂದು ಮಾತನಾಡಿತು. ಪಾರಿವಾಳಗಳಿಗೆ ಗಿಡಗನ ಪಿಡುಗು ತಡೆಯಲಾರದಂತಾಗಿತ್ತು. ಆದ್ದರಿಂದ ಕೂಡಲೇ ಆ ಹಳೇಹದ್ದಿನ ಮಾತನ್ನು ಎಲ್ಲ ಪಾರಿವಾಳಗಳೂ ಮನ್ನಿಸಿದವು. ಮತ್ತು ತಮ್ಮ ಪೊದೆಯಲ್ಲಿಯೇ ಅದಕ್ಕೆ ಇರಲು ಸ್ಥಳಕೊಟ್ಟವು. ಆದರೆ ಈ ಹದ್ದು ನಿತ್ಯದಲ್ಲೂ ಒಂದೊಂದಾಗಿ ಪಾರಿವಾಳಗಳನ್ನು ಕೊಂದು ತಿನ್ನಲಾರಂಭಿಸಿತು. ಈ ಸಮಾಚಾರವು ಹಿಂದಿನಿಂದ ಆ ಪಾರಿವಾಳಗಳಿಗೆ ತಿಳಿಯ ಬಂತು. ವಿಚಾರವಿಲ್ಲದೆ ಆ ಹದ್ದಿಗೆ ತಮ್ಮೆಡೆಯಲ್ಲಿ ಸ್ಥಾನವನ್ನು ಕೊಟ್ಟದ್ದಕ್ಕೆ ಅವಕ್ಕೆ ಪಶ್ಚಾತ್ತಾಪನೆನಿಸಿತು.

ಸಾರಾಂಶ:— ಒಬ್ಬ ವೈರಿಯನ್ನು ಮುರಿಯಬೇಕೆಂದು ಮತ್ತೊಬ್ಬ ವೈರಿಯ ಸಹಾಯವನ್ನು ಸಂಪಾದಿಸಬೇಕೆನ್ನುವದು ನಮ್ಮ ಮೂರ್ಖತನವಲ್ಲದೆ ಮತ್ತೇನು?

---

## ೨೨೮:— ಹಂಸಗಳೂ ಬಕಪಕ್ಷಿಗಳೂ.

ಕೆಲವು ಹಂಸಗಳೂ ಬಕಪಕ್ಷಿಗಳೂ ಕೂಡಿ ಒಂದು ಹೊಲದಲ್ಲಿ ಕಾಳುಗಳನ್ನು ತಿನ್ನುತ್ತಿದ್ದವು. ಇಷ್ಟರಲ್ಲಿ ಅಕಸ್ಮಾತ್ತಾಗಿ ಆ ಹೊಲದ ಯಜಮಾನನು ಅಲ್ಲಿಗೆ ಬಂದನು. ಅವನನ್ನು ನೋಡಿದೊಡನೇ ಶರೀರದಿಂದ ಹಗುರಾಗಿದ್ದುದರಿಂದ ಬಕಪಕ್ಷಿಗಳು ಬೇಗನೇ ಹಾರಿಹೋದವು. ಹಂಸಗಳು ಕೊಂಚ ಸ್ಥೂಲಶರೀರದವುಗಳಾದ್ದರಿಂದ ಆ ಒಕ್ಕಲಿಗನ ಕೈಗೆ ಸಿಕ್ಕು ಅವು ಜೀವಕ್ಕೆ ಎರವಾದವು.

ಸಾರಾಂಶ:— ದುರ್ಜನರ ಸಂಗದಲ್ಲಿ ಸೇರಿದ ಸಜ್ಜನನೂ ಶಿಕ್ಷೆಗೆ ಪಾತ್ರನಾಗುತ್ತಾನೆ.

---

## ೨೨೯:— ತೋಳವೂ ಕುರಿಯೂ.

ಒಂದು ಕುರಿಯು ಕಂದರದ ಎತ್ತರವಾದ ಭಾಗದ ಮೇಲೆ ಮೇಯುತ್ತಿರುವಾಗ ಅದನ್ನು ಒಂದು ತೋಳವು ಕಂಡಿತು. ಅಲ್ಲಿಗೆ ಹೋಗುವದು ಅದಕ್ಕೆ ಸಾಧ್ಯವಿರಲಿಲ್ಲ. ಆದ್ದರಿಂದ ತೋಳವು ಕುರಿಗೆ:— "ಎಲೋ! ಅತಿ ಎತ್ತರವಾದ ಸ್ಥಳದ ಮೇಲೆ ನೀನು ಯಾವಾಗಲೂ ಮೇಯುತ್ತಿರುವದು ಒಳಿತಲ್ಲ ನೋಡು! ಕೊಂಚ ಕಾಲು ಸರಿದರೆ ಆಯಿತು; ನೀನು ನಿನ್ನ ಪ್ರಾಣಕ್ಕೆ ಎರವಾಗುತ್ತೀ, ಅದಕ್ಕಿಂತ ಇಲ್ಲಿ ಕೆಳಗಿರುವ ಎಳೆಎಳೆ ಹುಲ್ಲನ್ನೂ, ಸವಿಯಾಗಿರುವ ಎಲೆಗಳನ್ನೂ ನೀನು ತಿನ್ನುವಿಯಾದರೆ ನನಗೆ ಅದೆಷ್ಟೋ ಆನಂದ! ಬಾ! ಬೇಗನೇ ಕೆಳಗಿಳಿದು ಬಾ! ಎಂದು ಅಂದಿತು; ಇದನ್ನು ಕೇಳಿ ಕುರಿಯು:—"ಅಯ್ಯಾ! ನೀನನ್ನುವದು ನಿಜ; ಆದರೆ ಹಸಿದು ಹಲ್ಲು ಮಸೆಯುತ್ತಿರುವ ನಿನ್ನ ಮುಂದೆ ನಾನು ಬರಲಿಚ್ಛಿಸುವದಿಲ್ಲ; ಹಾದಿಯನ್ನು ಹಿಡಿ ಮುಂದೆ!" ಎಂದು ಶಾಂತವಾಗಿ ಮಾತಾಡಿತು.



ತಾತ್ಪರ್ಯ:— ಸ್ವಾರ್ಥಿಗಳಾದವರು ಹುಸಿಯಾಡಲೂ ಮೋಸಮಾಡಲೂ ಹಿಂದು ಮುಂದು ನೋಡುವದಿಲ್ಲ. ಪರರ ಹಿತವನ್ನು ಮಾಡುತ್ತಿರುವವರಂತೆ ಅವರು ಎಷ್ಟೇ ತೋರಿಸಿಕೊಂಡರೂ ಜಾಣರು ಅವರನ್ನು ನಂಬಬಾರದು. ಅವರ ಸವಿಮಾತುಗಳೆಲ್ಲ ಆಡಂಬರವೆಂದೇ ತಿಳಿಯಬೇಕು.

## ೨೩೦ ಸಮುದ್ರವೂ ನದಿಗಳೂ.

ಒಬ್ಬ ಪಂಡಿತನು ಬಲು ಸೊಕ್ಕಿನವನಿದ್ದನು. ಅವನು ಒಂದು ದಿನ ವಿದ್ಯಾರ್ಥಿಗಳಿಗೆ ತತ್ವಜ್ಞಾನವನ್ನು ಕಲಿಸುತ್ತಿದ್ದನು. ಆಗ ಒಬ್ಬ ವಿದ್ಯಾರ್ಥಿಯು ಚೇಷ್ಟೆಗಾಗಿ:— "ಗುರುಗಳೇ! ಅಗಸ್ತ್ಯ ಋಷಿಯು ಸಮುದ್ರಪ್ರಾಶನಮಾಡಿದನೆಂದು ಪುರಾಣಗಳು ಹೇಳುತ್ತಿರುವದು ನಿಜವೇ?" ಎಂದು ಕೇಳಿದನು. ಇದಕ್ಕೆ ಪಂಡಿತನು ಒಳ್ಳೇ ಆಢ್ಯತೆಯಿಂದ:— "ಓಹೋ! ನಿಜವೇಕಿರಬಾರದು? ಹಾಗೆ ಮಾಡುವದು ಶಕ್ಯವಿದೆ; ಇಷ್ಟೇಕೆ ನಾನೇ ನಿಮಗೆ ಸಮುದ್ರವನ್ನು ಕುಡಿದು ತೋರಿಸುವೆನು; ಹಾಗೆ ನನ್ನಿಂದ ಮಾಡುವದಾಗದಿದ್ದರೆ ನಿಮಗೆ ನಾನು ಸಾವಿರ ಮೋಹರುಗಳನ್ನು ಕೊಡುವೆನು;" ಎಂದು ಉತ್ತರ ಕೊಟ್ಟನು. ಮೊದಲೇನೋ ಪಂಡಿತನು ಬಡಬಡಿಸಿಬಿಟ್ಟನು; ಮುಂದೆ ಅವನು ಎಚ್ಚರಾದನು; ಆಗದ ಕೆಲಸಕ್ಕಾಗಿ ತಾನು ಶಪಥವನ್ನು ಸ್ವೀಕರಿಸಿದ್ದು ಹುಚ್ಚುತನವೆಂದು ಅವನಿಗೆ ಹೊಳೆಯಹತ್ತಿತು. ಮುಂದೆ ಅವನು ಕಾಲಿದಾಸನ ಕಡೆಗೆ ಹೋಗಿ ಈ ಎಲ್ಲ ನಡೆದ ವರ್ತಮಾನವನ್ನು ಅವನಿಗೆ ತಿಳಿಸಿ, ನನ್ನನ್ನು ಈ ಸಂಕಟದಿಂದ ಹೇಗಾದರೂ ಪಾರುಮಾಡೆಂದು ಪರಿಪರಿಯಿಂದ ಅವನಿಗೆ ಬೇಡಿಕೊಂಡನು. ಪಂಡಿತನ ಹುಚ್ಚುತನಕ್ಕೆ ಕಾಲಿದಾಸನು ದಯೆಗೊಂಡನು. ಅವನಿಗೆ ಸಮುದ್ರಪಾನದ ವಿಷಯದಲ್ಲಿ ಸಹಾಯ ಮಾಡುವೆನೆಂದು ಹೇಳಿದನು. ಮರುದಿನ ವಿದ್ಯಾರ್ಥಿಗಳೂ ಪಂಡಿತನೂ ಕಾಲಿದಾಸನೂ ಎಲ್ಲರೂ ಸಮುದ್ರದ ದಂಡೆಗೆ ಹೋದರು. ಕಾಲಿದಾಸನ ಹೇಳಿಕೆಯಂತೆ ಪಂಡಿತನು ಅನೇಕ ತಂಬಿಗೆಗಳನ್ನು ತೆಗೆದುಕೊಂಡು ಬಂದಿದ್ದನು. ಇವನ್ನು ನೋಡಿದ ಜನರೆಲ್ಲ ಪಂಡಿತನ ಹುಚ್ಚುತನಕ್ಕೆ ಅಚ್ಚರಿಗೊಂಡು ಮುಂದಾಗುವವನ್ನು ನೋಡಲು ಉತ್ಕಂಠೆಯುಳ್ಳವರಾಗಿ ಸಮುದ್ರದ ಮೇಲೆ ನೆರೆದಿದ್ದರು. ಮುಂದೆ ಮಾಡತಕ್ಕದ್ದೆಲ್ಲವನ್ನು ಕಾಲಿದಾಸನು ಪಂಡಿತನಿಗೆ ಮೊದಲೇ ಹೇಳಿದ್ದನು. ಅದರಂತೆ ಯಾರೊಡನೆ ಜಿದ್ದು ಕಟ್ಟಿದ್ದನೋ ಆ ವಿದ್ಯಾರ್ಥಿಯನ್ನು ಕುರಿತು ಪಂಡಿತನು:— "ಶಿಷ್ಯನೇ! ನೋಡು! ಸಮುದ್ರದ ನೀರೆಲ್ಲವನ್ನು ಕುಡಿಯಲು ನಾನಂತೂ ಸಿದ್ಧನಿದ್ದೇನೆ, ಆದರೆ ನೂರಾರು ನದಿಗಳು ಭರದಿಂದ ಸಾಗಿಬಂದು ಈ ಸಮುದ್ರಕ್ಕೆ ಕೂಡುತ್ತಿವೆಯಲ್ಲ; ಇದಕ್ಕೇನು ಗತಿ; ನಾನು ಸಮುದ್ರದ ನೀರನ್ನು ಮಾತ್ರ ಕುಡಿಯುವೆನೆಂದು ಹೇಳಿರುವೆನು; ನದಿಗಳ ನೀರನ್ನು ಅಲ್ಲ;. ಆ ನದಿಗಳು ಸಮುದ್ರಕ್ಕೆ ಸೇರದಂತೆ ಮಾಡುವದು ನಿನ್ನಿಂದ ಸಾಧ್ಯವಿದ್ದರೆ ಹೇಳು," ಎಂದು ಗಂಭೀರವಾಗಿ ಮಾತಾಡಿದನು. ಇದನ್ನು ಕೇಳಿ ಪಂಡಿತನ ಚಾತುರ್ಯಕ್ಕೆ ಸರ್ವರೂ ಅವನನ್ನು ಹೊಗಳಿದರು. ಶಿಷ್ಯನಂತೂ ನಿರುತ್ತರನೇ ಆದನು.

ಸಾರಾಂಶ:— ಸಮಯಸೂಚಕತೆಯು ಮನುಷ್ಯನನ್ನು ದೊಡ್ಡ ದೊಡ್ಡ ಎಡರು ಗಳೊಳಗಿಂದ ಕಡೆಗಾಣಿಸುತ್ತದೆ.

———————

## ೨೩೧ ಎತ್ತೂ ಟಗರೂ.



ಒಂದು ಎತ್ತನ್ನು ಸಿಂಹವು ಬೆನ್ನಟ್ಟಿತ್ತು. ಅದರ ಕೈಯಲ್ಲಿಂದ ಪಾರಾಗಿ ಜೀವ ಉಳಿಸಿಕೊಳ್ಳಲು ಎತ್ತು ಪಲಾಯನ ಮಾಡಿತು. ಅಷ್ಟರಲ್ಲಿ ಅದಕ್ಕೊಂದು ಗುಹೆಯು ಎದುರಿನಲ್ಲಿ ಕಾಣಿಸಿತು. ಅದರಲ್ಲಿ ಸೇರಿ ಮರೆಯಾಗಬೇಕೆಂದು ಎತ್ತು ಧಾವಿಸಿ ಹೋಗುತ್ತಿರುವಾಗ ಒಳಗಿಂದ ಒಂದು ಟಗರು ಬಂದು ಬಾಗಿಲಲ್ಲಿಯೇ ತಡೆಯಿತು. ತನ್ನ ಮನೆಯಲ್ಲಿ ಅದಕ್ಕೆ ಸೇರಗೊಡುವದಿಲ್ಲೆಂದಿತು. ಆಗ ಎತ್ತು ಬಲು ವಿನಯ ದಿಂದ:— "ಎಲೋ! ದಯಮಾಡಿ ಸಿಂಹದ ದವಡೆಯಲ್ಲಿಂದ ನನ್ನನ್ನು ಬಿಡಿಸಿಕೋ! ಸಂಕಟದಲ್ಲಿದ್ದವರಿಗೆ ಆಶ್ರಯ ಕೊಡುವದು ಗೃಹಸ್ಥನ ಲಕ್ಷಣವು;" ಎಂದು ನುಡಿ ಯಿತು. ಆದರೆ ಟಗರಿಗೆ ದಯೆಯುಂಟಾಗಲಿಲ್ಲ. ಮತ್ತೆ ಎತ್ತಿನ ಮೈ ಮೇಲೆ ಏರಿ ಹೋಗಹತ್ತಿತು. ಆಗ ಎತ್ತು:— "ಎಲೋ! ಏನು ಮಾಡಲಿ! ಸಿಂಹವು ನನ್ನನ್ನು ಬೆನ್ನಟ್ಟಿದೆ! ಇಲ್ಲವಾದರೆ ನನ್ನ ನಿನ್ನ ನಡುವೆ ಮಹದಂತರವಿದೆಯೆಂದು ನಿನ್ನ ನಿದ

ರ್ಶನಕ್ಕೆ ಈಗಲೇ ನಾನು ತಂದುಕೊಡುತ್ತಿದ್ದೆನು; ಉಪಾಯವಿಲ್ಲ; ಸಂಕಟಕ್ಕೆ ಸಿಲುಕಿ ಅಸಹಾಯನಾಗಿರುವೆನು; " ಎಂದು ಮಿಡುಕುತ್ತ ನುಡಿಯಿತು.

ಸಾರಾಂಶ:— ಸಂಕಟಕ್ಕೆ ಸಿಲುಕಿದವನಿಗೆ ಸಹಾಯ ಮಾಡದಿರುವದು ಮನುಷ್ಯನ ಮನುಷ್ಯತ್ವಕ್ಕೆ ಕುಂದು ತರುವಂತಹದು. ಸಹಾಯ ಮಾಡದೆ ಪ್ರತಿಯಾಗಿ ಆ ಸಂಕಟದವನನ್ನೇ ಸೆಣಸಲುಪಕ್ರಮಿಸುವದಂತೂ ಪಶುತ್ವಕ್ಕಿಂತಲೂ ಕಡೆಯಾದದ್ದು.

———————

### ೨೩೨ ಮೊಲವೂ ನಾಯಿಯೂ.

ಒಂದು ನಾಯಿಯು ಒಂದು ಮೊಲದ ಬೆನ್ನಟ್ಟಿತು. ನಾಯಿಗೆ ಆಗ ಹಸಿವೆಯಾಗಿದ್ದಿಲ್ಲ. ಆದ್ದರಿಂದ ಮೊಲವು ಕೈಗೆ ಸಿಕ್ಕಿದ್ದರೂ ಅದು ಒಮ್ಮೆಲೇ ಅದನ್ನು ಹರಿದು ತಿನ್ನಲಿಲ್ಲ. ಒಮ್ಮೆ ಮೊಲಕ್ಕೆ ಕಚ್ಚಬೇಕು; ಮತ್ತೊಮ್ಮೆ ಅದರ ಮೈಯನ್ನು ನೆಕ್ಕಬೇಕು; ಹೀಗೆ ಅದು ಕ್ರಮವನ್ನು ನಡಿಸಿತು. ಆಗ ಮೊಲವು:— " ಎಲೋ! ನೀನು ನಡಿಸಿರುವಿಯೇನು? ನೀನೇನು ಮಿತ್ರನೋ ಶತ್ರುವೋ ತಿಳಿಯದಾಗಿದೆಯಲ್ಲ; ಮಿತ್ರನಾಗಿದ್ದರೆ ನನ್ನನ್ನು ಕಚ್ಚುತ್ತಿರಲಿಲ್ಲ; ಶತ್ರುವಾಗಿದ್ದರೆ ನನ್ನ ಮೈಯನ್ನು ನೆಕ್ಕುತ್ತಿದ್ದಿಲ್ಲ; " ಎಂದು ನಾಯಿಗೆ ಮಾತಾಡಿತು.

ಸಾರಾಂಶ:— ಶತ್ರುವೋ ಮಿತ್ರನೋ ತಿಳಿಯದಾಗಿರುವ ಕಾಲಕ್ಕೆ ಯಾವನೊಬ್ಬನ ಸಂಗಡ ಹೇಗೆ ನಡೆದುಕೊಳ್ಳಬೇಕೆಂಬದು ತಿಳಿಯುವದು ಬಲು ಕಠಿಣ.

———————

### ೨೩೩:— ಖಂಡೇರಾಯನೂ ಬೃಹಸ್ಪತಿಯೂ.

ಒಂದು ದಿನ ಖಂಡೇರಾಯನು ಬೀದಿಯಿಂದ ಸಾಗಿರಲು ಅವಗೊಂದು ವಿಲಕ್ಷಣ ಪ್ರಾಣಿಯ ದರ್ಶನವಾಯಿತು. ಆಗ ಆ ಪ್ರಾಣಿಯು ತನ್ನ ಕೋಡುಗಳನ್ನು ಮುಂದೆ ಮಾಡಿಕೊಂಡು ಈ ಖಂಡೇರಾಯನ ಮೇಲೆ ಧಾವಿಸಿ ಬಂದಿತು. ಆದರೆ ಖಂಡೇರಾಯನಿಗೆ ಅದರ ಗಣನೆಯೇ! ಕೈಯಲ್ಲಿರುವ ಬಾರಿಕೋಲಿನಿಂದ ಅವನು ಆ ಪ್ರಾಣಿಯನ್ನು ಹೊಡೆಯಲಾರಂಭಿಸಿದನು. ಆಗ ಆ ಹೊಡೆತಗಳಿಂದ ಆ ಪ್ರಾಣಿಯ ಶರೀರವು ಮೊದಲಿಗಿಂತ ಮೂರುಮಡಿಯಾಗಿ ಬೆಳೆಯಿತು. ಹೊಡೆತಗಳಂತೂ ಮೇಲೆ ಮೇಲೆ ಬೀಳುತ್ತಲೇ ಇದ್ದವು. ಆದರೆ ಹೊಡೆಹೊಡೆದಂತೆ ಅದರ ಶರೀರವು ಬೆಳೆದು ಕಡೆಗೆ ಅದು ಬೀದಿಯಗಲಕ್ಕೂ ಬೆಳೆಯಿತು. ಇದನ್ನು ಕಂಡು ಖಂಡೇರಾಯನಿಗೆ ಆಶ್ಚರ್ಯವಾಯಿತು. ಇಷ್ಟರಲ್ಲಿ ಅವನಿಗೆ ಆಗ ಬೃಹಸ್ಪತಿಯ ಭೆಟ್ಟಿಯಾಯಿತು. ಆಗ ಆ ಬೃಹಸ್ಪತಿಯು:— " ಖಂಡೇರಾಯ! ಈ ಪ್ರಾಣಿಯನ್ನು ಹೊಡೆಯಬೇಡ ಬಿಟ್ಟುಬಿಡು; " ಇದರ ಹೆಸರು ಸ್ಪರ್ಧಾ ಹೊಡೆಹೊಡೆದಂತೆ ಅದು ಬೆಳೆಯುತ್ತಲೇ ಹೋಗುವದು; ಆದ್ದ

ರಿಂದ ನೀನು ಅದಕ್ಕೆ ತನ್ನಷ್ಟಕ್ಕೆ ತಾನೇ ಹೋಗಕೊಟ್ಟರೆ ಅದು ಕ್ಷೀಣವಾಗಿಯೇ ಹೋಗುತ್ತದೆ; " ಎಂದು ಉಪದೇಶ ಮಾಡಿದನು.

ಸಾರಾಂಶ:— ಸ್ಪರ್ಧೆಯು ಮಾಡಮಾಡುತ್ತ ಬೆಳೆಯುತ್ತಲೇ ಹೋಗುತ್ತದೆ; ಆದ್ದರಿಂದ ಮನುಷ್ಯನು ಹಾಗೆ ಮಾಡದಿರುವದು ಮೇಲು.

———————

## ೨೩೪:— ಬೆಕ್ಕೂ ಇಲಿಯೂ.

ಒಂದು ಮನೆಯಲ್ಲಿ ಇಲಿಗಳು ಬಹಳವಾಗಿದ್ದವು. ಆಗ ಅಲ್ಲಿಗೊಂದು ಬೆಕ್ಕು ಬಂದಿತು; ಅಲ್ಲಿ ಅದಕ್ಕೆ ಹಬ್ಬವೇ ಆಯಿತು. ಅದು ಅನೇಕ ಇಲಿಗಳನ್ನು ತಿಂದು ತೇಗಿತು; ಆ ಮೇಲೆ ಉಳಿದ ಇಲಿಗಳೆಲ್ಲ ಒಂದೆಡೆಗೆ ಕೂಡಿ ಯಾರೂ ಕೆಳಗೆ ಇಳಿಯಬಾರದೆಂದು ನಿಶ್ಚಯಮಾಡಿದವು. ಈಗ ಮಾತ್ರ ಆ ಕೊಬ್ಬಿದ ಬೆಕ್ಕಿಗೆ ಕೊರಗುವ ವೇಳೆ ಬಂದಿತು. ಹಸಿವಿನಿಂದ ಅದು ಬಲು ಕಷ್ಟಗೊಳ್ಳಹತ್ತಿತು. ಆಗ ಅದು ತನ್ನ ಎರಡೂ ಕಾಲುಗಳನ್ನು ಗೂಟಕ್ಕೆ ಸಿಲುಕಿಸಿ ಸತ್ತಂತೆ ಅದಕ್ಕೆ ನೇತಾಡಹತ್ತಿತು. ಇದನ್ನು ನೋಡಿಯಾದರೂ ಇಲಿಗಳು ಕೆಳಗಿಳಿಯಬಹುದೆಂದು ಅದರ ಯೋಚನೆಯು. ಆದರೆ ಈ ಬೆಕ್ಕಿನ ಸ್ಥಿತಿಯನ್ನು ಕಂಡು ಒಂದು ಮುದಿ ಇಲಿಯು ಮೇಲಿಂದಲೇ:— " ಓಹೋ! ನೇತಾಡು! ಗೆಳೆಯಾ! ಬೇಕಾದದ್ದು



ಮಾಡು! ನಿನ್ನ ಹೊಟ್ಟೆಯು ಹರಿದು ಮಾಂಸದ ಕರಣೆಗಳು ಕತ್ತರಿಸುತ್ತಿರುವ ಸ್ಥಿ

ಯಲ್ಲಿ ನೀನಿದ್ದರೂ ನಿನ್ನ ಮೇಲೆ ನಾವು ವಿಶ್ವಾಸವಿಡಲಾರೆವು;" ಎಂದು ಸ್ಪಷ್ಟವಾಗಿ ಹೇಳಿತು.

ಸಾರಾಂಶ:— ಘಾತಕ, ಕಪಟಿ, ಠಕ್ಕತನದವರ ಮಾತನ್ನು ಮನ್ನಿಸುವವರು ಬಹುತರವಾಗಿ ಸಂಕಟಕ್ಕೆ ಸಿಲುಕೇ ಬಿಡುವರು. ಆದರೆ ಇಂಥವರ ಸ್ವರೂಪವನ್ನು ಒಮ್ಮೆ ಅರಿತವರು ಮಾತ್ರ ಅವರ ಮೇಲೆ ಮುಂದೆ ಎಂದೂ ವಿಶ್ವಾಸವಿಡುದಿಲ್ಲ.

---

## ೩೩೫:— ಕತ್ತೆಯೂ ನಾಯಿಯೂ.

ಒಮ್ಮೆ ಒಂದು ಕತ್ತೆಯು ಮನದಲ್ಲಿ ವಿಚಾರಮಾಡಿತು. "ನನ್ನ ಯಜಮಾನನಿಗೆ ನಾಯಿ ಗುಬ್ಬಿಗಳ ಮೇಲೆ ಬಲು ಜೀವ. ಆದ್ದರಿಂದ ನಾನೂ ಆ ನಾಯಿ ಗುಬ್ಬಿಗಳಂತೆ ವರ್ತಿಸ ಹತ್ತಿದರೆ, ಬಾಲವನ್ನಾಡಿಸುತ್ತ ಒಡೆಯನ ತೊಡೆಯ ಮೇಲೆ ಹತ್ತಿ ಕುಳಿತರೆ ನನ್ನನ್ನೂ ಅವನು ಪ್ರೀತಿಸಬಹುದು." ಹೀಗೆ ಅದು ಯೋಚಿಸುತ್ತಿರುವಾಗಲೇ ಅದರ ಒಡೆಯನು ಹೊರಗಿನಿಂದ ಅದೇ ಬಂದು ಕಟ್ಟೆಯ ಮೇಲೆ ಕುಳಿತನು. ಅವನನ್ನು ಕಂಡದ್ದೇ ಕತ್ತೆಯು ಅವನ ಎದುರು ಹೋಗಿ ಅತ್ತಿತ್ತ ಜಿಗಿದಾಡಹತ್ತಿತು. ಆ ಮೇಲೆ ದೊಡ್ಡದಾಗಿ ಕೂಗಿತು. ಈ ಪ್ರಕಾರವನ್ನು ಕಂಡು ಆ ಯಜಮಾನನಿಗೆ



ಒಳ್ಳೇ ಆಶ್ಚರ್ಯವಾಯಿತು. ಆಗವನು ಬಿದ್ದು ಬಿದ್ದು ನಗಹತ್ತಿದನು. ಆ ಮೇಲೆ ಕತ್ತೆಯು ಎರಡೇ ಹಿಂಗಾಲುಗಳ ಮೇಲೆ ನಿಂತು ಮುಂಗಾಲೆರಡನ್ನೂ ಒಡೆಯನ ಎದೆಯ ಮೇಲೆ ಬಲು ಪ್ರೇಮದಿಂದ ಇಟ್ಟಿತು. ಹೀಗೆ ಮಾಡಿ ಅವನ ತೊಡೆಯ ಮೇಲೆ ಆ ಕತ್ತೆಯು ಕೂಡಬೇಕೆಂಬುವಷ್ಟರಲ್ಲಿ ಆ ಒಡೆಯನು ಗಟ್ಟಿಯಾಗಿ ಚೀರಹತ್ತಿ

ದನು. ಇದನ್ನು ಕೇಳಿ ಒಬ್ಬ ಆಳುಮಗನು ಕೈಯಲ್ಲಿ ಕೋಲು ತೆಗೆದುಕೊಂಡು ಹೊರಗೆ ಬಂದವನೇ ಬಡಿಗೆಯಿಂದ ಆ ಕತ್ತೆಯ ಬೆನ್ನನ್ನು ಬಲವಾಗಿ ಬಡಿದನು.

ಸಾರಾಂಶ:— ದೇವರು ಇಟ್ಟ ಸ್ಥಿತಿಯಲ್ಲಿ ರಬೇಕಲ್ಲದೆ ಅದನ್ನು ಳಿದು ಹೆಚ್ಚಿನ ದನ್ನು ಬಯಸಿದರೆ ಅದು ವಿಪರೀತವಾಗಿ ಪರಿಣಮಿಸುವದು.

---

## ೨೩೬:— ತೋಳವೂ ಕುರುಬರೂ.

ಒಂದು ಮನೆಯಲ್ಲಿ ಕೆಲವು ಕುರುಬರು ಕುರಿಯೊಂದನ್ನು ಕೊಂದು ಆನಂದದಿಂದ ಭೋಜನವನ್ನು ನಡೆಸಿದ್ದರು. ಆಗ ಒಂದು ತೋಳವು ಹೊರಗಿನಿಂದ ಈ ಎಲ್ಲ ಕೃತ್ಯವನ್ನು ಹಣಿಕಿಹಾಕಿ ನೋಡಿತು. ಆಗ ತನ್ನಲ್ಲಿ ತಾನು:— "ಅಬ್ಬ! ನೋಡಿದಿರಾ! ಇವರಂತೆ ನಾನು ಕುರಿಯನ್ನು ಮುರಿದು ತಿನ್ನುತ್ತಿದ್ದರೆ ಇವರು ಕೋಲಾಹಲವನ್ನೇ ಎಬ್ಬಿಸುತ್ತಿದ್ದರು;" ಎಂದುಕೊಂಡಿತು.



ತಾತ್ಪರ್ಯ:— ಏನೊಂದು ಕಾರ್ಯವನ್ನು ಹಿಂದು ಮುಂದು ನೋಡದೇ ನಾವು ಮಾತ್ರ ಮಾಡುತ್ತೇವೆ; ಅದೇ ಕಾರ್ಯವನ್ನು ಅನ್ಯರು ಮಾಡಿದರೆ ಮಾತ್ರ ನಾವು ಅವರಿಗೆ ಹೆಸರಿಡುತೇವೆ. ಹೀಗಿರುವದು ಸಾಮಾನ್ಯ ಜನರಿಗೆ ಸ್ವಾಭಾವಿಕವಾದದ್ದು. ಆದರೆ ನಾವು ಪರರ ದೋಷಗಳನ್ನು ಎಣಿಸುತ್ತಿರುವಂತೆ

ನಮ್ಮಲ್ಲಿರುವ ದೋಷಗಳನ್ನೂ ಎಣಿಸುತ್ತಿರಬೇಕು. ಅಂದರೆ ನಾಲ್ವರಲ್ಲಿ ನಾವು ಮೇಲ್ಮೆಯನ್ನು ಪಡೆಯಬಹುದು. ಇಲ್ಲವಾದರೆ ಬರಿ ನಿಂದಕರಾಗಿ ನಾವು ಗಳಿಸುವದಾದರೂ ಏನು ?

---

೨೩೭:— ನಾಯಿಯೂ ಹೆಣ್ಣು ಹಂಸವೂ.

ಒಂದು ಕೆರೆಯ ದಂಡೆಯ ಮೇಲೆ ಒಂದು ಹೆಣ್ಣು ಹಂಸವು ತನ್ನ ಮರಿಗಳೊಡನೆ ಇರುತ್ತಿತ್ತು. ಆ ಕೆರೆಯ ಒಡೆತನವೆಲ್ಲ ತನ್ನದೆಂದೇ ತಿಳಿದು ಆ ಹಂಸವು ಆ ಕೆರೆಗೆ ಬೇರೆ ಯಾವ ಪ್ರಾಣಿಗಳನ್ನೂ ಬರಗೊಡುತ್ತಿದ್ದಿಲ್ಲ. "ಈ ಕೆರೆಯು ನನ್ನದು; ನನ್ನ ಚಂಚುವು ಚನ್ನಾಗಿರುವವರೆಗೆ ಈ ಕೆರೆಯ ನೀರನ್ನು ಮತ್ತ್ಯಾವ ಪ್ರಾಣಿಗಳಿಗೂ ನಾನು ಕುಡಿಯಗೊಡಲಿಕ್ಕಿಲ್ಲ;" ಎಂದು ಅದರ ಜಂಭವು. ನೀರುಗೋಳಿ, ಕೋಳಿ, ಹಂದಿ, ಬೆಕ್ಕು ಮುಂತಾದ ಯಾವ ಪ್ರಾಣಿಗಳಾದರೂ ಆ ಕೆರೆಯ ಕಡೆಗೆ ಹೋದರೆ ಅವನ್ನು ಆ ಹಂಸವು ದೊಡ್ಡ ಆವೇಶದಿಂದ ಅವುಗಳ ಮೇಲೆ ಏರಿ ಹೋಗಿ ಅವನ್ನು ಓಡಿಸಿಬಿಡುತ್ತಿತ್ತು. ಒಂದು ದಿನ ಒಂದು ದೊಡ್ಡ ಬೇಟೆಯ ನಾಯಿಯು ಅಡವಿಯಲ್ಲಿ ತಿರುಗಿ ಬೇಸತ್ತು ಆ ಕೆರೆಯ ಕಡೆಗೆ ನೀರು ಕುಡಿಯಲು ಹೋಯಿತು. ಅದನ್ನು ಕಂಡ ಕೂಡಲೇ ಆ ಹೆಣ್ಣು ಹಂಸವು ವಾಡಿಕೆಯಂತೆ ಒಳ್ಳೇ ಭರದಿಂದ ಅದರ ಮೇಲೆ ಏರಿ ಹೋಯಿತು. ಮತ್ತು ತನ್ನ ಚಂಚುವಿನಿಂದ ಅದು ಚುಚ್ಚಹತ್ತಿತು. ಆಗ ಆ ಹಂಸದ ಈ ಕೃತ್ಯವನ್ನು ನೋಡಿ ನಾಯಿಗೆ ಬಲು ಕೋಪ ಹುಟ್ಟಿತು. ಹಂಸಕ್ಕೆ ತಕ್ಕ ಶಾಸನ ಮಾಡಬೇಕೆಂದು ನಾಯಿಯು ಮೊದಲು ಮನಮಾಡಿತು; ಆದರೆ ಕೊಂಚ ಬಂದ ಕೋಪವನ್ನು ತಡೆದು ಆ ಹಂಸಕ್ಕೆ:— 'ನಿನ್ನಂಥ ಮೂರ್ಖನಿಗೆ ಧಿಕ್ಕಾರವಿರಲಿ! ಅನ್ಯರೊಡನೆ ಕಾದಲು ನಿನ್ನಲ್ಲಿ ಕೈದುಗಳಿಲ್ಲ; ಇದಲ್ಲದೆ ಕಾದುವ ಪದ್ಧತಿಯೂ ನಿನಗೆ ಗೊತ್ತಿಲ್ಲ; ಅಲ್ಲದೆ ಕಾದುವ ಸಾಮರ್ಥ್ಯವೂ ನಿನ್ನಲ್ಲಿಲ್ಲ; ಅಂದಮೇಲೆ ಹೀಗೆ ಅಲ್ಲದ ಕೆಲಸಕ್ಕೆ ಕೈ ಹಾಕಿ ಗಲ್ಲ ಗಲ್ಲ ಬಡಿಸಿಕೊಳ್ಳಬೇಡ; ನಡೆ ಹೋಗು;" ಎಂದೆನ್ನುತ್ತ ಅದನ್ನು ಲೆಕ್ಕಿಸದೆ ಯಥೇಚ್ಛವಾಗಿ ನೀರು ಕುಡಿದು ತನ್ನ ಹಾದೀ ಹಿಡಿಯಿತು.

ಸಾರಾಂಶ:— ಪ್ರತಿಯೊಬ್ಬನು ಪರರ ಮೇಲೆ ನಡಿಸುವ ಅಧಿಕಾರಕ್ಕೆ ಒಂದು ಸೀಮೆಯಿದೆ; ಅದನ್ನು ದಾಟಿ ಸಿಕ್ಕಹಾಗೆ ಸಿಕ್ಕವರ ಮೇಲೆ ಅಧಿಕಾರ ನಡೆಸಹೋದರೆ ಅವನಿಗೆ ಶಾಸನವಾಗಿಯೇ ತೀರುವದು. ಆದ್ದರಿಂದ ಮನುಷ್ಯನು ಹಾಸಿಗೆಯಿದ್ದಷ್ಟು ಕಾಲುಚಾಚಬೇಕು.

---

೨೩೮:— ತೃಪ್ತಿಯಾಗದ ಕತ್ತೆಯು.

ಚಳಿಗಾಲದಲ್ಲಿ ಒಮ್ಮೆ ಒಂದು ಕತ್ತೆಗೆ ಬೈಲು ಹವೆ, ಒಣ ದಂಟು ಇವುಗಳ ಬದಲು ಸ್ವಲ್ಪ ಉಷ್ಣತೆ ಮತ್ತು ಹಸೀ ಹುಲ್ಲು ಸಿಕ್ಕುವದಾದರೆ ಚನ್ನಾಗುತ್ತದೆಂದು

ಮನಸ್ಸಿನಲ್ಲಿ ಬಂದಿತು. ಆ ಪ್ರಕಾರಕ್ಕೆ ಅದರಾಶೆಯು ಪೂರೈಸಿತು. ಆದರೆ ಅದರ ಇಚ್ಛೆಯು ಬೆಳೆಯಹತ್ತಿತು; ಆದ್ದರಿಂದ ಅದಕ್ಕೆ ಚಳಿಗಾಲದಂತೆ ಬೇಸಿಗೆಯೂ ಬೇಸರವಾಗಹತ್ತಿತು. ಅದಕ್ಕೆ ಮಳೆಗಾಲವು ಈಗ ಬಂದರೆ ಒಳಿತಾಗುವದೆಂದೆನಿಸಹತ್ತಿತು. ಅಷ್ಟರಲ್ಲಿ ಮಳೆಗಾಲವೂ ಪ್ರಾಪ್ತವಾಯಿತು. ಆಗ ಚಳಿಗಾಲಕ್ಕೆ ಬೇಕಾಗುವ ಪದಾರ್ಥಗಳನ್ನು ಹೊತ್ತೊಯ್ಯುವ ಶ್ರಮೆಯು ಅದಕ್ಕೆ ಉಂಟಾಯಿತು. ಕಡೆಗೆ ಈಗ ಚಳಿಗಾಲವು ಬಂದರೆ ಒಳಿತೆಂದು ಅದು ಅನ್ನಹತ್ತಿತು.

ಸಾರಾಂಶ:— ಇಚ್ಛೆಯು ಫಲಿಸಿದಂತೆ ಅದು ಹೆಚ್ಚಾಗುತ್ತ ಹೋಗುತ್ತದೆ. ಕಡೆಗೂ ಅದಕ್ಕೆ ಶಾಂತತೆಯುಂಟಾಗುವದಿಲ್ಲ. ಹೋಮದಲ್ಲಿ ಹಾಕುವ ತುಪ್ಪದಿಂದ ಅಗ್ನಿಯು ಪ್ರಜ್ವಲಿಸುವಂತೆ ಇಚ್ಛೆಯ ಗತಿಯಾಗುತ್ತದೆ.

---

## ೨೩೯:— ಗೋದಲೆಯೊಳಗಿನ ನಾಯಿಯು.



ಒಂದು ನಾಯಿಯು ದನದ ದಡ್ಡಿಯಲ್ಲಿ ಹೊಕ್ಕು ಒಂದು ಗೋದಲೆಯೊಳಗೆ ಮಲಗಿಕೊಂಡಿತು. ಇಷ್ಟರಲ್ಲಿ ಅಲ್ಲಿಗೆ ಹಸಿದು ಹಂಬಲಿಸುತ್ತಿರುವ ಒಂದು

ಎತ್ತು ಬಂದಿತು. ಆದರೆ ಆ ಗೋದಲೆಯೊಳಗಿನ ನಾಯಿಯು ಅದಕ್ಕೆ ಮೇವು ತಿನಗೊಡದೆ ಅದನ್ನು ಕಂಡು ಬೊಗಳಹತ್ತಿತು. ಆಗ ಎತ್ತು ಧಿಃಕ್ಕಾರಪೂರ್ವಕವಾಗಿ ಆ ನಾಯಿಗೆ:— "ಎಲೋ! ಮೂರ್ಖ ಪ್ರಾಣಿಯೇ! ತಾನು ಉಣ್ಣದೆ ಪರರಿಗೆ ಇಕ್ಕದಂತಿರುವ ಈ ನಿನ್ನ ದುಷ್ಟಕೃತ್ಯಕ್ಕೆ ಏನನ್ನಬೇಕು; ಆದ್ದರಿಂದ ನಿನಗೆ ಶಾಶ್ವತವಾದ ಸಂಕಟವು ಪ್ರಾಪ್ತವಾಗಲಿ;" ಎಂದು ಶಪಿಸಿತು.

ಸಾರಾಂಶ:— ತನಗೆ ಉಪಯೋಗವಿಲ್ಲದ ಒಡವೆಯನ್ನು ಪರರಿಗೂ ಸೇವಿಸಗೊಡದಿರುವದು ನೀಚತನದ ಪರಮಾವಧಿಯು.

---

## ೨೪೦:— ಕುರಿಗಳೂ ಕಟಕನೂ.

ಪೂರ್ವದಲ್ಲಿ ಒಮ್ಮೆ ಒಂದು ಊರಲ್ಲಿಯ ಎಲ್ಲ ಕುರಿಗಳೂ ಸಭೆ ಸೇರಿಸಿ ಕಟಕನ ಕೈಯಲ್ಲಿ ತಾವು ಸಿಗದಿರುವದೆಂತೆಂದು ವಿಚಾರಮಾಡಿದವು. ಒಡೆಯನ ಕಣ್ಣುತಪ್ಪಿಸಿ ಅಡವಿಯಲ್ಲಿ ಓಡಿ ಹೋಗುವದೆಂದೂ ಸರ್ವಾನುಮತದಿಂದ ನಿಶ್ಚಯವಾಯಿತು. ಆ ದಿನವೇ ಓಡಿಹೋಗುವದೆಂದೂ ಗೊತ್ತು ಮಾಡಿದವು. ಆಗ ಅವುಗಳಲ್ಲಿಯ ಒಂದು ಮುದಿ ಕುರಿಯು ಎಲ್ಲ ಕುರಿಗಳಿಗೆ:— "ಅಯ್ಯಾ! ಎಲ್ಲಿ ಹೋದರೂ ನಮಗೆ ಸುಖವಿಲ್ಲ; ಅಡವಿಯಲ್ಲಿ ಹುಲಿಯು ಹಿಡತದ ಹೆದರಿಕೆ; ಮನೆಯಲ್ಲಿ ಯಜಮಾನನ ಕೊಯ್ತುತದ ಅಂಜಿಕೆ; ಆದರೆ ಹಿಂಸೆ ಪಡಿಸುತ್ತ ಹರಿದು ತಿನ್ನುವ ಹುಲಿಗಿಂತ ನೋವು ಮಾಡಗೊಡದಂತೆ ಒಮ್ಮೆಲೇ ಕೊಲ್ಲುವ ನಮ್ಮ ಯಜಮಾನನೇ ಮೇಲಲ್ಲವೇ?" ಎಂದು ಮಾತಾಡಿತು. ಇದನ್ನು ಕೇಳಿ ಎಲ್ಲ ಕುರಿಗಳೂ ತಮ್ಮ ಮೊದಲಿನ ನಿಶ್ಚಯವನ್ನು ಅಷ್ಟಕ್ಕೇ ನಿಲ್ಲಿಸಿಬಿಟ್ಟವು.

ತಾತ್ಪರ್ಯ:— ಎಲ್ಲಿ ಹೋದರೂ ದುಃಖವು ತಪ್ಪದಿರುವ ಸ್ಥಿತಿಯಿದ್ದಾಗ, ಸ್ವಲ್ಪ ದುಃಖವಾಗುವ ಸ್ಥಳವನ್ನೇ ನಾವು ಆಶ್ರಯಿಸುವದು ವಿಹಿತವು.

---

## ೨೪೧:— ಕುರಿಮರಿಯೂ ತೋಳವೂ.

ಒಂದು ಕುರಿಮರಿಯು ಹಂಚಿನ ಚಪ್ಪರದ ಮೇಲೆ ಏರಿ ನಿಂತಿತ್ತು. ಆಗ ಅದು ಕೆಳಗೆ ನಿಂತಿರುವ ಒಂದು ತೋಳಕ್ಕೆ ಮನಬಂದಂತೆ ಬೈಯಹತ್ತಿತು. ಇವನ್ನು ಕೇಳಿ ತೋಳವು ಕುರಿಮರಿಗೆ:— ಏ! ಉಡಾಳ ಮರಿಯೇ! ಮನಬಂದಂತೆ ಬೊಗಳ ಬೇಡ; ಮೇಲೆ ನಿಂತಿರುವೆ ಎಂದು ನಿನಗೆ ಹೆಮ್ಮೆಯೋ! ಆದರೆ ಈ ನಿನ್ನ ಬೈಗಳು ನಿನ್ನಿಂದ ಉಚ್ಚರಿತವಾಗುವದಿಲ್ಲ; ನೀ ನಿಂತಿರುವ ಹಂಚಿನ ಚಪ್ಪರದಿಂದ ಎಂದು ನಾನು ತಿಳಿಯುತ್ತೇನೆ," ಎಂದು ಅಸಮಾಧಾನದಿಂದ ನುಡಿಯಿತು.



ಸಾರಾಂಶ:— ಕೆಲ ನೀಚರು ತಮಗೆ ಶತ್ರುವಿನೊಡನೆ ಕೈಗೆ ಕೈ ಹತ್ತಿ ಕಾದುವ ಸಾಮರ್ಥ್ಯವಿಲ್ಲದ್ದರಿಂದ ಅವರ ಕೈಗೆ ಸಿಕ್ಕಾಗ ಮಾತ್ರ ಅತಿ ನಮ್ರರಾಗಿರುವರು. ಆದರೆ ಶತ್ರುವಿನ ಅಟೋಪವು ನಡೆಯುವಂತಹ ಆಶ್ರಯವನ್ನು ತಾವು ಹೊಂದಿರುವೆವೆಂದು ಅವರಿಗೆ ತಿಳಿದದ್ದಾದರೆ, ಅವರೇ ಆ ಶತ್ರುಗಳನ್ನು ಉಪಹಾಸ್ಯ ಮಾಡಹತ್ತುತ್ತಾರೆ.

## ೨೮೨:— ಇರಿವೆಯೂ ಹೊದಿಕೆಯೊಳಗಿನ ಹುಳವೂ.

ಒಂದು ದಿನ ಒಂದು ಇರಿವೆಯು ತನ್ನ ಭಕ್ಷ್ಯದ ಶೋಧನೆಯಲ್ಲಿರುವಾಗ, ತನ್ನ ಹೊದಿಕೆಯೊಳಗಿಂದ ಅದೇ ಹೊರಬಿದ್ದಿರುವ ಒಂದು ಹುಳವು ಅದರ ದೃಷ್ಟಿಗೆ ಬಿತ್ತು. ಇನ್ನೂ ಅದು ಮೆಲ್ಲನೇ ಕಾಲುಗಳನ್ನು ಅಲ್ಲಾಡಿಸುತ್ತಿತ್ತು. ಇದನ್ನು ನೋಡಿ ಇರಿವೆಯು ಆ ಹುಳಕ್ಕೆ:— " ಎಲೋ! ದುರ್ದೈವಿಯಾದ ಹುಳವೇ! ಪಾಪ! ನಿನ್ನ ಸ್ಥಿತಿಯು ಎಷ್ಟು ಶೋಚನೀಯವಾದದ್ದಿದೆಯಲ್ಲ; ನಾನು ಬೇಕಾದತ್ತ ತಿರುಗಾಡ ಬಲ್ಲೆನು; ನಿನಗೆ ಮಾತ್ರ ಸೆರೆಯಾಳಿನಂತೆ ಈ ಹೊದಿಕೆಯಲ್ಲಿ ಹಗಲೆಲ್ಲ ಹುದುಗಿ ಕೊಂಡಿರಬೇಕಾಗುತ್ತದೆ; ಅಂದಮೇಲೆ ನನ್ನ ನಿನ್ನ ಇರುವಿಕೆಯಲ್ಲಿ ಮಹದಂತರವಿದೆ ಯೆಂದೆನ್ನಲಿಕ್ಕೆ ಸಾಕು; " ಎಂದು ಜಂಭದ ಮಾತಾಡಿತು. ಆಗ ಆ ಹುಳವು ಏನನ್ನೂ ಮಾತಾಡಲಿಲ್ಲ. ಇರಿವೆಯೂ ಹೊರಟು ಹೋಯಿತು. ಮುಂದೆ ಬಹು ದಿವಸಗಳು ಗತಿಸಿದ ನಂತರ ಆ ಇರಿವೆಯು ಅದೇ ಸ್ಥಳಕ್ಕೆ ಮತ್ತೊಮ್ಮೆ ಬಂದಿತು. ಆಗ ಅಲ್ಲಿ ಅದಕ್ಕೆ ಆ ಹುಳದ ಹೊದಿಕೆಯು ಮಾತ್ರ ಕಾಣಿಸಿತು. ಒಳಗಿನ ಹುಳವು ಎಲ್ಲಿಯೋ ಹಾರಿಹೋಗಿತ್ತು. ಇದನ್ನು ನೋಡುತ್ತ ಅಲ್ಲಿಯೇ ತಿರುಗುತ್ತಿರುವಾಗಲೇ ಒಂದು ಸುಂದ ರವಾದ ಪಾತರಗಿತ್ತಿಯು ತನ್ನ ಮೇಲೆ ಗಾಳಿಯನ್ನು ಹಾಕುತ್ತಿರುವಂತೆ ಅದಕ್ಕೆ ಕಾಣಿ ಸಿತು. ಆ ಪಾತರಗಿತ್ತಿಯು ಇರಿವೆಗೆ:— ಏನಕ್ಕಾ! ಹಿಂದಕ್ಕೊಮ್ಮೆ ನೀನು ಯಾರ ಸಲು ವಾಗಿಯೋ ಸೆರೆಯಾಳೆಂದು ಕನಿಕರಪಟ್ಟಿದ್ದೆಯಲ್ಲವೇ? ಇಬ್ಬರ ಸ್ಥಿತಿಯಲ್ಲಿ ಭೂಮ್ಯಾ ಕಾಶಗಳಷ್ಟು ಅಂತರವಿದೆಯೆಂದು ಜಂಭಕೊಚ್ಚಿದ್ದೆಯಲ್ಲವೇ? ಆ ಹೊದಿಕೆಯಲ್ಲಿಯ ಹುಳವೇ ನಾನು ನೋಡು; ಇದನ್ನು ಚನ್ನಾಗಿ ನೆನಪಿನಲ್ಲಿಡು: ನನಗೆ ಬೇಕಾದತ್ತ ತಿರುಗುವ ಸಾಮರ್ಥ್ಯವಿದೆಯೆಂದು ನೀನು ಮತ್ತೊಮ್ಮೆ ಜಂಭಕೊಚ್ಚುತ್ತಿದ್ದರೆ ಕೊಚ್ಚು; ನಾನು ಇದೇ ಈಗ ಕೊಂಚ ಆಕಾಶದಲ್ಲಿ ಹಾರಾಡಿ ಬರುವೆನು; ಹೀಗೆಂದದ್ದೇ ಭುರ್ರನೇ ಒಮ್ಮೆ ಹಾರಿದ್ದೇ ಅದು ದೂರ ಆಕಾಶದಲ್ಲಿ ಹಾರಿಹೋಯಿತು.

ತಾತ್ಪರ್ಯ:— ಒಮ್ಮೆ ಸಂಕಟಕ್ಕೆ ಸಿಲುಕಿದ ಮನುಷ್ಯನು ಪುನಃ ಸುಸ್ಥಿತಿಗೆ ಬರುವದಿಲ್ಲೆಂದು ಬಗೆದು ಅವನ ಆ ಸ್ಥಿತಿಯ ಉಪಹಾಸ ಮಾಡುತ್ತ ಅವನೆದುರಿ ನಲ್ಲಿ ತನ್ನ ವೈಭವವನ್ನು ಮೆರೆಸುತ್ತಿರುವದು ಬಲು ಮೂರ್ಖತನವು.

## ೨೪೩:— ಕತ್ತೆಯೂ ಅದರ ನೆರಳೂ.

ಒಬ್ಬಾನೊಬ್ಬ ಪ್ರವಾಸಿಯು ಒಂದು ಕತ್ತೆಯನ್ನು ಬಾಡಿಗೆಯಿಂದ ತೆಗೆದುಕೊಂಡನು. ಅದರ ಮೇಲೆ ಕುಳಿತು ದೇಶಾಂತರಕ್ಕೆ ಹೋಗಬೇಕೆಂದು ಅವನ ಬಯಕೆ; ಬಿಸಿಲುಗಾಲವಾದ್ದರಿಂದ ಹೋಗುತ್ತಿರುವಾಗ ಬಿಸಿಲು ಬಲವಾಗಿ ತಗಲ ಹತ್ತಿತು. ಆದ್ದರಿಂದ ಕತ್ತೆಯ ಮೇಲಿಂದ ಆ ಗೃಹಸ್ಥನು ಇಳಿದನು; ಮತ್ತು ಬಿಸಿಲನ್ನು ತಪ್ಪಿಸಲು ಆ ಕತ್ತೆಯ ಒಡಲದಲ್ಲಿಯೇ ನೆರಳಿನಲ್ಲಿ ಕೂಡಲನುವಾದನು. ಆಗ ಕತ್ತೆಯ ಯಜಮಾನನು ಅವನಿಗೆ ಹಾಗೆ ಮಾಡಗೊಡಲಿಲ್ಲ. ಅವರಿಬ್ಬರಲ್ಲಿ ಜಗಳವು ನಡೆಯಿತು. ಕತ್ತೆಯು ಮಾತ್ರ ಬಾಡಿಗೆಯದೇ ಹೊರತು ಅದರ ನೆರಳಲ್ಲೀದು ಬಾಡಿಗೆಯವನ ನ್ಯಾಯ; ಕತ್ತೆಯೊಡನೆ ಅದರ ನೆರಳನ್ನೂ ನಾನು ಬಾಡಿಗೆಯಿಂದ ಹಿಡಿದಿದ್ದೇನೆಂದು ಪ್ರವಾಸಿಯ ಜಗಳ; ಹೀಗೆಯೇ ಇಬ್ಬರೂ ವಾದಿಸುತ್ತ ವಾದಿಸುತ್ತ ಕೈಗೆ ಕೈಹತ್ತಿತು. ಈ ಜಗಳಕ್ಕೆ ಕತ್ತೆಯು ಬೆದರಿ ಎತ್ತಲೋ ಓಡಿಹೋಯಿತು. ಇದನ್ನು ನೋಡಿ, ಅವರಿಬ್ಬರಿಗೂ ಬಲು ವ್ಯಸನವಾಯಿತು.



ಸಾರಾಂಶ:— ಈ ಜಗದಲ್ಲಿ ಜನರು ನೆರಳಿಗೆ ಬಡಿದಾಡಿ ಮೂಲತತ್ವವನ್ನೇ ಕಳೆದುಕೊಳ್ಳುತ್ತಾರೆ.

## ೨೪೪:— ದನಕಾಯುವವನೂ ಕುರಿಗಳೂ.

ಒಬ್ಬ ದನಕಾಯುವ ಹುಡುಗನು ಕೆಲವು ದನಕರುಗಳನ್ನೂ ಮತ್ತೂ ಕುರಿಗಳನ್ನೂ ಮೇಯಿಸುತ್ತಿದ್ದನು. ಸಂಜೆಯಾದದ್ದರಿಂದ ಅವನು ಎಲ್ಲ ಪಶುಗಳನ್ನೂ ಹೊಡೆದುಕೊಂಡು ಮನೆಯ ಹಾದೀ ಹಿಡಿದನು. ಆದರೆ ಒಂದು ಕುರಿಯು ಹಿಂದೆ ಉಳಿಯಿತು. ಒಂದಾನೊಂದು ದಿನ್ನೆಯ ಮೇಲೆ ನಿಂತು ಅಲ್ಲಿಯ ಎಳೆ ಹುಲ್ಲನ್ನು ಮೇಯಹತ್ತಿತು. ಒಂದೆರಡು ಸಲ ಆ ಹುಡುಗನು ಆ ಕುರಿಗೆ ಬರಲು ಕೂಗಿದನು. ಆದರೆ ಅದೇನು ಮುಂದೆ ಬರಲೇ ಇಲ್ಲ. ಆಗವನು ಸಿಟ್ಟಾಗಿ ಒಂದು ಕಲ್ಲನ್ನು ಎತ್ತಿ ಅದರ ಮೇಲೆ ಚಲ್ಲಿಕೊಟ್ಟನು. ಆದರೆ ದುರ್ದೈವದಿಂದ ಆ ಕಲ್ಲು ಕುರಿಯ ಕೋಡಿಗೆ ಬಲವಾಗಿ ತಾಕಿ ಅದರ ಕೋಡುಗಳೆರಡೂ ಮುರಿದು ಅಲ್ಲಿಂದ ರಕ್ತವು ಸುರಿಯಹತ್ತಿತು. ಇದನ್ನು ಕಂಡು ಆ ದನಕಾಯುವ ಹುಡುಗನು ತನ್ನ ಯಜಮಾನನು ಇದಕ್ಕೆ ತನ್ನನ್ನು ಶಿಕ್ಷಿಸುವನೆಂದು ಗಾಬರಿಯಾದನು. ಕೂಡಲೇ ಅವನು ಆ ಕುರಿಗೆ ಕೈಮುಗಿದು:— “ ಏನೇ! ನಾನೇನು ನಿನ್ನ ಕೋಡುಗಳನ್ನು ಮುರಿಯಲೆಂದು ಕಲ್ಲು ಒಗೆಯಲಿಲ್ಲ; ಆದ್ದರಿಂದ, ನೋಡು! ಯಜಮಾನನೆದುರಿನಲ್ಲಿ ಈ ಸಂಗತಿಯನ್ನು ಹೇಳಬೇಡವೆಂದು ಅಂಗಲಾಚಿ ಬೇಡಿಕೊಂಡನು. ಆ ಕುರಿಯು ಇದಕ್ಕೆ ಪ್ರತಿಯಾಗಿ:—“ ಅಪ್ಪಾ! ಇದೇನು ಮುಚ್ಚುವ ಸಂಗತಿಯಲ್ಲ; ಅಂಗೈಯಲ್ಲಿಯ ಹುಣ್ಣಿಗೆ ಕನ್ನಡಿಯೇಕೆ ಬೇಕು; ನಡೆದದ್ದನ್ನು ಮುಚ್ಚಿಟ್ಟರೂ ನನ್ನ ಈ ಮುರಕ ಕೋಡುಗಳೇ ಎಲ್ಲ ವಿದ್ಯಮಾನವನ್ನು ಒಡೆಯನಿಗೆ ತಿಳುಹಿ ನಿನ್ನನ್ನು ಶಿಕ್ಷೆಗೆ ಗುರಿಮಾಡುವವು. ನಾನೇನು ಮಾಡಲಿ; ” ಎಂದು ನುಡಿಯಿತು.

ಸಾರಾಂಶ:— ತಪ್ಪು ದೊಡ್ಡದಿದ್ದರೆ, ಅದನ್ನು ಮುಚ್ಚಲು ಬರದಂತಹದಿದ್ದರೆ, ಅದಕ್ಕೆ ತಕ್ಕ ಶಾಸನವು ಸಿಗಲೇಬೇಕು.

---

## ೨೪೫:— ಗರುಡವೂ ಬೆಕ್ಕೂ.

ಒಂದು ಗರುಡವು ಬಹುದೂರ ಆಕಾಶದಲ್ಲಿ ಹಾರಾಡುವ ಕಾಲಕ್ಕೆ ಅದಕ್ಕೆ ಕೆಳಗೊಂದು ಮೊಲವು ಕುಳಿತಂತೆ ಭಾಸವಾಯಿತು. ಆಗದು ಚನ್ನಾಗಿ ಪರೀಕ್ಷಿಸದೇ ಒಮ್ಮೆಲೇ ಜಪ್ಪಿಸಿ ತನ್ನ ಹಿಡಿತದಲ್ಲಿ ಅದನ್ನು ಹಿಡಿದು ಆಕಾಶಕ್ಕೆ ಹಾರಿತು. ಆದರೆ ಕೊಂಚ ಕಾಲದಲ್ಲಿಯೇ ಆ ಗರುಡಕ್ಕೆ ತಾನು ತಂದಿರುವದು ಮೊಲವು ಇರದೆ ಬೆಕ್ಕಿರುವದೆಂದು ತಿಳಿಯಬಂತು. ಆಗ ಅದಕ್ಕೆ ಆ ಗರುಡವು ಪಶ್ಚಾತ್ತಾಪ ಪಟ್ಟಿತು.

ಆವರೇನು ಆ ಬೆಕ್ಕು ಅದರ ಕುತ್ತಿಗೆಗೆ ತೆಕ್ಕಿಬಿದ್ದು ತನ್ನ ಪಂಜರದಿಂದ ಅದನ್ನು ಕೊಲ್ಲುತ್ತಲೇ ಕೆಳಗೆ ಬಿದ್ದಿತು.

ತಾತ್ಪರ್ಯ:— ಹಿಂದು ಮುಂದೆ ವಿಚಾರಿಸದೆ ಅವಸರದಿಂದ ಮಾಡಿದ ಕಾರ್ಯದಿಂದ ಒಮ್ಮೊಮ್ಮೆ ಬಲು ಭಯಂಕರವಾದ ಪರಿಣಾಮಗಳುಂಟಾಗುತ್ತವೆ.

---

## ೨೪೬:— ನರಿಯೂ ಸಿಂಹವೂ.

ಒಂದು ನರಿಯು ಮೊದಲಿನ ಸಲವೇ ಸಿಂಹನನ್ನು ಕಂಡಿತು. ಆಗದು ಬೆದರಿ ಅದರ ಕಾಲು ಮುಗಿದು ಎರಡು ವಿನಯದ ವಚನಗಳನ್ನು ಆಡಿತು. ಆದರೆ ಎರಡನೆಯ ಸಾರೆ ಆ ಸಿಂಗನನ್ನು ಅಂಜದಲೇ ಗಟ್ಟಿಯಾಗಿ ಮಾತಾಡಿಸಿತು. ಕಡೆಗೆ ಮೂರನೆಯ ಸಾರೆ ಆ ಸಿಂಗನ ಅತಿ ಸಮೀಪಕ್ಕೆ ಹೋಗಿ ಆ ನರಿಯು ಚಿನ್ನಾಟವಾಡಹತ್ತಿತು.



ಸಾರಾಂಶ:— ಅತಿ ಪರಿಚಯವಾದರೆ ಕೀಳರು ದೊಡ್ಡವರ ಮಾನವನ್ನು ಉಳಿಸುವದಿಲ್ಲ.

## ೨೪೭:— ಜೇನು ಹುಳವೂ ನೊಣವೂ.

ಒಂದು ನೊಣವು ತನ್ನ ಹುಟ್ಟಿನ ಹತ್ತರ ಆನಂದದಿಂದ ಹಾರಾಡುವದನ್ನು ಜೇನು ಹುಳವೊಂದು ಕಂಡು ಸಿಟ್ಟಿನಿಂದ ಎಲೇ! ಇಲ್ಲೇನಿದೆ ನಿನ್ನ ಕೆಲಸ? ಹವೆಯೊಳಗಿನ ರಾಜ್ಞಿಯರ ಸಂಗದಲ್ಲಿ ಆಗಂತುಕನಂತೆ ಸೇರಲು ನಿನಗೆ ನಾಚಿಕೆಯಿಲ್ಲವೇ? ಎಂದು ಮಾತಾಡಿತು! ಇದಕ್ಕೆ ನೊಣವು:— "ಓಹೋ! ಅಹುದು! ತಾವು ಸಿಟ್ಟಿಗೇಳಲು ದೊಡ್ಡ ಕಾರಣವಾಯಿತು! ನಿಜವು! ಯಾಕಂದರೆ ನಿನ್ನಂಥ ತುಂಟಪ್ರಾಣಿಯ ಸಂಗತಿಯಲ್ಲಿ ಸೇರಿದ್ದೇ ನನ್ನ ಮೂರ್ಖತನವು!" ಎಂದಂದಿತು. ಇದನ್ನು ಕೇಳಿ ಜೇನು ಹುಳಕ್ಕೆ ಅತಿ ಸಂತಾಪವಾಯಿತು; ಆಗದು ನೊಣಕ್ಕೆ:— "ನಮ್ಮ ಜೇನು ಹುಳಗಳ ರಾಜ್ಯವೆಂದರೇನೆಂದು ತಿಳಿದಿರುವಿ ನೀನು! ಅದರ ಕಾನೂನುಗಳು ಉತ್ತಮವಾದವು; ಅವು ಉತ್ತಮವಾದ ಧೋರಣಗಳ ಮೇಲೆ ನಡೆಯಿಸಲ್ಪಟ್ಟಿವೆ; ಸುವಾಸನೆಯುಳ್ಳ ಹೂಗಳ ಮೇಲೆ ನಮ್ಮ ಉಪಜೀವನ. ತುಪ್ಪವನ್ನು ಕೂಡಿಹಾಕುವದೊಂದೇ ನಮ್ಮ ಕೆಲಸವು. ಆ ತುಪ್ಪವೆಂದರೆ ಅಮೃತವೇ ಸರಿ; ಆದರೆ ಎ! ಅರಸಿಕ ದುಷ್ಟಪ್ರಾಣಿಯೇ ನಿನ್ನ ಸ್ಥಿತಿಯನ್ನು ನೋಡಿಕೋ. ಕೊಳೆತಿರುವ ಹೊಲಸಿನ ಮೇಲೆಯೇ ನಿನ್ನ ಉದರನಿರ್ವಾಹವು;" ಎಂದೆಷ್ಟೋ ಬಗೆಯಾಗಿ ಚುಚ್ಚಿ ನುಡಿಯಿತು. ಈ ಮಾತಿಗೆ ನೊಣವು:— "ನಮ್ಮನ್ನು ದೇವರು ಇಟ್ಟಂತೆ ನಾವು ಇರುವೆವು; ಇದಲ್ಲದೆ ಬಡತನವು ದೋಷವಲ್ಲವೆಂದು ನನ್ನ ಮತವು; ಆದರೆ ಸಿಟ್ಟು ಮಾತ್ರ ದೋಷಗಳೊಳಗೆ ಸಮಾವೇಶವಾಗುತ್ತದೆ; ನೀವು ಕೂಡಿಡುತ್ತಿರುವ ತುಪ್ಪವು ಅಮೃತವಾಗಿದ್ದರೂ ನಿಮ್ಮ ಅಂತಃಕರುಣವು ಮಾತ್ರ ದ್ವೇಷದಿಂದ ದೂಷಿತವಾಗಿರುತ್ತದೆ; ಯಾಕಂದರೆ ಶತ್ರುಗಳ ಮೇಲೆ ಸೇಡು ತೀರಿಸಿಕೊಳ್ಳುವ ಭರದಲ್ಲಿ ನೀವು ನಿಮ್ಮ ಜೀವಕ್ಕೂ ಎರವಾಗುವಿರಿ; ಇದಲ್ಲದೆ ಸಿಟ್ಟಿನ ಭರದಲ್ಲಿ ನೀವು ಮಾಡಬಾರದ್ದನ್ನು ಮಾಡಲೂ ಹಿಂದು ಮುಂದು ನೋಡುವದಿಲ್ಲ; ಪ್ರಾಣಿಗಳಿಗೆ ಬುದ್ಧಿಯು ಕೊಂಚವಾಗಿದ್ದರೂ ಚಿಂತಿಲ್ಲ; ಆದರೆ ಅದರ ಉಪಯೋಗವನ್ನು ಮಾತ್ರ ಹೆಚ್ಚು ಜಾಣತನದಿಂದ ಮಾಡಿಕೊಳ್ಳಲು ಬರಬೇಕು; ಇದನ್ನು ಚನ್ನಾಗಿ ನೆನಸಿನಲ್ಲಿಡು;" ಎಂದು ಶಾಂತವಾಗಿ ನುಡಿಯಿತು.

**ಸಾರಾಂಶ:—** ದೇವರು ದಯಪಾಲಿಸಿದ ಸ್ವಭಾವಸಿದ್ಧ ಸೌಕರ್ಯಗಳ ದುರುಪಯೋಗ ಮಾಡಿಕೊಳ್ಳುವರು ಅನೇಕರಿರುತ್ತಾರೆ.

———————

## ೨೪೮:— ಗರುಡವೂ ಕಾಗೆಯೂ.

ಒಂದು ಗುಡ್ಡದ ಬುಡದಲ್ಲಿ ಕೆಲವು ಆಡುಗಳು ಮೇಯುತ್ತಿದ್ದವು. ಇದನ್ನು ಮೇಲೆ ಕುಳಿತಿರುವ ಒಂದು ಗರುಡವು ನೋಡಿತು. ಆಗ ಅದು ಜಪ್ಪಿಸಿ ಒಂದು ಸಣ್ಣ ಮರಿಯನ್ನು ಕಾಲಲ್ಲಿ ಹಿಡಿದು ಕೊಂಡದ್ದೇ ಆಕಾಶಕ್ಕೆ ಹಾರಿತು. ಈ ಪ್ರಕಾರವನ್ನು ನೋಡುತ್ತ ಸಮೀಪದ ಗಿಡದ ಮೇಲೆ ಕುಳಿತಿರುವ ಒಂದು ಕಾಗೆಯು ತಾನೂ ಹಾಗೆ ಮಾಡಬೇಕೆಂದು ಒಂದು ಆಡಿನ ಬೆನ್ನ ಮೇಲೆ ಒಂದು ಕುಳಿತಿತು. ಆದರೆ ಅದರ ಕಾಲುಗಳು ಆಡಿನ ಕೂದಲುಗಳಲ್ಲಿ ಸಿಕ್ಕಿಕೊಂಡು ಕಡೆಗೆ ಬರದಂತಾಗಿರಲು ಅದು ಒಂದೇಸವನೇ ಕೂಗಹತ್ತಿತು. ಆಗಲೇ ಅಲ್ಲಿಯೇ ಸಮೀಪದಲ್ಲಿದ್ದ ಆಡುಗಳ ಒಡೆಯನು ಆ ಸ್ಥಳಕ್ಕೆ ಬಂದು ಮೆಲ್ಲನೆ ಆ ಕಾಗೆಯನ್ನು ಹಿಡಿದು ಅದರ ಕಾಲು



ಕಟ್ಟಿ ಅದನ್ನು ಆಡಲಿಕ್ಕೆಂದು ತನ್ನ ಮಗನಿಗೆ ಕೊಟ್ಟನು.

ಸಾರಾಂಶ:— ಅನ್ಯರ ಅನುಕರಣ ಮಾಡುವಾಗ್ಯೆ ಮನುಷ್ಯನು ತನ್ನ ಸ್ಥಿತಿ ಶಕ್ತಿಗಳನ್ನು ಚನ್ನಾಗಿ ನೋಡಿಕೊಂಡು ಆ ಕೆಲಸಕ್ಕೆ ಕೈ ಹಾಕಬೇಕು. ಅಲ್ಲದೆ ಸುಮ್ಮನೇ ಹುಲಿಯ ಬಣ್ಣಕ್ಕೆ ನರಿಯು ಮೈ ಸುಟ್ಟುಕೊಂಡತಾಗಬಾರದು.

## ೨೪೯:— ಆನೆಯೂ ಪ್ರಾಣಿಗಳ ಸಮ್ಮೇಲನವೂ.

ತನ್ನ ಸಮಾಜದ ಹಿತದ ವಿಷಯಕ್ಕೆ ಯಾವಾಗಲೂ ಹೆಣಗುತ್ತಿರುವ ಒಂದು ಜಾಣ ಆನೆಗೆ, ಪಶುಗಳಲ್ಲಿ ಅನೇಕ ಕೆಟ್ಟ ಚಟಗಳಿದ್ದು, ಅವನ್ನು ಕೂಡಲೇ ತೆಗೆದು ಹಾಕಬೇಕೆಂದು ತಿಳಿದು ಬಂತು. ಆಗ ಅದು ಪ್ರಾಣಿಗಳ ದೊಡ್ಡದೊಂದು ಸಭೆಯನ್ನು ಸೇರಿಸಿ ಅಲ್ಲಿ ಉದ್ದೇಶಪೂರ್ಣವಾದ ಒಂದು ಭಾಷಣವನ್ನು ಮಾಡಿತು. ಕಾಲು ತಾಸಿಗಿಂತಲೂ ಕೊಂಚ ಹೆಚ್ಚಾಗಿ ಅವುಗಳ ದುರ್ಗುಣಗಳ ಮೇಲೆ, ಸಾವಿರಾರು ನಗೆಬರುವಂತಹ ನಡಾವಳಿಗಳ ಮೇಲೆ, ವಿಶೇಷವಾಗಿ ಅವುಗಳಲ್ಲಿ ಕಂಡುಬರುವ ಅಯೋಗ್ಯವಾದ ಆಲಸ್ಯ, ಅತಿಸ್ವಾರ್ಥ ಬೇಕೆಂದು ಮಾಡುವ ದುಷ್ಟತನ, ದ್ವೇಷಪೂರ್ಣವಾದ ಮಾತ್ಸರ್ಯ ಈ ಮುಂತಾದವುಗಳ ಮೇಲೆ, ಟೀಕೆಯನ್ನು ಮಾಡಿತು. ಕೇಳುವವರಲ್ಲನೇಕರಿಗೆ ಈ ಭಾಷಣವು ಜಾಣತನದ್ದೂ ಆನಂದದಾಯಕವೂ ತೋರಿತು. ಕೇಳುವವರಲ್ಲಿ ಮುಖ್ಯವಾಗಿ ವಿಕಲ್ಪರಹಿತವಾದ ಪಾರಿವಾಳಗಳು, ವಿಶ್ವಾಸದ ಸ್ವಭಾವದ ನಾಯಿಯು, ಆಜ್ಞಾಧಾರಕ ಒಂಟೆಯು, ನಿರುಪದ್ರವಿಯಾದ ಕುರಿಯು ಇವೆಲ್ಲವು ಆನೆಯ ಭಾಷಣವನ್ನು ಲಕ್ಷಪೂರ್ವಕವಾಗಿ ಕೇಳಿದವು. ಹಗಲೆಲ್ಲ ತನ್ನ ಹೋರೆಯಲ್ಲಿ ತೊಡಗುತ್ತಿರುವ ಜೇನುನೊಣಕ್ಕೂ ಈ ಭಾಷಣದಿಂದ ಒಳ್ಳೇ ಪರಿಣಾಮವಾಯಿತು. ಆದರೆ ಶ್ರೋತೃಗಳಲ್ಲಿ ಕೆಲವರಿಗೆ ಈ ಮಾತಿನ ಮಾಲೆಯನ್ನು ಕೇಳುವದು ರುಚಿಸದೆ ಸಿಟ್ಟಾದರು. ಉದಾಹರಣಾರ್ಥ:— ಹುಲಿಯು, ಆಶೆಬುರಕ ತೋಳವು ಬಲು ಬೇಸರಗೊಂಡವು. ಹಾವಂತೂ ತನ್ನ ಸರ್ವಶಕ್ತಿಯಿಂದ ಭುಸುಗುಟ್ಟಹತ್ತಿದವು. ಕಡಿಜೀರಿಗೆ ಹುಳಗಳೂ ನೊಣಗಳೂ ಬಹಳ ಗುಣಗುಟ್ಟಹತ್ತಿದವು. ಮಿಡಿತೆಯು ಆನೆಯ ಭಾಷಣವನ್ನು ತಿರಸ್ಕರಿಸಿದ್ದೇ ಸಭೆಯೊಳಗಿಂದ ಹಾರುತ್ತ ಹಾರುತ್ತ ಹೊರಟುಹೋಯಿತು. ಅಜಗರವೆಂಬ ಆಲಸ್ಯದ ಪ್ರಾಣಿಗೆ ಬಲು ಸಿಟ್ಟುಬಂತು. ತುಂಟಕೋತಿಯಂತೂ ತುಚ್ಛತೆಯಿಂದ ಆನೆಗೆ ಅಣಗಿಸಹತ್ತಿತು. ಈ ಗದ್ದಲವನ್ನು ಕೇಳಿ ಆನೆಯು ತನ್ನ ಮಾತನ್ನು ಕೆಳಗಿನಂತೆ ಮುಗಿಸಿತು. " ನನ್ನ ಉಪದೇಶವು ಎಲ್ಲರನ್ನೂ ಉದ್ದೇಶಿಸಿ ಇರುತ್ತದೆ. ಸಿಟ್ಟಗೆದ್ದವರು ತಮ್ಮ ತಪ್ಪನ್ನು ಒಪ್ಪಿದಂತಾಯಿತೆಂಬದನ್ನು ಲಕ್ಷದಲ್ಲಿಡಿರಿ. ಆದರೆ ನಿರುಪದ್ರವಿಗಳಾದ ಪ್ರಾಣಿಗಳು ನನ್ನ ಭಾಷಣವನ್ನು ಶಾಂತವಾಗಿ ಕೇಳಹತ್ತಿವೆ; ನೋಡಿರಿ. "

ತಾತ್ಪರ್ಯ:— ತಮ್ಮ ದುರ್ಗುಣಗಳ ವರ್ಣನೆಯನ್ನು ಕೇಳುವದು ಮನುಷ್ಯರಿಗೆ ಸೇರುವದಿಲ್ಲ.

## ೨೫೦:— ಪಾರಿವಾಳವೂ ಕಾಗೆಯೂ.

ಒಂದು ಪಂಜರದಲ್ಲಿ ಒಂದು ಪಾರಿವಾಳವನ್ನು ಹಿಡಿದು ಇಟ್ಟಿದ್ದರು. “ ಇಲ್ಲಿಯೇ ನನಗೆ ಮರಿಗಳೆಷ್ಟಾದವು! ನನ್ನ ಧನ್ಯತೆಯು ಅದೆಷ್ಟು!” ಹೀಗೆ ಅದು ಅದೆಷ್ಟೋ ಜಂಭ ಕೊಚ್ಚಹತ್ತಿತು. ಆಗ ಬದಿಯಲ್ಲಿಯೇ ಒಂದು ಕಾಗೆಯು ಕುಳಿತಿತ್ತು. ಅದು ಈ ಪಂಜರದ ಮೇಲೆ ಬಂದು ಕುಳಿತು ಪಾರಿವಾಳಕ್ಕೆ:—“ ಸಾಕು! ನಿನ್ನ ಜಂಭದ ಮಾತುಗಳು ಅಷ್ಟಕ್ಕೇ ಮುಗಿಯಲಿ! ನಿನ್ನ ಸಂತತಿಯು ಬೆಳೆಬೆಳೆದಂತೆ ಮತ್ತೆ ನಿನ್ನ ದುಃಖಕ್ಕೆ ಕಾರಣವಾಗುವದೇ ಹೊರತು ಬೇರಿಲ್ಲ. ಯಾಕಂದರೆ ಆ ಎಲ್ಲ ಮರಿಗಳೂ ನಿನ್ನಂತೆ ಈ ಪಂಜರದಲ್ಲಿ ಸೆರೆಯಾಗಿರುವದನ್ನು ನಿನಗೆ ನೋಡಬೇಕಾಗುತ್ತದೆ. ಇದಕ್ಕಿಂತಲೂ ಕಷ್ಟವಾವುದು! ಎಂದು ಮುರಿದು ಮಾತಾಡಿತು.



## ೨೫೧:— ಬಹುಜನ ಗೆಳೆಯರಿದ್ದ ಮೊಲವು.

ಒಂದು ಮೊಲಕ್ಕೆ ಅಡವಿಯು ಎಲ್ಲ ಪಶುಗಳ ಪರಿಚಯುವಿತ್ತು, ತನ್ನ ಗೆಳೆಯರು ಬಹು ಜನರೆಂದು, ಅದಕ್ಕೆ ಅದೆಷ್ಟೋ ಆನಂದ; ಒಂದು ದಿನ ಬೇಡನು ಬೆಳಗಿನಲ್ಲಿ ಆ ಮೊಲವನ್ನು ಬೆನ್ನಟ್ಟಿದನು. ಮೊಲಕ್ಕೆ ಓಡಿ ಓಡಿ ಸಾಕಾಯಿತು. ಪಾರಾಗಲೆಂದು ಅದು ಹಾಕಿದ ಹಲವು ಯುಕ್ತಿಗಳೂ ವ್ಯರ್ಥವಾದವು. ಆ ವೇಳೆಯಲ್ಲಿ ಅದು ಕುದುರೆಗೆ ತನ್ನನ್ನು ಬೆನ್ನ ಮೇಲೆ ಕುಳ್ಳಿರಿಸಿಕೊಳ್ಳಲು ಬೇಡಿಕೊಂಡಿತು; ಹಾಗಾದರೆ ಬೇಡನಿಗೆ ತನ್ನ ಮಾರ್ಗವು ತಿಳಿಯಲಾರದೆಂದೂ ಹೇಳಿತು. ಆದರೆ ಕುದುರೆಯು:— " ನೀನು ಸಂಕಟಕ್ಕೆ ಸಿಲುಕಿದ್ದನ್ನು ಕಂಡು ನನಗೆ ಅತಿ ಕಷ್ಟವಾಗುತ್ತದೆ. ಇಲ್ಲಿಯೇ ಮತ್ತೆ ನಿನ್ನ ಬೇರೆ ಗೆಳೆಯರಿರುವರು; ಅವರು ನಿನಗೆ ಸಹಾಯರಾದಾರು; " ಎಂದು ನುಡಿಯಿತು. ಆಗ ಮೊಲವು ಎತ್ತಿನ ಕಡೆಗೆ ಹೋಯಿತು; ಅದು:— " ನಿನಗೆ ನಾನು ಆನಂದದಿಂದ ಸಹಾಯ ಮಾಡುತ್ತಿದ್ದೆ. ಏನು ಮಾಡಲಿ! ಕಾರ್ಯಾವಸರದ ಸಲುವಾಗಿ ನನಗೆ ಬೇರೆ ಕಡೆಗೆ ಹೋಗಬೇಕಾಗಿದೆ; ಮತ್ತಾವಾಗಲಾದರೂ ನಿನಗೆ ನೆರವಾಗುವೆನು; ಅದು ನೋಡು! ಇಲ್ಲಿಯೇ ಆಡು ನಿಂತಿದೆ: " ಎಂದು ನುಡಿಯಿತು. ಆಡನ್ನು ಮೊಲವು ಕೇಳಿಕೊಂಡಿತು. ಆಡು:— " ನಿಜವಾಗಿಯೂ ನನ್ನ ಮೈಯಲ್ಲಿ ಕಾಯಿಲೆಯಾಗಿದೆ; ಇದಲ್ಲದೆ ನನ್ನ ಮೇಲೆ ನೀನು ಕುಳಿತರೆ ನಿನಗೆ ಕೆಡುಕಾದೀತು; ಅಕ್ಕೋ! ಅಲ್ಲಿ ನೋಡು! ಕುರಿಯು ಬರುತ್ತಿದೆ: " ಎಂದು ಮಾತಾಡಿತು. ಕುರಿಯನ್ನು ಕೇಳಲು ಅದು:— " ನಾನು ಮೆಲ್ಲಗೆ ನಡೆಯುತ್ತೇನೆ; ಆದ್ದರಿಂದ ನನ್ನಿಂದ ನಿನಗೇನು ಉಪಯೋಗವು? ಅಲ್ಲದೆ ಬೇಟೇ ನಾಯಿಗಳ ಬೆದರಿಕೆಯು ಇಬ್ಬರಿಗೂ ಸರಿಯಾಗಿದೆ; " ಎಂದು ಹೇಳಿತು. ಕಡೆಗೆ ನಿರಾಶೆಗೊಂಡು ಮೊಲವು ಒಂದು ಆಕಳ ಕರುವಿಗೆ ತನಗೆ ಸಹಾಯವಾಗಲು ಬೇಡಿಕೊಂಡಿತು. ಆಗ ಅದು:— " ನನ್ನಿಂದ ಹೆಚ್ಚು ಅನುಭವವುಳ್ಳ ಸಶಕ್ತರೂ ಸಹ ನಿನ್ನ ಕೈಬಿಟ್ಟ ಮೇಲೆ ನನ್ನಂಥ ತರುಣನಾದ ಅನುಭವಶೂನ್ಯ ಹುಡುಗನಿಂದೇನಾಗಬೇಕಿದೆ; ಇದಲ್ಲದೆ ನಿನ್ನನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡರೆ ಉಳಿದವರಿಗೆ ಸಿಟ್ಟುಬಾರದೇ? ನೀನೇ ಹೇಳು; ಆದ್ದರಿಂದ ನನ್ನನ್ನು ದಯವಿಟ್ಟು ಕ್ಷಮಿಸು; ನಿನ್ನ ಮೇಲಿರುವ ನನ್ನ ಪ್ರೇಮವು ನಿನಗೆ ತಿಳಿದೇ ಇದೆ; ಅನಿವಾರ್ಯವಾಗಿ ಜೀವದ ಗೆಳೆಯರೂ ಒಮ್ಮೊಮ್ಮೆ ಅಗಲಬೇಕಾಗುತ್ತದೆ; ಓಹೋ! ಅದುನೋಡು! ಬೇಟೆಯ ನಾಯಿಗಳು ಬಂದೇ ಬಿಟ್ಟವು ! " ಎಂದಂದದ್ದೇ ಪಲಾಯನವಾಯಿತು. ದುರ್ದೈವಿಯಾದ ಮೊಲವು ನಾಯಿಗಳ ಬಾಯಿಗೆ ಬಿದ್ದಿತು.

ತು. ಬಾರಪ್ಪಾ! ಹತ್ತರ ಬಾ! ಎಲ್ಲಿ ನಿನ್ನ ಹಿಂಗಾಲು ತೋರಿಸು ನೋಡುವೆನು! ಎಂದು ತೋಳವು ಮಾತಾಡಿತು. ಆಗ ಕತ್ತೆಯು ಆ ತೋಳನ ಸಮೀಪಕ್ಕೆ ಹೋದದ್ದೇ ತನ್ನ ಹಿಂಗಾಲನ್ನು ಜಾಡಿಸಿತು. ಇದರಿಂದ ತೋಳನ ದವಡೆಯ ಹಲ್ಲುಗಳೆಲ್ಲ ಮುರಿದು ಹೋಗಿ ಅದು ಒಂದೇಸವನೇ ಒರಲುತ್ತ ದೂರ ಸಿಡಿದು ಬಿದ್ದುಕೊಂಡಿಂತು. ಇತ್ತ ಕತ್ತೆಯು ವಂಚಕನಿಗೆ ನಾನೊಬ್ಬ ವಂಚಕನು ಚನ್ನಾಗಿ ಗಂಟು ಬಿದ್ದೆನೆಂದು ಗುಣಾಗುಟ್ಟುತ್ತ ಓಡಿಹೋಯಿತು.

ಸಾರಾಂಶ:— ತಾನೇ ಅತೀವ ವಂಚಕನೆಂದು ಹೆಮ್ಮೆಪಡೆಯಲು ಯಾರಿಗೂ ಸಾಧ್ಯವಿಲ್ಲ. ಯಾಕಂದರೆ ಇಂಥವನನ್ನು ವಂಚಿಸುವಪನು ಮತ್ತೊಬ್ಬನು ಇದ್ದೇ ಇರುತ್ತಾನೆ.

---

## ೨೫೩:— ಅನಾಭ್ಯಾಸಿಯಾದ ಹುಡುಗನು.

ಒಬ್ಬ ಸೋಮಾರಿಯಾದ ಹುಡುಗನು ಶಾಲೆಗೆ ಹೋಗುತ್ತಿದ್ದನು. ಅವನಿಗೆ ಮೂಲಾಕ್ಷರಗಳಲ್ಲಿಯ ಮೊದಲನೆಯದರ ಉಚ್ಚಾರವನ್ನು ಏನು ಮಾಡಿದರೂ ಮಾಡಲು ಬರದಂತಾಯಿತು. ಕಡೆಗೆ ಅಯ್ಯನವರು:— " ಎಲೇ! ಬಾಯಿತೆರೆದು " ಅ " ಎಂದನ್ನು " ಎಂದು ಗದ್ದರಿಸಿ ನುಡಿದರು. ಹುಡುಗನು ಬಾಯಿಯನ್ನು ತೆರೆದನು. ಆದರೆ " ಅ " ಅನ್ನುವ ಪ್ರಯತ್ನವನ್ನೂ ಮಾಡಲಿಲ್ಲ. ಅಯ್ಯನವರ ಯತ್ನವು ಈ ಹುಡುಗನಲ್ಲಿ ಏನೂ ಸಾಗದೆಂದು ಎಲ್ಲ ಹುಡುಗರಿಗೆ ತಿಳಿಯಲು ಅವರು ತಮ್ಮ ತಮ್ಮೊಳಗೆ ತಾವಷ್ಟು ಆ ಹುಡುಗನಿಗೆ ತಿಳಿಹೇಳಲು ನಿಶ್ಚೈಸಿದರು. ಆಗ ಒಬ್ಬನು:— "ಅ" ಅನ್ನಲು ಅಂತಹದೇನು ಕಠಿಣವಿಲ್ಲವೆಂದು ನನಗೆ ತೋರುತ್ತದೆ; " ಎಂದು ನುಡಿದನು. ಆ ಸೋಮಾರಿಯು ಅದಕ್ಕೆ ಪ್ರತಿಯಾಗಿ:— " ಅಹುದು! ಅದೆಲ್ಲಿದೆ ಕಠಿಣ! ನಾನು ಒಮ್ಮೆ " ಅ " ಎಂದು ಉಚ್ಚಾರಮಾಡಿದರೆ " ಮತ್ತೆ ಮತ್ತೆ " ಅ " ಅನ್ನುವ ತೊಂದರೆಯು ನನ್ನನ್ನೇನು ಬಿಟ್ಟಿದ್ದಲ್ಲ; ಆದ್ದರಿಂದಲೇ " ಅ " ಎನ್ನಲೇಬಾರದೆಂದು ನನ್ನ ನಿಶ್ಚಯವೇ ಆಗಿದೆ; " ಎಂದು ಉತ್ತರಕೊಟ್ಟನು.

ತಾತ್ಪರ್ಯ:— ಮೌನಂ ಸರ್ವಾರ್ಥಸಾಧನಮ್.

---

## ೨೫೪:— ಮಳೆಯ ನೀರಿನ ತಟಕು.

ಮೋಡದಿಂದ ಜಗುಳಿ ಬಿದ್ದ ಮಳೆಯ ನೀರಿನ ಒಂದು ತಟಕು ತನ್ನ ದೈವದ ಬಗ್ಗೆ ಕುರುಕುರು ಮಾಡಹತ್ತಿತು. ಅದು:— " ನನ್ನ ಜೀವವು ಎಷ್ಟು ನಿರುಪಯೋಗವಾಗಿದೆ! ಇನ್ನು ನನ್ನ ಅಂತ್ಯವೇ ಆಗುತ್ತದೆ! ಆರಿಗೂ ನನ್ನ ಗುರುತು ಇಲ್ಲ! ನಾನೇ

ನೂ ಮಾಡಿಲ್ಲ! ನಾನು ಆಕಾಶದಲ್ಲಿಂದ ಕಳಚಿಬಿದ್ದಿರುವೆನು! ನಾನು ಹುಟ್ಟದಿದ್ದರೇನೇ ಚನ್ನಾಗುತ್ತಿತ್ತು! ಎಂದೆಷ್ಟೋ ಮರುಗಿನ ಮಾತುಗಳಾಡಿತು. ಆದರೆ ಆ ತಟಕು ದೈವವಶಾತ್ತಾಗಿ ಒಂದು ಮುತ್ತಿನ ತೆರೆದಿರುವ ಸಿಂಪಿನಲ್ಲಿ ಬಿದ್ದಿತು. ಆ ಕೂಡಲೇ ಸಿಂಪು ಮುಚ್ಚಿಕೊಂಡಿತು. ಮುಂದೆ ಅನೇಕ ವರ್ಷಗಳನಂತರ ಆ ಸಿಂಪಿನೊಳಗಿಂದ ಒಂದು ಅಮೌಲ್ಯವಾದ ಮುತ್ತು ಹೊರಬಿತ್ತು. ಮಳೆಯ ನೀರಿನ ತಟಕು ರಾಜಮುಕುಟದಲ್ಲಿ ಮಿರುಗುವ ಮುತ್ತಾಯಿತು.

ತಾತ್ಪರ್ಯ:— ಕೀಳ ಕುಲವಾಗಿದ್ದರೂ ದೈವವೊದಗಿದರೆ ಆ ಮನುಷ್ಯನು ಉಚ್ಚಪದವಿಗೇರುವಲ್ಲಿ ಸಂದೇಹವಿಲ್ಲ.

## ೨೫೫:— ಬೆಕ್ಕೂ ಕಣ್ಣುಕಪ್ಪಡೆಯೂ.



ಒಂದು ಬೆಕ್ಕು ತನ್ನ ಒಡೆಯನ ಪ್ರೀತಿಯ ಗಿಳಿಯನ್ನು ಮುರಿದು ತಿಂದಿತು. ಆಗ ಒಡೆಯನು:— “ ಆ ಬೆಕ್ಕು ಬರಲಿ ನನ್ನ ಮುಂದೆ! ಅದನ್ನು ಕೊಂದೇ ತೀರುವೆನು; ” ಎಂದು ಸಿಟ್ಟಿನಿಂದ ನುಡಿದನು. ಈ ಮಾತುಗಳನ್ನು ಕೇಳಿದಕೂಡಲೇ ಆ

ಬೆಕ್ಕಿನ ಕೈಕಾಲೇ ಹೋದವು. ಅದು ತಾನು ಈ ಸಾರೆ ಈ ಸಂಕಟದಲ್ಲಿ ಪಾರಾಗಿ ಉಳಿದರೆ ತಾನೆಂದಿಗೂ ಯಾವ ಪಕ್ಷಿಗಳನ್ನು ಮುರಿದು ತಿನ್ನಲಿಕ್ಕಿಲ್ಲೆಂದು ಪ್ರತಿಜ್ಞೆಯನ್ನು ಮಾಡಿತು. ಇಷ್ಟರಲ್ಲಿಯೇ ಪಡಸಾಲೆಯ ಕಿಡಿಕೆಯೊಳಗಿಂದ ಒಂದು ಕಣ್ಣಿಕಪ್ಪಡೆಯು ಒಳಹೊಕ್ಕಿತು. ಅದನ್ನು ನೋಡಿ ಇಂಥ ಮೋಹಬರುವ ವೇಳೆಯಲ್ಲಿ ತಾನು ಹೇಗೆ ನಡೆಯಬೇಕೆಂದು ಆ ಬೆಕ್ಕು ಚಿಂತೆಗೊಳಗಾಯಿತು. ಒಂದು ಕಡೆಗೆ ಹೊಟ್ಟೆ, ಮತ್ತೊಂದೆಡೆಗೆ ಪ್ರತಿಜ್ಞಾಭಂಗದ ಭೀತಿಯು; ಈ ಪ್ರಕಾರ ಅಡಕಿನಲ್ಲಿ ತೊಡಕಿರಲು ಆ ಬೆಕ್ಕಿಗೆ ಕೆಲಕಾಲದ ಮೇಲೆ ತನ್ನ ಹಸಿವನ್ನು ಹಿಂಗಿಸುವ ಒಂದು ಉಪಾಯವು ತೋಚಿತು. ಆಗ ಆ ಬೆಕ್ಕು ಆ ಕಣ್ಣಿಕಪ್ಪಡಿಯು ಕಡೆಗೆ ನೋಡಿ:— “ ಇದು ಹಕ್ಕಿಯಿದೆಯೆಂದು ತಿಳಿದರೆ ಮಾತ್ರ ನನ್ನ ಪ್ರತಿಜ್ಞೆಗೆ ಭಂಗಬರುವದು; ಆದರೆ ಇದರ ಮುಸುಡವು ಇಲಿಯಂತೆ ಇರುವದರಿಂದ ಇದಕ್ಕೆ ಹಕ್ಕಿಯೆಂಬುವದಕ್ಕಿಂತ ಇಲಿಯೆಂದು ತಿಳಿದರೆ, ಆ ಮೇಲೆ ನನ್ನ ಪ್ರತಿಜ್ಞಾ ಹಾನಿಯ ಪ್ರಶ್ನೆಯೇ ಇಲ್ಲಿ ಬರುವದಿಲ್ಲ; ” ಎಂದು ಒಂದೇಸವನೇ ವಿಚಾರ ಮಾಡಿತು. ಕಡೆಗೆ ಆ ಕಣ್ಣಿಕಪ್ಪಡಿಯನ್ನು ಆ ಬೆಕ್ಕು ತಿಂದು ಬಾಯಿಚಪ್ಪರಿಸಿಬಿಟ್ಟಿತು.

ಸಾರಾಂಶ:— ಸ್ವಾರ್ಥ ಸಾಧಿಸುವ ಸಮಯವು ಬಂದಾಗ ನೀಚರು ತಮ್ಮ ಪ್ರತಿಜ್ಞೆಯನ್ನು ಯುಕ್ತಿಯಿಂದ ಅಥವಾ ಶಬ್ದಚ್ಛಲದಿಂದ ಹೇಗೆ ಒತ್ತಟ್ಟಿಗೆ ಕಟ್ಟಿಡುತ್ತಾರೆಂಬುವನ್ನು ಮೇಲಿನ ಉದಾಹರಣೆಯಿಂದ ತಿಳಿಯಬಹುದು.

---

## ೨೫೪:— ಕೋಗಿಲೆಯೂ ಗಿಳಿಯೂ ಹದ್ದೂ.

ಒಂದು ಬಡ ಸಾಧು ಕೋಗಿಲೆಗೆ ದೊಡ್ಡದೊಂದು ಹದ್ದಿನಿಂದ ಮರಣಭಯವು ಕಾಣಹತ್ತಿತು. ಯಾಕಂದರೆ ಆ ಹದ್ದು ಅದರ ನೆತ್ತಿಯ ಮೇಲೆ ತನ್ನ ಆಹಾರಕ್ಕೆಂದು ಆಕಾಶದಲ್ಲಿ ಸುತ್ತುವರಿಯುತ್ತಿತ್ತು. ಇದನ್ನು ನೋಡಿ ಒಂದು ಗಿಳಿಯು ಕೋಗಿಲೆಗೆ ಅಂದದ್ದು— “ ಹೀಗೆ ಬಾ ! ಗಾಬರಿಯಾಗಬೇಡ ! ಧೈರ್ಯವನ್ನು ಹಿಡಿ ! ಹದ್ದಿನ ಈ ಕಿಲಿಕಿಲಾಟವೂ ಸುತ್ತಾಟವೂ ಕೇವಲ ಮೂರ್ಖತನದ್ದಿದೆ, ಕಡೆಗೆ ಈ ಸೋಮಾರಿಯಾದ ಹದ್ದು ಒಂದು ಬಡ ಕಪ್ಪೆಯನ್ನೋ ಇಲಿಯನ್ನೋ ಹಿಡಿದದ್ದನ್ನು ನೀನೇ ನೋಡುವಿ ! ಆದರೆ ಗಿಡಗನು ನಿಜವಾಗಿಯೂ ಭಯಂಕರ ಪ್ರಾಣಿಯು; ಅದು ಏನೂ ಸಪ್ಪಳ ಮಾಡದೆ ಮೆಲ್ಲನೆ ಪಕ್ಷಿಗಳನ್ನು ಹಿಡಿಯುತ್ತದೆ; ” ಎಂದು ಧೈರ್ಯಕೊಟ್ಟಿತು.

ಸಾರಾಂಶ:— ಮಾತಾಡುವವನು ಮಾಡಲಾರನು; ಮೊರೆಯುವ ಮೋಡಗಳೆಲ್ಲ ಮಳೆ ಸುರಿಸಲಾರವು.

## ೨೫೭:— ಕುದುರೆಯೂ ಕತ್ತೆಯೂ.

ಒಬ್ಬ ರಾಹುತನ ಕುದುರೆಯೊಂದು ಜರದ ತಡಿಯನ್ನು ಬೆನ್ನಮೇಲಿಟ್ಟುಕೊಂಡು ಕಡಿವಾಣವನ್ನು ಕಡಿಯುತ್ತ ಘುರುಘುರಿಸುತ್ತ ಬೀದಿಯಲ್ಲಿ ನಡೆದಿತ್ತು. ಆಗದಕ್ಕೆ ಭಾರದಿಂದ ಬಗ್ಗಿಹೋಗಿ ಮೆಲ್ಲನೆ ಸಾಗಿರುವ ಕತ್ತೆಯೊಂದು ಕಂಡಿತು. ಕೂಡಲೇ ಗದ್ದರಿಸಿ, ಆ ಕುದುರೆಯು ಕತ್ತೆಗೆ:— "ಬದಿಗಾಗು! ಬದಿಗಾಗು! ಆಗದಿದ್ದರೆ ನನ್ನ ಕಾಲಿಗೆ ಸಿಕ್ಕು ನೀನು ಸತ್ತೇಹೋಗುವಿ ನೋಡು! ಎಂದು ಜಂಭದಿಂದ ಮಾತಾಡಿತು. ಪಾಪ! ಆ ಕತ್ತೆಯು ಕಾದಿ ಕಡೆಗಾಣುವಂತಿಲ್ಲೆಂದು ಕಂಡು, ಲಗುಬಗೆಯಿಂದ ಒಂದು ಕೆಲಕ್ಕೆ ಸರಿಯಿತು. ಮುಂದೆ ಕೆಲಕಾಲದಮೇಲೆ ಮತ್ತೊಮ್ಮೆ ಹೀಗೆ ಸಂಭವಿಸಿತು. ಆ ಕುದುರೆಗೆ ಕಾಳಗದಲ್ಲಿ ಕತ್ತಿಯು ತಗಲಿ ಒಡೆಯನ ಕೆಲಸವನ್ನು ಅದು ಮಾಡದಂತಾಗಲು, ಅದನ್ನು



ಆ ಒಡೆಯನು ಒಬ್ಬ ಬಾಡಿಗೆಯವನಿಗೆ ಮಾರಿಬಿಟ್ಟನು. ಆಗ ಆ ಕುದುರೆಯು ಒಜ್ಜೆಯನ್ನು ಹೊರಹತ್ತಿತು. ಅದು ಒಂದು ದೊಡ್ಡ ಕಂತೆಯನ್ನು ಹೊತ್ತುಕೊಂಡು ಬೀದಿಯಲ್ಲಿ ನಡೆದಿರುವದನ್ನು ಆ ಕತ್ತೆಯು ಕಂಡಿತು. ಆಗದು ಕುದುರೆಯನ್ನು ಕೂಗಿ ಕರೆದು:— "ರಾಯರೇ! ನಮಸ್ಕಾರ! ಯಾಕೆ! ನನ್ನನ್ನು ಕಾಲಲ್ಲಿ ತುಳಿದು ಬಿಡುವೆ

ನೆಂದ ಗೃಹಸ್ಥರು ತಾವೇ ಅಲ್ಲವೇ? ತಮ್ಮ ಸೊಕ್ಕು ಒಂದಿಲ್ಲೊಂದು ದಿನ ಇಳಿಯದೇ ಇರಲಿಕ್ಕಿಲ್ಲೆಂದು ನನಗೆ ಆಗಲೇ ಅನಿಸಿತ್ತು.

ತಾತ್ಪರ್ಯ:— ಯಾವನು ಸೊಕ್ಕಿನಿಂದ ದೊಡ್ಡಿತೆಯನ್ನು ಪಡೆಯಲು ಪ್ರಯತ್ನಿಸುವನೋ, ಅಂತಹನ ಅಂಗದಲ್ಲಿ ಶಕ್ತಿಯಿರುವವರೆಗೆ ಮಾತ್ರ ಅವನಿಗೆ ಸರ್ವರೂ ಬಾಗಿನಡೆಯುವರು. ಆದರೆ ಅವನು ನಿರ್ಬಲನಾದನೆಂದರೆ ಅವನ ಪಾಡು ಕಾಸಿಗೆ ಪಂಚ್ಛೇರಿನಂತಾಗುತ್ತದೆ.

———————

೨೫೮:— ಠಕ್ಕ ವೈದ್ಯನೂ ಕರಡಿಯೂ.

ಒಬ್ಬ ಠಕ್ಕ ವೈದ್ಯನು ಒಂದು ಜಾತ್ರೆಯಲ್ಲಿ, ತನ್ನ ಔಷಧಗಳನ್ನೂ ಗುಳಿಗೆಗಳನ್ನೂ ಜನರಿಗೆ ತೋರಿಸಲೆಂದು ಹೊರಗೆ ತೆಗೆದು ಕುಳಿತುಕೊಂಡಿರಲು ಸಾವಿರಾರು ಜನರು ಅವನ ಕಡೆಗೆ ಲಕ್ಷ್ಯಪೂರ್ವಕ ನೋಡಹತ್ತಿದರು. ಅವನ ನುಡಿಗಳನ್ನು ದೇವವಾಣಿಯಂತೆ ಕೇಳಿಕೊಳ್ಳಹತ್ತಿದರು. ಇಷ್ಟರಲ್ಲಿ ಒಬ್ಬ ಕರಡೀ ಕುಣಿಸುವವನು ಕರಡಿಯೊಂದರ ಮೂಗಿನಲ್ಲಿ ಬಳೆಯನ್ನು ಹಾಕಿ ಅದನ್ನು ಹಿಡಿದೊಯ್ಯುತ್ತಿದ್ದನು. ಈ ನವೀನ ನೋಟವನ್ನು ನೋಡಿ ಜನರ ಮನಸ್ಸು ಇತ್ತಕಡೆಗೆ ತಿರುಗಿತು. ಎಲ್ಲರೂ ಕರಡಿಯಿದ್ದಲ್ಲಿ ಕೂಡಿದರು. ದೊಡ್ಡದೊಂದು ಮೆರವಣಿಗೆಯಂತೆ ಜನರು ಆ ಕರಡಿಯ ಕೂಡ ಕೂಗುತ್ತ ಸಾಗಿದರು. ಕರಡಿಯು ಸ್ವಭಾವತಃ ಅಷ್ಟೊಂದು ಬುದ್ಧಿಯ ಪ್ರಾಣಿಯಲ್ಲ. ಆದರೂ ಜನರ ಈ ಕೂಗಾಟ ಮೊದಲಾದುದನ್ನು ನೋಡಿ ಅವರನ್ನು ಕುರಿತು ಕರಡಿಯು:— “ಮಿತ್ರರೇ! ಕೇಳಿರಿ! ಈ ಕರಡೀ ಕುಣಿಸುವವನು ನನ್ನ ಮೂಗಿನಲ್ಲಿ ಬಳೆಯನ್ನು ಹಾಕಿ ನನ್ನನ್ನು ತನಗೆ ಬೇಕಾದ ಕಡೆಗೆ ಹೊರಳಿಸುತ್ತಿರುವನೆಂದು ನೀವು ನಗುತ್ತಿರುವಿರಿ; ಇದನ್ನು ನೋಡಿ ನನಗೂ ಆನಂದವಾಗುತ್ತದೆ; ಯಾಕಂದರೆ ನಾವಿಬ್ಬರೂ ಪರಸ್ಪರರನ್ನು ಕಂಡು ಸರತಿಯ ಮೇಲೆ ನಗುವ ಪ್ರಸಂಗವು ಈಗ ಇದೆ; ನೋಡಿರಿ! ನೀವೂ ನನ್ನಷ್ಟೇ ಹಾಸ್ಯಾಸ್ಪದರಿರುತ್ತೀರಿ; ನನ್ನನ್ನು ಈ ಕರಡೀ ಕುಣಿಸುವವನು ನನ್ನ ಮೂಗಿನಲ್ಲಿ ಬಳೆಯನ್ನು ಹಾಕಿ ತಿರುಗಿಸುತ್ತಿರುವಂತೆ ನಿಮ್ಮನ್ನು ಆ ಠಕ್ಕ ವೈದ್ಯನು ಕಿವಿಯನ್ನು ಹಿಡಿದು ಕಂಡಕಂಡಕಡೆಗೆ ಹೊರಳಿಸುತ್ತಿರುವನು; ಇದಿಷ್ಟೇ ನಮ್ಮಿಬ್ಬರಲ್ಲಿ ಅಭ್ಯಂತರವು;” ಎಂದು ವಿಚಾರಪೂರ್ವಕವಾದ ಮಾತುಗಳಾಡಿತು.

ಸಾರಂಶ:— ತನ್ನಲ್ಲಿ ಅದೇ ದೋಷವು ಇಲ್ಲೆಂಬದನ್ನು ನಿಶ್ಚಯಮಾಡಿಕೊಳ್ಳದೆ ಅನ್ಯರ ದೋಷಕ್ಕೆ ನಗೆಮಾಡುವವನು ತಾನೂ ಜನರ ಉಪಹಾಸಕ್ಕೆ ಗುರಿಯಾಗುವನು. ಆದ್ದರಿಂದ ನಾವು ಯಾವದೇ ರೀತಿಯಿಂದಲೂ ಜನರಿಗೆ ನಗೆಯಾಡಲು ಹೋಗುವದು ತರವಲ್ಲ.

## ೨೫೯:— ತೋಳವೂ ಕುರಿಮರಿಯೂ.

ಸುತ್ತಲೂ ಬೇಲಿಯನ್ನು ಕಟ್ಟಿದ ಒಂದು ಹುಲ್ಲುಗದ್ದೆಯಲ್ಲಿ ಒಂದು ಕುರಿಯ ಹಿಂಡು ಮೇಯುತ್ತಿತ್ತು. ಕುರುಬನು ಒಂದು ಗಿಡದ ಬುಡದಲ್ಲಿ ಕೊಳಲು ನುಡಿಸುತ್ತ ಕುಳಿತಿದ್ದನು. ಅವನ ನಾಯಿಗಳು ಅಲ್ಲೇ ಸವಿಾಪದಲ್ಲಿ ನಿದ್ರಿಸುತ್ತಿದ್ದವು. ಆ ಸಮಯದಲ್ಲಿ ಹಸಿವಿನಿಂದ ಸಾಯಲಾದ ಒಂದು ತೋಳವು ಬೇಲಿಯ ಸಂದಿನೊಳಗಿಂದ ಒಳಗೆ ಹಣಿಕಿ ಹಾಕುತ್ತದೆಂಬದನ್ನು ಒಂದು ಕುರಿಮರಿಯು ಕಂಡಿತು. ಆಗ ಅದು ತೋಳಕ್ಕೆ:— 'ಎಲೇ! ಇಲ್ಲೇನು ನೋಡುತ್ತಿರುವಿ?" ಎಂದು ಕೇಳಿತು. ಅದಕ್ಕೆ ತೋಳವು:— "ಸ್ವಲ್ಪ ಎಳೆಹುಲ್ಲು ಯಥೇಷ್ಟವಾಗಿ ತಿಂದು, ಮೇಲೆ ಝರಿಯೊಳಗಿನ ನಿರ್ಮಲವಾದ ನೀರನ್ನು ಕುಡಿಯುವಂತಹ ಉತ್ತಮ ಭಕ್ಷ್ಯವೂ ಪೇಯವೂ ಮತ್ತೊಂದಿಲ್ಲ; ಈ ಎರಡೂ ಪದಾರ್ಥಗಳು ನಿನಗೆ ನಿತ್ಯವಾಗಿ ಸಿಗುವವು; ಅಂದಮೇಲೆ ನಿನ್ನ ಭಾಗ್ಯವು ಎಷ್ಟು ಬಣ್ಣಿಸಬೇಕು! ಯಾವ ಪದಾರ್ಥಗಳ ಲಾಭದ ಬಗ್ಗೆ ನಾನು ಸತತ ಪ್ರಯತ್ನ ಮಾಡುವೆನೋ ಆ ಪದಾರ್ಥಗಳು ನಿನಗೆ ಆಯತ್ತವಾಗಿ ಸಿಗುವದನ್ನು ನೋಡಿ ನನಗೆ ಅತ್ಯಂತ ಆನಂದವಾಗುತ್ತದೆ; ತನ್ನ ದೈವದಲ್ಲಿಲ್ಲದಿದ್ದರೂ ಅನ್ಯರ ಸುಖವನ್ನಾದರೂ ನೋಡಿ ಸಂತೋಷಿಸಬೇಕೆಂದು ಸತ್ಪುರುಷರ ಮತವಿದೆ;" ಎಂದು ಪ್ರತಿಮಾತಾಡಿತು. ಈ



ತೋಳದ ಪಾಂಡಿತ್ಯವನ್ನು ಕೇಳಿ ಕುರಿಮರಿಯು:— “ ಕೇವಲ ಎಳೆಹುಲ್ಲುನೀರುಗಳ ಮೇಲೆ ನಿನ್ನ ನಿರ್ವಾಹವು ಸಾಗುತ್ತಿದ್ದರೆ ನಿನ್ನನ್ನು ಮಾಂಸಭಕ್ಷಕನೆಂದು ಬಹು ಜನರು ದೂರುವದು ಒಳಿತಲ್ಲ; ಇನ್ನುಮುಂದೆ ನಾವಿಬ್ಬರೂ ಒಡಹುಟ್ಟಿದವರಂತೆ ಒಂದೆಡೆಯಲ್ಲಿಯೇ ಮೇಯುತ್ತ ಆನಂದದಿಂದಿರುವಾ; ” ಹೀಗೆ ಮಾತಾಡಿ ಆ ಅನುಭವವಿಲ್ಲ-ಹುಚ್ಚು ಕುರಿಮರಿಯು ಆ ಬೇಲಿಯ ಕಿಂಡಿಯೊಳಗಿಂದ ತೂರಿಕೊಂಡು ಈಚೆ ಬಂದಿತು. ಕೂಡಲೇ ಕೇಳುವದೇನು! ತೋಳವು ಬಾಯಿಚಪ್ಪರಿಸಿಬಿಟ್ಟಿತು.

ಸಾರಾಂಶ:— ವಂಚಕರಿಂದೂ ನೀಚರಿಂದೂ ಯಾರ ಪ್ರಸಿದ್ಧಿಯಿರುವದೋ ಅಂತಹರ ಶಬ್ದಪಾಂಡಿತ್ಯಕ್ಕೆ ಮರುಳಾಗಿ ಅವರ ಮೇಲೆ ನಂಬಿಗೆಯನ್ನಿಡುವದು ನಮ್ಮ ತರವಲ್ಲ. ಹಾಗೆ ಮಾಡಿದರೆ ನಾವು ನಮ್ಮ ಜೀವಕ್ಕೆ ಎರವಾದೆವೆಂದೇ ತಿಳಿಯಬೇಕು.

———————

## ೨೬೦:— ಒಕ್ಕಲಿಗನೂ ಅವನ ಆಳೂ.

ಒಬ್ಬ ಒಕ್ಕಲಿಗನ ಎತ್ತುಗಳು ಅವನ ಹೊಲದೊಳಗಿಂದ ಕಳೆದು ಹೋಗಿದ್ದವು; ಆತನು ತನ್ನ ಆಳನ್ನು ಅವನ್ನು ಹುಡುಕಲೆಂದು ಕಳುಹಿದನು. ಆ ಮೂರ್ಖ ಆಳು ಆ ಎತ್ತನ್ನು ಬೆನ್ನಟ್ಟುತ್ತ ಒಂದು ಅಡವಿಗೆ ಬಂದು ಮುಟ್ಟಿದನು. ಆ ಮೇಲೆ ಮಾರ್ಗದಲ್ಲಿ ಬೀದಿಯಲ್ಲಿಂದ ಮೂರು ಹಕ್ಕಿಗಳು ಹಾರಿಹೋದವು. ಅವುಗಳ ಬೆನ್ನುಹತ್ತಿ ಆಳುಮಗನೂ ಮತ್ತೆ ಓಡಿಹೋದನು. ತನ್ನ ಆಳುಮಗನು ಬರಲು ಇಷ್ಟು ತಡವಾದದ್ದಕ್ಕೆ ಒಕ್ಕಲಿಗನು ಅಚ್ಚರಿಗೊಂಡನು. ಆಗ ಅವನೇ ಸ್ವತಃ ಎತ್ತುಗಳನ್ನು ನೋಡಲು ಹೋಟನು. ಆಗ ತನ್ನ ಆಳು ಆಕಾಶದ ಕಡೆಗೆ ಮೋರೆಮಾಡಿಕೊಂಡು ಒಂದೇಸವನೇ ಓಡುತ್ತಿರುವದನ್ನು ಆ ಒಕ್ಕಲಿಗನು ಕಂಡನು. ಆ ಮೇಲೆ ಅವನು ಆ ಆಳುಮಗನಿಗೆ:— “ ಎಲೋ! ಏನು ಸುದ್ದಿ ಅಯ್ಯಾ? ” ಎಂದು ಕೇಳಿದನು. ಅದಕ್ಕೆ ಆಳುಮಗನು:— “ ಸ್ವಾಮಿ! ಅವು ಸಿಕ್ಕಲಿಲ್ಲ! ” ಎಂದು ಉತ್ತರಕೊಟ್ಟನು. ಒಡೆಯನು:— “ ಏನಯ್ಯಾ! ಯಾರು? ” ಎಂದು ಕೇಳಲು, ಆ ಮೂರ್ಖ ಆಳು:—“ ಅಕ್ಕೋ ನೋಡಿರಿ! ಮೂರು ಹಕ್ಕಿಗಳು ಆಕಾಶದಲ್ಲಿ ಹಾರುತ್ತವೆ; ಆದರೆ ನನಗೇನು ಅವನ್ನು ಹಿಡಿಯಲು ಆಗಲೊಲ್ಲದು; ” ಎಂದಂದನು. ಆಗ ಒಕ್ಕಲಿಗನು ಆ ಆಳುಮಗನನ್ನು ಚನ್ನಾಗಿ ಹೊಡೆದು ಅಲ್ಲದ ಕಾರ್ಯವನ್ನು ಮಾಡಬೇಡವೆಂದು, ನಿಯಮಿಸಿದ ಕೆಲಸಕ್ಕೆ ಅವನನ್ನು ತೊಡಗಿಸಿದನು.

ತಾತ್ಪರ್ಯ:— ಅಲ್ಲದ ಸಲ್ಲದ ಕೆಲಸದಲ್ಲಿ ತೊಡಗಿ ಅನೇಕರು ತಮ್ಮ ಕರ್ತವ್ಯವನ್ನು ಮರೆತುಬಿಡುತ್ತಾರೆ.

## ೨೬೧:— ರಾಹುತನೂ ಆತನ ಕುದುರೆಯೂ.

ಒಬ್ಬ ರಾಹುತನು ತನ್ನ ಕುದುರೆಯ ಮೈ ತಿಕ್ಕಿ ಅದರ ಮೇಲೆ ತಡಿಯನ್ನು ಹಾಕುತ್ತಿರಲು ಅವನಿಗೆ ಅದಗ ಒಂದು ಕಾಲೊಳಗಿನ ನಾಲಿನ ಒಂದು ಮೊಳೆಯು ಕಳಚಿ ಬಿದ್ದಿರುವದು ಕಾಣಿಸಿತು. ಆದರೆ ಮತ್ತೊಂದು ಮೊಳೆಯನ್ನು ಅದರ ಬದಲು ಒಡಿಯುವದನ್ನು ಅವನು ಕೊಂಚ ವಿಲಂಬ ಮಾಡಿದನು. ಕೆಲವು ವೇಳೆಗೆ ರಣಭೇರಿಗಳ ವಾದ್ಯವಾಗ ಹತ್ತಿ ಯುದ್ಧಕ್ಕೆ ಕರೆವು ಆಯಿತು. ಆ ಕೂಡಲೇ ರಾಹುತನು ಕುದುರೆಯನ್ನು ಹತ್ತಿ ರಣಭೂಮಿಯ ಕಡೆಗೆ ಸಾಗಿದನು. ಆಗ ಅವನು ಯಾವ ಸೈನ್ಯದ ತುಡಕ್ಕೆ ಸೇರಿದ್ದನೋ ಆ ಸೈನ್ಯದ ಸೇನಾಪತಿಯು ಎಲ್ಲರೂ ತಮ್ಮ ಕುದುರೆಗಳನ್ನು ಒತ್ತರದಿಂದ ಓಡಿಸಿ ಶತ್ರುಗಳ ಮೇಲೆ ಬಿದ್ದು ಅವರನ್ನು ಬೆನ್ನಟ್ಟಬೇಕೆಂದು ಅಪ್ಪಣೆಯನ್ನು ಕೊಟ್ಟನು. ಅಪ್ಪಣೆಯಂತೆ ರಾಹುತನು ತನ್ನ ಕುದುರೆಯನ್ನು ಹಾರಿಸುತ್ತ ನಡೆದಿರಲು ಮೊಳೆಯು ಸಡಿಲಾದ್ದರಿಂದ ಕುದುರೇ ಕಾಲಲ್ಲಿಯ ನಾಲು ಕಳಚಿ ಬಿದ್ದು ಅದು ಕುಂಟಹತ್ತಿತು. ಕಡೆಗೆ ಅದು ಕುಂಟುತ್ತ ಕುಂಟುತ್ತ ಕಾಲನ್ನು ಒಂದು ಕಲ್ಲಮೇಲೆ ಅಪ್ಪಳಿಸಲು ಮೇಲಿನ ರಾಹುತನು ಕುದುರೆಯ ಮೇಲಿಂದ ಕೆಳಗೆ ಬಿದ್ದು ಶತ್ರುಗಳ ವಶನಾಗಲು, ಅವರು ಅವನ ಮುಂಡವನ್ನು ಹಾರಿಸಿ ಬಿಟ್ಟರು.



ತಾತ್ಪರ್ಯ:— ಆ ಆ ಕಾರ್ಯಗಳನ್ನು ಆಯಾ ಕಾಲದಲ್ಲಿ ಮಾಡುವದೇ ಮನುಷ್ಯನಿಗೆ ಮೇಲು. ಅಲ್ಲದೆ ಆಲಸ್ಯದಿಂದ ಕೆಲಸವನ್ನು ಮುಂದೆ ಹಾಕಿದರೆ ಘಾತಕವು ತಪ್ಪಿದ್ದೇ ಅಲ್ಲ. ————————

## ೨೬೨:— ಕನಸು ಕಂಡ ಹಾದಿಕಾರನು.

ಮೂವರು ಅಡವಿಯೊಳಗಿಂದ ಪ್ರವಾಸವನ್ನು ಮಾಡುತ್ತಿದ್ದರು. ಒಮ್ಮೆ ಅವರಿಗೆ ಅವರ ಗೊತ್ತಿಗಿಂತಲೂ ಹೆಚ್ಚು ದೂರದ ಪ್ರವಾಸವಾಯಿತು. ಹತ್ತರದಲ್ಲಿಯ ಸಾಧನೆಗಳು ತೀರಿದವು. ಒಬ್ಬನಿಗೆ ಸಾಕಷ್ಟೇ ಸಾಧನೆಗಳು ಉಳಿದವು. ಆಗ ಉಳಿದ ಸಾಧನೆಗಳನ್ನು ದೊರಕಿಸುವದು ಎಂತೆಂದು ಮೂವರೂ ವಿಚಾರಿಸಿ ನೋಡಿದರು. ಒಬ್ಬನು:— "ಮೂವರೂ ಮಲಗಬೇಕು: ಯಾರಿಗೆ ಚಮತ್ಕಾರವಾದ ಕನಸು ಕಾಣುವದ್ರೋ ಅವರು ಉಳಿದಿಬ್ಬರಿಗೆ ಸಾಧನೆಗಳನ್ನು ಒದಗಿಸಿಕೊಡಬೇಕು;" ಎಂದು ಮಾತಾಡಿದನು. ಇದಕ್ಕೆ ಸರ್ವರೂ ಸಮ್ಮತಿಸಿ ಎಲ್ಲರೂ ನಿದ್ರೆಹೋದರು. ಮಧ್ಯರಾತ್ರಿಯಾದಾಗ್ಗೆ ಇಬ್ಬರು ಎದ್ದು ಪರಸ್ಪರರಿಗೆ ತಮ್ಮ ತಮ್ಮ ಕನಸುಗಳನ್ನು ಹೇಳಹತ್ತಿದರು. ಒಬ್ಬನು:— "ಆಹಹ! ಏನು ಹೇಳಲಿ! ನನಗೆ ಏನು ವಿಲಕ್ಷಣ ಕನಸು ಬಿದ್ದಿತ್ತಯ್ಯಾ! ನನ್ನನ್ನು ಯಾರೋ ಇಂದ್ರನ ಸಿಂಹಾಸನದ ಮೇಲೆ ಎತ್ತಿ ಒಯ್ದು ಕುಳ್ಳಿರಿಸಿದಂತೆ ನನಗೆ ತೋರಿತು," ಎಂದಂದನು. ಮತ್ತೊಬ್ಬನು:— 'ನಾನಂತೂ ಗಾಳಿಯ ಬಲದಿಂದ ಯಮನ ಬಾಗಿಲಿಗೇ ಹಾರಿಹೋಗಿ ಬಿದ್ದಂತೆ ಕನಸುಕಂಡೆನು." ಎಂದು ನುಡಿದನು. ಮೂರನೇಯವನು ಈ ಎಲ್ಲ ಸಂಗತಿಯನ್ನು ಹಾಸಿಗೆಯೊಳಗಿಂದಲೇ ಕೇಳುತ್ತಲಿದ್ದನು. ಅವನಿಗೆ ಈ ಇಬ್ಬರೂ ಆತನ ಕನಸನ್ನು ಹೇಳಲಿಕ್ಕೆ ಒಲುಮೆಪಡಿಸಿದರು. ಆಗ ಅವನು ಒಮ್ಮೆಲೆ ಗಟ್ಟಿಯಾಗಿ ಕೂಗಿ:— "ಏ! ಸುಮ್ಮನಾಗಿರೋ! ನೀವಾರಾದರೂ ಇರಬಹುದು! ಆದರೆ ದಯವಿಟ್ಟು ಸುಮ್ಮನಾಗಿರಿ!" ಇದನ್ನು ಕೇಳಿ ಆ ಇಬ್ಬರು:— "ಹೀಗೆಕಯ್ಯಾ! ನಾವು ನಿನ್ನ ಸಂಗಡಿಗರಲ್ಲವೇ?" ಆಗವನು:— "ಏನು ನೀವೆಂದು ಬಂದಿರಿ?" ಇದಕ್ಕೆ ಅವರಿಬ್ಬರು:— "ನಾವು ಇಲ್ಲಿಂದ ಎಲ್ಲಿಯೂ ಕದಲಲಿಲ್ಲಯ್ಯಾ!" ಆ ಮೂರನೆಯವನು:— "ಓಹೋ! ಹೀಗೋ ಹಾಗಾದರೆ, ನಾನು ಕನಸು ಕಂಡಿರಬಹುದು! ನಿಮ್ಮಲ್ಲಿಯ ಒಬ್ಬನನ್ನು ಇಂದ್ರನ ಸಿಂಹಾಸನಕ್ಕೂ, ಎರಡನೆಯವನನ್ನು ಯಮನ ಬಾಗಿಲಲಿಗೂ ಒಯ್ದಂತೆ ನನಗೆ ಕಾಣಿಸಿತು; ಆದ್ದರಿಂದ ನೀವು ತಿರುಗಿ ಬರಲಿಕ್ಕಿಲ್ಲೆಂದು ಭಾವಿಸಿ ನಾನು ಉಳಿದ ಅನ್ನವನ್ನೆಲ್ಲ ತಿಂದು ಬಿಟ್ಟೆನು" ಎಂದು ಹೇಳಿದನು.

ಸಾರಾಂಶ:— ಮೂರ್ಖರಾದವರನ್ನು ವಂಚಕರು ಹೇಗೆ ಮರುಳುಗೊಳಿಸುತ್ತಾರೆಂಬದನ್ನು ನೋಡಿರಿ. ————————